



# ಕರ್ನಾಟಕದ ಶಿಕ್ಷಣ ಪರಂಪರೆ

## ಸಚಿತ್ರ ವಿವೇಚನೆ





ಡಾ. ಜ್ಯೋತ್ಸ್ನಾ ಕಾಮತ

ಜ್ಯೋತ್ಸ್ನಾ ಕಾಮತರು ಹುಟ್ಟಿದ್ದು 1937ರಲ್ಲಿ, ಮಹಾರಾಷ್ಟ್ರದ ವಾಯಿ ಎಂಬಲ್ಲಿ. ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಿಂದ ಎಂ.ಎ. ಪದವೀಧರರಾದ ಅವರು ಅದೇ ವಿಶ್ವವಿದ್ಯಾಲಯದಿಂದ ಪಿಎಚ್.ಡಿ. ಪದವಿಯನ್ನೂ ಪಡೆದವರು. 1964ರಲ್ಲಿ ಲೋಕ ಸೇವಾ ಆಯೋಗದಿಂದ ಆಯ್ಕೆಗೊಂಡು ಆಕಾಶವಾಣಿಯಲ್ಲಿ ಒಬ್ಬ ಅಧಿಕಾರಿಯಾಗಿ ಕಾರ್ಯ ನಿರ್ವಹಿಸಿದವರು; ಧಾರವಾಡ, ಜಯಪುರ, ಮೈಸೂರು, ಕೋಲ್ಕತಾ, ಮುಂಬೈ ಆಕಾಶವಾಣಿ ಕೇಂದ್ರಗಳಲ್ಲಿ ಸೇವೆ ಸಲ್ಲಿಸಿ, ಬೆಂಗಳೂರು ಆಕಾಶವಾಣಿ ಕೇಂದ್ರದ ನಿರ್ದೇಶಕಿಯಾಗಿ 1994ರಲ್ಲಿ ನಿವೃತ್ತರಾದವರು. ಮೊದಲಿನಿಂದಲೂ ಬರವಣಿಗೆಯಲ್ಲಿ, ಇತಿಹಾಸ ಸಂಶೋಧನೆಯಲ್ಲಿ, ಪ್ರವಾಸದಲ್ಲಿ ಆಸಕ್ತರಾದ ಅವರು ಕೊಂಕಣಿ, ಕನ್ನಡ, ಹಿಂದಿ, ಮರಾಠಿ, ಬಂಗಾಲಿ, ಸಂಸ್ಕೃತ, ಇಂಗ್ಲಿಷ್ ಭಾಷೆಗಳಲ್ಲಿ ವಿಶೇಷ ಪರಿಶ್ರಮ ಉಳ್ಳವರು. ಪ್ರಖ್ಯಾತ ಲೇಖಕ ದಿ. ಕೃಷ್ಣಾನಂದ ಕಾಮತರು ಅವರ ಪತಿ.

ಜ್ಯೋತ್ಸ್ನಾ ಕಾಮತ ಅವರು ಕನ್ನಡ, ಇಂಗ್ಲಿಷ್ ಮತ್ತು ಕೊಂಕಣಿ ಭಾಷೆಗಳಲ್ಲಿ ರಚಿಸಿರುವ ಅನೇಕ ಕೃತಿಗಳಲ್ಲಿ **ಕರ್ನಾಟಕದ ಶಿಕ್ಷಣ ಪರಂಪರೆ, ಕರುನಾಡ ಜನಜೀವನ** (ಸಂಶೋಧನೆ), **ಹೀಗಿದ್ದೇವೆ ನಾವು, ನಗೆ ಕೇದಿಗೆ, ನಗೆ ನವಿಲು** (ವಿನೋದ ಲೇಖನಗಳ ಸಂಕಲನಗಳು), **ನೆನಪಿನಲಿ ನಿಂದವರು** (ವಿವಿಧ ಕ್ಷೇತ್ರಗಳ ಸಾಧಕಿಯರ ಪರಿಚಯ), **ಕಮಲಾದೇವಿ ಚಟ್ಟೋಪಾಧ್ಯಾಯ** (ಜೀವನ ಚಿತ್ರ), **ಮಹಿಳೆ ಅಂದು-ಇಂದು, ಕೈಗನ್ನಡಿಯಲ್ಲಿ ಕನ್ನಡತಿ, Social Life in Medieval Karnataka, Education in Karnataka Through the Ages, ಸುರಗ್ಯಾ ಸರ** (ಕೊಂಕಣಿ) ಮುಖ್ಯವಾದವು. ಅವರು ಸಂಪಾದಿಸಿರುವ ಮಹತ್ವದ ಕೃತಿಗಳೆಂದರೆ **ಕಮ್ಮಟಿಗ** (ಕೃಷ್ಣಾನಂದ ಕಾಮತರ ಸ್ಮಾರಕ ಸಂಪುಟ), **ಹೀಗಿದ್ರು ನಮ್ ಕಮ್ತಿ** (ಕೃಷ್ಣಾನಂದ ಕಾಮತರ ವ್ಯಕ್ತಿತ್ವ ಮತ್ತು ಸಾಹಿತ್ಯ ಪರಿಚಯ), **ಪತ್ರಪರಾಚಿ** (ಕೃಷ್ಣಾನಂದ ಕಾಮತರು ಅಮೆರಿಕದಲಿದ್ದ ತಮ್ಮ ಮಗನಿಗೆ ಬರೆದ ಪತ್ರಗಳು) ಮತ್ತು **ಪರಿಸರ ಪರ್ಯಟನ** (ಕೃಷ್ಣಾನಂದ ಕಾಮತರ 75ನೇ ಹುಟ್ಟುಹಬ್ಬದ ನೆನಪಿನ ಸಂಪುಟ).

ಜ್ಯೋತ್ಸ್ನಾ ಕಾಮತರು ಪಡೆದಿರುವ ಅನೇಕ ಪ್ರಶಸ್ತಿ, ಪುರಸ್ಕಾರಗಳಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಶಾಶ್ವತೀ ಪ್ರತಿಷ್ಠಾನದ ಸದೋದಿತಾ ಪ್ರಶಸ್ತಿ, ಧರ್ಮಸ್ಥಳದ ಸರ್ವಧರ್ಮ ಸಮ್ಮೇಳನದ ಸಾಹಿತ್ಯ ಪುರಸ್ಕಾರ, ಕೆ. ಶಾಮರಾವ್ ಪ್ರಶಸ್ತಿ, ಮೈಕೊ ಕನ್ನಡ ಬಳಗದ ರೆವರೆಂಡ್ ಕಿಟ್ಟೆಲ್ ಪ್ರಶಸ್ತಿ, ಕೊಂಕಣಿ ಸಾಹಿತ್ಯಕ್ಕಾಗಿರುವ ಡಾ. ಟಿ.ಎಂ.ಎ. ಪೈ ಪ್ರಶಸ್ತಿ ಮುಖ್ಯವಾದವು. 2008ರಲ್ಲಿ ನಡೆದ ಮಲ್ಲೇಶ್ವರಂ ವಿಧಾನಸಭಾ ಸಾಹಿತ್ಯ ಪರಿಷತ್ ಅಧಿವೇಶನದ ಅಧ್ಯಕ್ಷೀಯ ಗೌರವಕ್ಕೂ ಪಾತ್ರರಾದವರು ಅವರು.

ರಾಜ್ಯ ಸಾಹಿತ್ಯ ಅಕಾಡೆಮಿಯಿಂದ ೧೯೮೮ನೇ ವರ್ಷದ
ಅತ್ಯುತ್ತಮ ಸೃಜನೇತರ ಕೃತಿಯೆಂದು ಪುರಸ್ಕೃತ

# ಕರ್ನಾಟಕದ ಶಿಕ್ಷಣ ಪರಂಪರೆ

## ಸಚಿತ್ರ ವಿವೇಚನೆ

ಜ್ಯೋತ್ಸ್ನಾ ಕಾಮತ
ಚಿತ್ರಸಂಪದ: ಡಾ. ಕೃಷ್ಣಾನಂದ ಕಾಮತ



ವಸಂತ ಪ್ರಕಾಶನ
ನಂ. 360, 10ನೇ 'ಬಿ' ಮುಖ್ಯರಸ್ತೆ
3ನೇ ಬ್ಲಾಕ್ ಜಯನಗರ, ಬೆಂಗಳೂರು-560 011

*KARNATAKADA SHIKSHANA PARAMPARE* (Kannada) :
Tradition of education in Karnataka by Dr. Jyotsna Kamat; published by
Vasantha Prakashana, No. 360, 10th B Main, Jayanagar, 3rd Block,
Bangalore - 560 011, India Telephone: 080-22443996;
email: info@vasanthaprakashana.com
website : www.vasanthaprakashana.com

First published 1988
Second Print 2013


ISBN : 978-93-83052-60-8

ಸಾಹಿತ್ಯ ಸಲಹೆಗಾರರು : ಎಸ್. ದಿವಾಕರ್

ಪ್ರಥಮ ಮುದ್ರಣ : 1988
ಎರಡನೆಯ ಮುದ್ರಣ : 2013
ಉಪಯೋಗಿಸಿದ ಕಾಗದ: 70 ಜಿಎಸ್‌ಎಂ ಮ್ಯಾಪ್‌ಲಿಥೊ
ಪುಟಗಳು: 184 [142+42 (ಕಪ್ಪು-ಬಿಳುಪು ಚಿತ್ರಗಳನ್ನುಳ್ಳ ಆರ್ಟ್‌ಪೇಪರ್ ಪುಟಗಳು)]
ಬೆಲೆ : ರೂ. 140

ಮುಖಪುಟ ವಿನ್ಯಾಸ : ರಘು ಅಪಾರ
ಅಕ್ಷರ ಜೋಡಣೆ : ಶ್ರೀಧರ್
ಮುದ್ರಣ: ಶ್ರೀರಂಗ ಪ್ರಿಂಟರ್ಸ್, ಬೆಂಗಳೂರು

ಇತಿಹಾಸದಲ್ಲಿ ಆಸಕ್ತಿ ಅರಳಿಸಿದ
ಪೂಜ್ಯ ಗುರು

**ಡಾ. ಜಿ.ಎಸ್. ದೀಕ್ಷಿತರಿಗೆ**
(೧೯೧೧-೨೦೦೪)



# ಹಿನ್ನೆಲೆಯಾಗಿ

ಮುಂಬಯಿ ವಿಶ್ವವಿದ್ಯಾಲಯದ ಕನ್ನಡ ವಿಭಾಗದಿಂದ ಕರ್ನಾಟಕದ ಶಿಕ್ಷಣ ಪರಂಪರೆಯ ಕುರಿತು ಎರಡು ಸಂಶೋಧನಾ ಪ್ರಬಂಧಗಳನ್ನು ಮಂಡಿಸಲು ಆಮಂತ್ರಣ ಬಂದಾಗ, ಈ ಕ್ಷೇತ್ರದಲ್ಲಿ ಮಾಹಿತಿಯ ಕೊರತೆ ಎಷ್ಟೊಂದು ಇದೆ! ಎಂದು ಅರಿಯುವಂತಾಯಿತು. ಅಂತೆಯೇ ಸಂಸ್ಕೃತ, ಪ್ರಾಕೃತ, ಕನ್ನಡ, ಇಂಗ್ಲಿಷ್ ಭಾಷೆಗಳಲ್ಲಿದ್ದ ಆಧಾರ ಗ್ರಂಥಗಳ ಜೊತೆಗೆ, ಹಲವಾರು ಕನ್ನಡ ಕಾವ್ಯಗಳನ್ನು ಅಭ್ಯಸಿಸಬೇಕಾಯಿತು. ಶಾಸನಗಳನ್ನು ಬರೆಸಿದ ಆಶ್ರಯದಾತರನ್ನು, ಅರಸರನ್ನು, ತುಂಡರಸರನ್ನು, ಕವಿಗಳಾಗಿದ್ದವರು ಅತಿಯಾಗಿ ಹೊಗಳಿದ್ದರಿಂದ, ಅವುಗಳಲ್ಲಿ ಲಭ್ಯವಿರುವ ಮಾಹಿತಿಯನ್ನು ಒರೆಗಲ್ಲಿಗೆ ಹಚ್ಚಿ ಬಳಸಿಕೊಳ್ಳಬೇಕಾಯಿತು. ವಿದೇಶೀಯರು ಬರೆದಿಟ್ಟ ಮಾಹಿತಿ, ಎರವಲು ಅಥವಾ ಇನ್ನೊಬ್ಬರಿಂದ ಕೇಳಿ ತಿಳಿದುಕೊಂಡದ್ದೊ, ಕೇವಲ ಕಣ್ಣಿಂದ ನೋಡಿ ಅರಿತುಕೊಂಡದ್ದೊ ಆದ್ದರಿಂದ, ಅದರ ಸತ್ಯಾಸತ್ಯತೆಗಳನ್ನು ಕಂಡುಕೊಳ್ಳಲು ಹೆಣಗಬೇಕಾಯಿತು. ಕೈಫಿಯತ್ತು, ಬಖೈರುಗಳನ್ನು ತಿರುವಿ ಹಾಕಬೇಕಾಯಿತು. ವಿವಿಧ ದೇವಾಲಯಗಳಲ್ಲಿ ಈಗಲೂ ಅಚ್ಚಳಿಯದೇ ಉಳಿದು ಬಂದ ಭಿತ್ತಿಚಿತ್ರ, ಶಿಲ್ಪಗಳು ಕೆಲಮಟ್ಟಿಗೆ ಸಹಾಯ ನೀಡಿದವು. ಈ ಪ್ರಬಂಧಗಳು ಹಲವರ ಮೆಚ್ಚಿಗೆಗೆ ಪಾತ್ರವಾದವಲ್ಲದೇ, ಕನ್ನಡ ವಿಭಾಗದ ಮುಖ್ಯಸ್ಥರಾದ ಡಾ॥ ಶ್ರೀನಿವಾಸ ಹಾವನೂರರು ಈ ವಿಷಯದ ಮೇಲೆ ಒಂದು ಪುಸ್ತಕವನ್ನೇ ಬರೆದದ್ದಾದರೆ, ಮುಂಬಯಿ ವಿಶ್ವವಿದ್ಯಾಲಯ ಅದನ್ನು ಪ್ರಕಟಿಸುವದು, ಎಂದು ಹೆಚ್ಚಿನ ಸಂಶೋಧನೆಗೆ ಆಹ್ವಾನವಿತ್ತರು. ಈ ಸದವಕಾಶವನ್ನು ಹುಸಿಹೋಗಗೊಡಬಾರದೆಂದು, ಛಲದಿಂದ ಬೆನ್ನು ಮುರಿದು ಹಗಲು-ರಾತ್ರಿ ದುಡಿದಾಗಲೇ ಈ ಕೃತಿ ಸಾಧ್ಯವಾಯಿತು.

ಕನ್ನಡ ನಾಡಿನ ಶಿಕ್ಷಣ ಪದ್ಧತಿ ನಡೆದು ಬಂದ ದಾರಿ ಅತ್ಯಂತ ವಿಸ್ಮಯಕಾರಿ. ಅದರ ಹೆಜ್ಜೆಗಳನ್ನು ಕ್ರಿಸ್ತಶಕಪೂರ್ವ ಮೂರನೆಯ ಶತಮಾನದಿಂದಲೇ ಗುರುತಿಸಬಹುದಾಗಿದೆ. ಮೊದಲು ಮೌಖಿಕವಾಗಿಯೇ ಮುಂದುವರಿದ ಶಿಕ್ಷಣ, ಭಾಷೆ, ಅಕ್ಷರಗಳ ಉದಯ ಮತ್ತು ಬೆಳವಣಿಗೆಯೊಂದಿಗೆ ಲಿಖಿತ ರೂಪವನ್ನು ತಾಳಿತು. ಮಳಲು, ತಾಳೆಗರಿ, ಕಡತಗಳನ್ನು ಶಿಕ್ಷಣಕ್ಕಾಗಿ ಅಳವಡಿಸಿಕೊಂಡದ್ದರಿಂದ ಅದರ ಪ್ರಸಾರ, ವ್ಯಾಪ್ತಿಗಳು ಸಾಧ್ಯವಾದವು. ಕೇವಲ ಅಕ್ಷರಾಭ್ಯಾಸವನ್ನೆ ಶಿಕ್ಷಣವೆಂದು ಹಿಂದಿನವರು ಪರಿಗಣಿಸಿರಲಿಲ್ಲ. ವ್ಯಕ್ತಿಯ ಹೊಣೆಗಾರಿಕೆಗಳು ವಿದ್ಯಾಮಾಪನದ ಪ್ರಕಾರಗಳಾಗಿದ್ದವು. ಅಂತೆಯೇ ಗುರುಹಿರಿಯರ ಮೂಲಕ ಸಂಘ-ಸಂಸ್ಥೆಗಳು, ಮಠ-ದೇವಾಲಯಗಳು ಅಂಥ ಗಟ್ಟಿಯಾದ ವಿದ್ಯಾದಾನದ ಏರ್ಪಾಡು ಮಾಡಿಕೊಂಡವು. ವಚನಕಾರರು, ಹರಿದಾಸರು, ಕೀರ್ತನಕಾರರು, ಪೌರಾಣಿಕರು ಕೂಡ ಒಳ್ಳೆಯ

ಶಿಕ್ಷಕರೆನಿಸಿಕೊಂಡರು. ವೃತ್ತಿಶಿಕ್ಷಣ ಮತ್ತು ತರಬೇತಿಗಳಲ್ಲಿ ತಂದೆಯೇ ಮುಖ್ಯ ಪಾತ್ರವಹಿಸಿದರೆ, ಉತ್ತಮ ಗೃಹಸ್ಥ-ಗೃಹಿಣಿಯಾಗಿ ಬಾಳುವದರಲ್ಲಿ ತಾಯಿ ಸಕ್ರಿಯ ಸಹಾಯ ಮಾಡುತ್ತಿದ್ದಳು. ಇದರಿಂದ ಜನಸಾಮಾನ್ಯರಿಗೂ ಹಸನಾದ ಬಾಳು ಬಾಳಲು ಮಾರ್ಗದರ್ಶನ ದೊರಕುವಂತಾಯಿತು. ಅಂತೆಯೇ ಶಿಕ್ಷಣದ ಧ್ಯೇಯ ಇಡಿಯ ಸಮಾಜಕ್ಕೇ ಸಹಾಯ ನೀಡುವಂತೆ ರೂಪಗೊಂಡಿತ್ತು.

ಆದರೆ ದುರ್ದೈವದಿಂದ ಬ್ರಿಟಿಷ್ ಆಡಳಿತಗಾರರಿಗೆ ದೇಶಿ ಶಿಕ್ಷಣ ಪದ್ಧತಿಯ ಆಳದ ಅರಿವು ಆಗಲೇ ಇಲ್ಲ. ಅಂತೆಯೇ ಕಟ್ಟಡ, ಪರಿಕರಗಳು, ಸಿಬ್ಬಂದಿ ಮುಂತಾದವುಗಳಿಂದ 'ಸುಸಜ್ಜಿತ'ವಾದ ತಮ್ಮ ಪದ್ಧತಿಯ ಶಿಕ್ಷಣವನ್ನು ಭಾರತೀಯರಿಗೆ ಕೊಡಲು ನಿರ್ಧರಿಸಿದರು. ಲಾರ್ಡ್ ವಿಲಿಯಂ ಬೆಂಟಿಂಕ್‌ನು ಭಾರತದ ಗವರ್ನರ್ ಜನರಲ್‌ನಾಗಿ ಕ್ರಿ.ಶ.೧೮೨೮ರಲ್ಲಿ ಅಧಿಕಾರ ವಹಿಸಿಕೊಂಡಾಗ ಭಾರತೀಯರಿಗೆ ಪಾಶ್ಚಾತ್ಯ ಶಿಕ್ಷಣ ವ್ಯವಸ್ಥೆಯ ನಾಂದಿಯಾಯಿತು. ಲಾರ್ಡ್ ಮೆಕಾಲೆ ಮತ್ತು ಭಾರತದ ಶ್ರೇಷ್ಠ ಧೀಮಂತರಾಗಿದ್ದ ರಾಜಾರಾಮ ಮೋಹನರಾಯ್ ರಂಥವರು ಈ ಯತ್ನಕ್ಕೆ ಬೆಂಬಲ ಕೊಟ್ಟಿದ್ದರಿಂದ ರಾಜ್ಯಾಡಳಿತವನ್ನು ಸುಸೂತ್ರವಾಗಿ ನಡೆಸಿಕೊಂಡು ಹೋಗಲು ಸುಶಿಕ್ಷಿತರ ನೆರವು ಸಿಗುವಂತೆ ಶಿಕ್ಷಣವನ್ನು ರೂಪಿಸಿದ್ದು ಆಯಿತು. ಈ ಶಿಕ್ಷಣದ ಗರಡಿಯಲ್ಲಿ ಪಳಗಿದ ಗೋಪಾಲಕೃಷ್ಣ ಗೋಖಲೆ, ಲೋಕಮಾನ್ಯ ತಿಲಕ್, ಮೋತಿಲಾಲ ನೆಹರೂ, ಮಹಾತ್ಮಾ ಗಾಂಧಿ, ಸುಭಾಸಚಂದ್ರ ಬೋಸ್, ಜವಾಹರಲಾಲ ನೆಹರೂ, ಡಾ।ಬಿ.ಆರ್. ಅಂಬೇಡ್ಕರ್ ಮೊದಲಾದವರು ಭಾರತೀಯರ ಹಕ್ಕು ಬಾಧ್ಯತೆ-ದೇಶಾಭಿಮಾನಗಳನ್ನು ಅರಳಿಸುವದರಲ್ಲಿ ಯಶಸ್ವಿಯಾದರು. ಇದರಿಂದ ನಾವು ಯಾರಿಗೂ ಬಗ್ಗಬೇಕಾಗಿಲ್ಲ ಎಂಬ ಆತ್ಮವಿಶ್ವಾಸ ಮೂಡುವಂತೆ ಆಯಿತು.

ಸ್ವಾತಂತ್ರ್ಯ ಪ್ರಾಪ್ತಿಯ ನಂತರ ನಮ್ಮ ದೇಶದ ಸಂಸ್ಕೃತಿಗನುಗುಣವಾದ ವಿದ್ಯಾಪದ್ಧತಿ ರೂಪಗೊಳ್ಳುವದು ಅವಶ್ಯವಿತ್ತು. ದುರ್ದೈವದಿಂದ ಪ್ರಚಲಿತವಿದ್ದ ಎರವಲು ಪದ್ಧತಿ ಬೇರೆಯೇ ದಾರಿ ತುಳಿಯಲಾರಂಭಿಸಿತು. ಪಾರಂಪರಿಕವಾಗಿ ಬಂದ ಶಿಕ್ಷಣ ಪದ್ಧತಿ, ಸುಧಾರಿತ ರೂಪದಲ್ಲಿ ನಮ್ಮ ಸಕಲ ಸಮಸ್ಯೆಗಳಿಗೆ ಪರಿಹಾರ ಸೂಚಿಸಬಹುದೆಂದು ರಾಷ್ಟ್ರಪಿತ ಮಹಾತ್ಮಾ ಗಾಂಧಿಯವರು ಸಾರಿದರೂ, ಸರಕಾರ ಸಾಕ್ಷರತಾ ಪ್ರಧಾನವಾದ ಸಾರ್ವತ್ರಿಕ ಶಿಕ್ಷಣ ಪದ್ಧತಿಯನ್ನೇ ಬೃಹತ್ ಪ್ರಮಾಣದಲ್ಲಿ ಬಳಕೆಯಲ್ಲಿ ತಂದಿತು. ಸುಲಭ ಸಾಧ್ಯ ವಿದ್ಯಾ ಪದ್ಧತಿಯಿಂದ, ವಿದ್ಯೆಗಾಗಿ ಹಂಬಲಿಸದವರೂ, ಅದರ ಬಗ್ಗೆ ಪ್ರೀತಿ-ಗೌರವಗಳು ಇಲ್ಲದವರೂ ಶಾಲೆ, ಕಾಲೇಜು, ವಿಶ್ವವಿದ್ಯಾಲಯಗಳಲ್ಲಿ ಕಿಕ್ಕಿರಿದು ತುಂಬಿ ತುಳುಕಲಾರಂಭಿಸಿದರು. ಉತ್ತಮ ಕಲಾಕಾರರು, ಕುಶಲಕರ್ಮಿಗಳು, ಕೃಷಿಕರು, ವ್ಯಾಪಾರಿಗಳೆಂದು ತಲೆತಲಾಂತರಗಳಿಂದ ರೂಢಿಸಿಕೊಂಡ ವೃತ್ತಿಯವರಿಗೆ ತಾರತಮ್ಯವಿಲ್ಲದ ಏಕಪ್ರಕಾರದ ಶಿಕ್ಷಣ ಕೊಡಲಾರಂಭಿಸಿದ್ದರಿಂದ ಆನುವಂಶಿಕವಾಗಿ ಬಂದ ಹಲವಾರು ಅಪರೂಪದ ವೃತ್ತಿಗಳು ಮೂಲೆಗುಂಪಾದವು. ಅರ್ಹತಾಪತ್ರ-ಪದವಿಗಳೇ ಉದರ ಪೋಷಣೆಯ ಏಕಮೇವ ಮಾರ್ಗವೆಂಬ ಪ್ರವೃತ್ತಿ ಮೂಡಿತು. ಅಂತೆಯೇ ಪರೀಕ್ಷೆಗಳಲ್ಲಿ ಹೇಗಾದರೂ ಮಾಡಿ ಯಶಸ್ವಿಯಾಗುವ ಧೋರಣೆ

ತಲೆದೋರಿತು. ಇದರಿಂದಾಗಿ ಪ್ರಶ್ನೆಪತ್ರಿಕೆ ಕದಿಯುವುದು, ಸಿದ್ಧವಾದ ಉತ್ತರ ಪತ್ರಿಕೆಗಳನ್ನು ಪೂರೈಸುವದು, ನಕಲು ಹೊಡೆಯುವದು, ಸಾಮೂಹಿಕ ನಕಲು, ಪರೀಕ್ಷೆಗಳ ಮೇಲ್ವಿಚಾರಕರನ್ನು ಹಿಂಸಿಸುವದು ಪ್ರಾರಂಭವಾಯಿತು. ಸರಕಾರದಿಂದ ಹೆಚ್ಚಿನ ಧನಸಹಾಯ ಪಡೆಯಬೇಕೆಂದಿರುವ ಶಾಲಾಶಿಕ್ಷಕರೇ ಪ್ರಶ್ನೆಗಳಿಗೆ ಉತ್ತರಗಳನ್ನು ಕರಿಹಲಗೆಯ ಮೇಲೆ ಬರೆದು ಪೂರೈಸಿದ ಘಟನೆಗಳು ಬೆಳಕಿಗೆ ಬಂದವು. ಪರೀಕ್ಷಾ ಕೇಂದ್ರಗಳಲ್ಲಿ ಪೋಲಿಸ್ ಕಾವಲು, ವಾಮಮಾರ್ಗದ ವಿದ್ಯಾರ್ಥಿ-ಶಿಕ್ಷಕರನ್ನು ಶಿಕ್ಷಿಸಲು ಮೇಲ್ವಿಚಾರಣಾ ಸಮಿತಿ ನೇಮಿಸುವ ಪರಿಸ್ಥಿತಿ ಉತ್ಪನ್ನವಾಗಿರುವದು, ಪ್ರಚಲಿತ ಶಿಕ್ಷಣ ಪದ್ಧತಿಯ ಶೋಚನೀಯ ಸ್ಥಿತಿಯನ್ನು ಸೂಚಿಸುತ್ತದೆ.

ಬಿಲ್ಲು-ಬಾಣ ಹಿಡಿದು ಕಾಡುಮೇಡುಗಳಲ್ಲಿ ಅಲೆಯುವ ಆದಿವಾಸಿಗಳಿಗೆ, ನಾಲ್ಕು ಗೋಡೆಗಳ ಶಾಲಾ ಕಟ್ಟಡದಲ್ಲಿ ದಿನವಿಡೀ ಕುಳಿತು ಅಕ್ಷರಾಭ್ಯಾಸ ಮಾಡುವದರಲ್ಲಿ ಆಸಕ್ತಿ ಹೇಗೆ ಮೂಡೀತು? ತಮ್ಮ ಹಿರಿಯರಿಂದ ವಿವಿಧ ವೃತ್ತಿಗಳಲ್ಲಿ, ಕುಶಲಕಲೆಗಳಲ್ಲಿ ನುರಿತ ವರ್ಗದವರೆಲ್ಲ ಒಂದೇ ಎರಕದಲ್ಲಿ ಹೊಯ್ದ ಶಿಕ್ಷಣ ಪಡೆದು, ಸರ್ವರೂ ಸರಕಾರಿ ನೌಕರಿಗಳಿಗೆ ಕೈಯೊಡ್ಡುವಂತಾಯಿತು. ಪಡೆದ ಶಿಕ್ಷಣಕ್ಕೂ ಕೈಕೊಳ್ಳುವ ವೃತ್ತಿಗೂ ಯಾವ ತಾಳ-ಮೇಳವೂ ಇಲ್ಲದಂತಾಯಿತು. ಉಚ್ಚ ಮಾಧ್ಯಮಿಕ ಶಿಕ್ಷಣದ ಸರ್ಟಿಫಿಕೇಟ್ ಪಡೆದಾತ ಶುಚಿ ಸಂರಕ್ಷಣಾಧಿಕಾರಿಯಾಗಿ ಸಂಬಳ ಪಡೆಯುವದು ಮಾತ್ರ ತನ್ನ ಜನ್ಮಸಿದ್ಧ ಹಕ್ಕು, ಶುಚಿತ್ವದ ಹೊಣೆಗೂ ತನಗೂ ಸಂಬಂಧವಿಲ್ಲವೆಂಬಂತೆ ನಡೆದುಕೊಳ್ಳಲಾರಂಭಿಸಿದ. ವಿಜ್ಞಾನದ ಪದವೀಧರ, ಕೈತುಂಬ ಸಂಬಳ ದೊರೆಯುವ ಆಸೆಯಿಂದಲೇ ಬ್ಯಾಂಕಿನ ವಜಾ-ಬೇರೀಜು ಮಾಡುವ ನೌಕರಿಗೆ ಸೇರಿಕೊಂಡು, ವಿಜ್ಞಾನಕ್ಕೂ ತನಗೂ ಎಣ್ಣೆ-ಸೀಗೇಕಾಯಿ ಸಂಬಂಧ ಎಂದು ತೋರ್ಪಡಿಸುವಂತಾಯಿತು. ಕಂಪ್ಯೂಟರ್, ಇಲೆಕ್ಟ್ರಾನಿಕ್ಸ್‌ಗಳಂತಹ ವಿಶಿಷ್ಟ ವಿಷಯಗಳಲ್ಲಿ ಸ್ನಾತಕೋತ್ತರ ಪದವಿ ಪಡೆದವರು, ಬ್ಯಾಂಕು, ವಿಮಾ ಕಂಪನಿಗಳಲ್ಲಿ ಅಧಿಕಾರಿಗಳಾಗಿ ಸೇರಿಕೊಳ್ಳುವದು ಪ್ರತಿದಿನದ ಮಾತು. ನಿರುದ್ಯೋಗತನ ಬೆಳೆಸುವ ಸಾಕ್ಷರತೆಯ ಔಪಚಾರಿಕ ಶಿಕ್ಷಣ ಕೊಡಮಾಡಲು ಕೋಟ್ಯಂತರ ರೂಪಾಯಿಗಳ ಸಾರ್ವಜನಿಕ ಹಣ ತೊಡಗಿಸುವದು ಸರಿಯೇ? ಎಂದು ವಿಚಾರಿಸುವ ಕಾಲ ಬಂದಿದೆ.

ಈ ಗ್ರಂಥದಲ್ಲಿ ಎಲ್ಲ ಅಧ್ಯಾಯಗಳನ್ನು ಚಾರಿತ್ರಿಕ ಕಾಲಾನುಸಾರವಾಗಿ ಜೋಡಿಸಲಾಗಿದೆ. ಶಿಕ್ಷಣದ ವಿಸ್ತಾರ ಮತ್ತು ಪ್ರಸಾರಗಳು ಬರವಣಿಗೆಯ ಸಾಧನಗಳೊಂದಿಗೆ ಹಾಸುಹೊಕ್ಕಾಗಿದ್ದರಿಂದ ಅವುಗಳ ಬಗ್ಗೆ ಎರಡು ಅಧ್ಯಾಯಗಳಲ್ಲಿ ಮಾಹಿತಿ ಪೂರೈಸಲಾಗಿದೆ. ಭಾಷೆಯನ್ನು ಸರಳವಾಗಿಸಲು ಯತ್ನಿಸಲಾಗಿದೆ. ಆಧಾರಗಳನ್ನು ತೋರಿಸಲು ಕನ್ನಡ ಮತ್ತು ಚಿತ್ರಸೂಚಿಯಾಗಿ ಇಂಗ್ಲಿಷ್ ಅಂಕೆಗಳನ್ನು ಕಾಣಿಸಿದೆ. ಅಡಿಟಿಪ್ಪಣಿಗಳಿಗೆ ಅಳವಡಿಸಿಕೊಂಡ ಸಂಕ್ಷಿಪ್ತ ಹೆಸರುಗಳನ್ನು ಪತ್ರದ ಮೊದಲಲ್ಲಿ ಕೊಡಲಾಗಿದೆ. ಆಧಾರಗ್ರಂಥಗಳನ್ನು ಕೊನೆಯಲ್ಲಿ ನಮೂದಿಸಲಾಗಿದೆ. ಪುಸ್ತಕದಲ್ಲಿ ಸೇರಿಸಲಾಗದ ಉಪಯುಕ್ತ ಮಾಹಿತಿಯನ್ನು ಅನುಬಂಧಗಳಲ್ಲಿ ಸೇರಿಸಿದೆ. ಬೆಳವಡಿ ಮಲ್ಲಮ್ಮನ ಶಿಕ್ಷಣದ ಬಗ್ಗೆ ವಿವರಗಳು ಇತ್ತೀಚೆಗೆ ಬೆಳಕಿಗೆ ಬಂದಿದ್ದು, ಅವನ್ನೂ ಸೂಕ್ತವಾಗಿ ಬಳಸಿಕೊಳ್ಳಲು ಮರೆಯಲಿಲ್ಲ.

ಈ ಮೊದಲು ಇಂಗ್ಲಿಷಿನಲ್ಲಿ ಪ್ರಕಟವಾದ ನನ್ನ ಗ್ರಂಥ "ಮಧ್ಯಯುಗದ ಕನ್ನಡಿಗರ ಸಾಮಾಜಿಕ ಜೀವನ"ಕ್ಕೆ ಮುನ್ನುಡಿ ಬರೆದ ದಿಲ್ಲಿಯ ರಾಷ್ಟ್ರೀಯ ವಸ್ತುಸಂಗ್ರಹಾಲಯದ ನಿರ್ದೇಶಕರೂ, ಅಂತರ್‌ರಾಷ್ಟ್ರೀಯ ಖ್ಯಾತಿಯ ಕಲಾವೇತ್ತರೂ ಆಗಿದ್ದ ಡಾ।ಸಿ. ಶಿವರಾಮಮೂರ್ತಿಯವರು, ಆ ಕೃತಿಯಲ್ಲಿ ಬಳಸಿದ ಚಿತ್ರಗಳನ್ನು ಮನವಾರೆ ಮೆಚ್ಚಿ ಕರ್ನಾಟಕದ ಶಿಕ್ಷಣೇತಿಹಾಸದ ಬಗ್ಗೂ ಅಂತಹದೇ ಕೃತಿಯನ್ನು ರಚಿಸಲು ಸೂಚಿಸಿದ್ದರು. ಅದನ್ನು ಮುಗಿಸಿ ಅವರಿಗೆ ತೋರಿಸಿ ಆಶೀರ್ವಾದ ಪಡೆಯುವ ಭಾಗ್ಯ ನನಗೆ ಇಲ್ಲವಾಯಿತು. ೧೯೮೩ರಲ್ಲಿಯೇ ಅವರು ಕೊನೆಯುಸಿರು ಎಳೆದರು.

ಅವರ ಮುಖ್ಯ ಸೂಚನೆಯಂತೆ ಸೂಕ್ತವಾದ ಚಿತ್ರಗಳ ಶೋಧ ನಡೆಯಿತು. ಆದರೆ ನಾಡಿನ ಒಳಹೊರಗೆ ಹರಡಿಕೊಂಡ ದೇವಾಲಯಗಳ ಶಿಲ್ಪಗಳು, ಶಾಸನ, ವೀರಗಲ್ಲು, ನಿಸಿದಿಗಲ್ಲುಗಳಲ್ಲಿ, ಕಾವಿಚಿತ್ರ-ಭಿತ್ತಿಚಿತ್ರಗಳಲ್ಲಿ ಸಿಗುವ, ಶಿಕ್ಷಣದ ವಿಷಯಕ್ಕೆ ಸಂಬಂಧಿಸಿದ ಚಿತ್ರಗಳನ್ನು ದೊರಕಿಸುವದು ಸುಲಭದ ವಿಷಯವಾಗಿರಲಿಲ್ಲ. ನನ್ನ ಪತಿ ಡಾ। ಕೃಷ್ಣಾನಂದ ಕಾಮತರು ನೆರವಿಗೆ ಬಂದರು. ಮೂಲೆಮೂಲೆಗಳ ದೇವಾಲಯಗಳನ್ನು ವೀಕ್ಷಿಸಿ ಚಿತ್ರಿಸಿದರು. ಶ್ರವಣಬೆಳಗೊಳ, ಮೂಡುಬಿದರೆ, ಹುಂಚಗಳಂಥ ಜೈನ ಕೇಂದ್ರಗಳನ್ನು, ಕಾನೇರಿ, ನಾಸಿಕ, ಅಜಂತ, ಎಲ್ಲೋರಗಳ ಬೌದ್ಧ ವಿಹಾರ-ಚೈತ್ಯಗಳನ್ನು, ಮುಂಡಗೋಡದ ಟಿಬೇಟನ್ನರ ವಿದ್ಯಾಕೇಂದ್ರಗಳನ್ನು, ಭಟ್ಕಳದ ಮಹಮ್ಮದೀಯರ ಶಾಲೆಗಳನ್ನು ನೋಡಿಕೊಂಡು ಬಂದರು. ಇದರಿಂದ ಶಿಲ್ಪಗಳು, ಶಾಸನಗಳು, ಭಿತ್ತಿಚಿತ್ರ-ವರ್ಣಚಿತ್ರಗಳು, ತಾಳೆಗರಿ, ಕಲ್ಲಚ್ಚುಗಳ ಸಾವಿರಾರು ಚಿತ್ರಗಳ ನೆಗೆಟಿವ್‌ಗಳ ಸಂಗ್ರಹ ನಮ್ಮದಾಗಿದ್ದರೂ ಸಾಂದರ್ಭಿಕವಾಗಿ, ಪ್ರಾತಿನಿಧಿಕವಾಗಿ ಕೆಲವನ್ನೇ ಇಲ್ಲಿ ಅಳವಡಿಸಿದ್ದಾರೆ. ಚಿತ್ರಗಳ ವೈವಿಧ್ಯ ಮತ್ತು ಹರಹನ್ನು ಗಮನಿಸಿದರೆ, ಅದರ ಹಿಂದೆ ಇರುವ ಕಠಿಣ ದುಡಿಮೆಯ ಕಲ್ಪನೆ ಓದುಗರಿಗೆ ಬಂದೀತು!

ಇತಿಹಾಸದಲ್ಲಿದ್ದ ನನ್ನ ಆಸಕ್ತಿಗೆ ನೀರೆರೆದು ಮರವಾಗಿ ಬೆಳೆಸಿದವರು ನನ್ನ ವಿದ್ಯಾಗುರುಗಳಾದ ಡಾ।ಜಿ.ಎಸ್. ದೀಕ್ಷಿತರು. ಈ ಕೃತಿಗೆ ಬೇಕಾಗುವ ಅತ್ಯುಪಯುಕ್ತ ಮಾಹಿತಿಯನ್ನು ಧಾರೆಯೆರೆದು ಉಪಕರಿಸಿದ್ದಾರೆ. ಅಲ್ಲದೇ ಹಸ್ತಪ್ರತಿ ಸಿದ್ಧವಾಗುತ್ತಿದ್ದಾಗ, ತಮ್ಮದೇ ಕೃತಿಯೆನ್ನುವಷ್ಟು ಉತ್ಸಾಹದಿಂದ, ಮಳೆ-ಗಾಳಿ-ಬಿಸಿಲುಗಳನ್ನು ಲೆಕ್ಕಿಸದೇ ಮೇಲಿಂದ ಮೇಲೆ ಬಂದು ಅಮೂಲ್ಯ ಸೂಚನೆಗಳನ್ನು ನೀಡಿದ್ದಾರೆ. ಅವರ ಔದಾರ್ಯದ ಋಣ ಹೇಗೆ ತೀರಿಸುವದೆಂದು ತಿಳಿಯದಾಗಿದೆ. ಶಿಕ್ಷಣದ ಕುರಿತಾದ ಈ ಪುಸ್ತಕವನ್ನು ಅಪೂರ್ವದ ಈ ಗುರುಗಳಿಗೇ ಅರ್ಪಿಸುವದು ಅತ್ಯಂತ ಸಮಂಜಸವೆಂದು ಭಾವಿಸಿದ್ದೇನೆ. ಅದಕ್ಕೆ ಅನುಮತಿ ನೀಡಿದ ಡಾ।ಜಿ.ಎಸ್. ದೀಕ್ಷಿತರಿಗೆ ಅತ್ಯಂತ ಋಣಿಯಾಗಿದ್ದೇನೆ.

ಮುಂಬಯಿ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಪ್ರಾಧ್ಯಾಪಕರೂ, ಮುಖ್ಯಸ್ಥರೂ ಆಗಿರುವ ಡಾ। ಶ್ರೀನಿವಾಸ ಹಾವನೂರರು ಈ ಕೃತಿಯನ್ನು ಪ್ರಕಟಿಸುವ ಹೊಣೆ ಹೊತ್ತು, ಕಾಲಕಾಲಕ್ಕೆ ಬೇಕಾಗುವ ಅನೇಕ, ವಿರಳ ಪುಸ್ತಕಗಳನ್ನು ಪೂರೈಸಿ ತುಂಬ ಉಪಕಾರ ಮಾಡಿದ್ದಾರೆ. ಕೃತಿಯ ಉಪಯುಕ್ತತೆ ಹೆಚ್ಚಿಸಲು ಹಲವಾರು ಸೂಚನೆಗಳನ್ನು ಕೊಟ್ಟಿದ್ದಾರೆ.

ನನ್ನನ್ನು ಚೆನ್ನಾಗಿ ದುಡಿಯಲು ಹಚ್ಚಿ ಅಲ್ಪಾವಧಿಯಲ್ಲಿ ಹಸ್ತಪ್ರತಿ ಸಿದ್ಧವಾಗುವಂತೆ ನೋಡಿಕೊಂಡರು. ತಾವೂ ದುಡಿದರು. ಅವರ ಎಲ್ಲ ಬಗೆಯ ಪ್ರೋತ್ಸಾಹ ಮತ್ತು ನೆರವುಗಳಿಗೆ ಅತ್ಯಂತ ಕೃತಜ್ಞಳಿದ್ದೇನೆ. ಅನಂತಪುರಮ್‌ದ ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾಲಯದ ಡಾ। ಶೇಷಶಾಸ್ತ್ರಿಗಳು ಹಲವಾರು ಸಲಹೆ, ಸೂಚನೆ, ಮಾಹಿತಿ ನೀಡಿ ಉಪಕರಿಸಿದ್ದಾರೆ.

ಈ ಗ್ರಂಥದಲ್ಲಿ ಅಳವಡಿಸಿಕೊಂಡ ಕೆಲವು ಚಿತ್ರಗಳ ಸಂಗ್ರಹಕ್ಕಾಗಿ ಸಕಲ ರೀತಿಯ ನೆರವು ನೀಡಿದ ಹಿರಿಯ ಸಂಶೋಧಕರೂ, ಪ್ರಾಧ್ಯಾಪಕರೂ ಆದ ಡಾ। ಎಂ. ಚಿದಾನಂದ ಮೂರ್ತಿಯವರಿಗೆ, ಶ್ರೀ ಅ.ಲ. ನರಸಿಂಹನ್, ಶ್ರೀ ದೇವರಕೊಂಡರೆಡ್ಡಿ ಹಾಗೂ ಶ್ರೀ ಎಸ್. ಶಿವಣ್ಣ ಅವರಿಗೆ ಉಪಕೃತಳಾಗಿದ್ದೇನೆ. ಈ ಗ್ರಂಥದ ಪ್ರಕಾಶನಕ್ಕಾಗಿ ಧನಸಹಾಯ ನೀಡಿದ ಮುಂಬೈ ವಿಶ್ವವಿದ್ಯಾಲಯಕ್ಕೆ ಅತ್ಯಂತ ಋಣಿಯಾಗಿದ್ದೇನೆ. ಈ ನನ್ನ ಯತ್ನ, ಕನ್ನಡ ನಾಡಿನ ಶಿಕ್ಷಣ ಪರಂಪರೆಯಲ್ಲಿ ಆಸಕ್ತಿಯಿರುವ ಕನ್ನಡಿಗರಿಗೆ, ಶಿಕ್ಷಕರಿಗೆ, ವಿದ್ಯಾರ್ಥಿಗಳಿಗೆ, ಶಿಕ್ಷಣವೇತ್ತರಿಗೆ ರುಚಿಸಬಹುದು ಎಂದುಕೊಂಡಿದ್ದೇನೆ. ಓದುಗರು ತಮ್ಮ ಅನಿಸಿಕೆಗಳನ್ನು ಈ ಕೆಳಗೆ ನಮೂದಿಸಿದ ವಿಳಾಸಕ್ಕೆ ಬರೆದು ತಿಳಿಸುವ ಕೃಪೆ ಮಾಡಿದಲ್ಲಿ ಕೃತಜ್ಞಳಾಗುವೆ.

ಜನವರಿ, ೧೯೮೮

ಜ್ಯೋತ್ಸ್ನಾ ಕಾಮತ

# ಪರಿವಿಡಿ

# ಚಿತ್ರಗಳ ವಿವರ

57. ರಾಜಕುಮಾರಿಯ ವೀಣಾ ಶಿಕ್ಷಣ
58. ಬಟ್ಟೆ ಹಿಗ್ಗಿಸುವ ಜವಳಿ ವ್ಯಾಪಾರಿ
59. ತೂಕ ಹೆಚ್ಚಿಸುವ ದಿನಸಿ ವ್ಯಾಪಾರಿ
60. ತಾಳೆಗ್ರಂಥವನ್ನು ಪತಿಗೆ ಕೊಡುತ್ತಿರುವದು
61. ಪತ್ನಿಗೆ ಅಧ್ಯಯನದಲ್ಲಿ ಆಸಕ್ತಿ ಇಲ್ಲದಾಗ
62. ಸಕಲ ವಿದ್ಯಾಪಾರಂಗತೆ, ಸಾಮಿನಿರ್ಮಡಿ
63. ನಟನೆಯ ಕುರುಡಿ ಚಂಪಾವತಿ
64. ಮೋಹಕ್ಕೆ ಕಣ್ಣಿಲ್ಲವೆಂದು ಅರಿತಾಗ
65. ವಾದ್ಯ ಶಿಕ್ಷಣ
66. ನೃತ್ಯವರ್ಗ
67. ರಾಜಕುಮಾರಿಗೆ ಅಕ್ಷರಾಭ್ಯಾಸ
68. ಸ್ವಾಧ್ಯಾಯದಲ್ಲಿ ತೊಡಗಿದಾಗ
69. ವೀಣೆಯ ಅಭ್ಯಾಸ
70. ಶಾಸನ ಬರೆಯುತ್ತಿರುವ ಶಿಲಾಬಾಲಕಿ
71. ಬರೆಯುತ್ತಿರುವ ಬಾಲಕ
72. ಬರೆಯುತ್ತಿರುವ ಹೊಯ್ಸಳ ಮಹಿಳೆ
73. ಕಡತದ ಮೇಲೆ ಬರೆಯುವ ನಾರಿ
74. ಸ್ತ್ರೀ ಶಿಕ್ಷಣದ ಒಂದು ಪರಿ
75. ಜಟ್ಟಿಗಳು ಪೇಚು ಹಿಡಿದಾಗ
76. ಭಾವೀ ಜಟ್ಟಿಗಳ ತರಬೇತಿ
77. ಕುಸ್ತಿ ಪಂದ್ಯಾಟ
78. ಅಂಗ ಸೌಷ್ಠವಕ್ಕಾಗಿ ಕೋಲಾಟ
79. ಕೋಲಾಟದಲ್ಲಿ ನಿರತ ಕುವರಿಯರು
80. ಹೆಂಗಳೆಯರ ಕೋಲುವರಸೆ
81. ಪಾಠನಿರತ ಪುರಾಣಭಟ್ಟ
82. ಪುರಾಣಭಟ್ಟರು ವಾದದಲ್ಲಿ
83. ಸಮವಯಸ್ಕರಿಗೆ ಶಿಕ್ಷಣ
84. ಪ್ರವಚನಕಾರನಿಗೆ ದಕ್ಷಿಣೆ
85. ಪ್ರವಚನದಲ್ಲಿ ಮೈಮರೆತ ಹಿರಿಯ
86. ಭಯಭಕ್ತಿಯಿಂದ ಪ್ರವಚನ ಆಲಿಸುವಾಗ
87. ಸಂಸ್ಕೃತ ಪಂಡಿತ

# ೧. ಬೌದ್ಧಧರ್ಮದಲ್ಲಿ

**ಹಿಂ**ದೊಮ್ಮೆ ಬೌದ್ಧಧರ್ಮ, ಕರ್ನಾಟಕದಲ್ಲಿ ಊರ್ಜಿತಾವಸ್ಥೆಯಲ್ಲಿತ್ತು, ಎಂದು ಕೆಲ ಚಾರಿತ್ರಿಕ ದಾಖಲೆಗಳು ಸಾರಿ ಹೇಳುತ್ತವೆ. ಈ ಧರ್ಮ, ವಿಶ್ವದ ಇತರ ದೇಶಗಳಲ್ಲಿ ಪ್ರಸಾರವಾಗುವಂತೆ ಮಾಡಿದ ಅಶೋಕ ಚಕ್ರವರ್ತಿಯೇ ಕರ್ನಾಟಕದ ಪ್ರಪ್ರಥಮ ಚಕ್ರವರ್ತಿಯೆಂದರೆ ತಪ್ಪಾಗಲಾರದು. ಆತನ ಅಜ್ಜ ಚಂದ್ರಗುಪ್ತ ಮೌರ್ಯನು (ಕ್ರಿ.ಶ.ಪೂ.ಸು. ೩೨೪-೨೯೮)ರಲ್ಲಿ, ಬಹುಶಃ ತನ್ನ ಸಾಮ್ರಾಜ್ಯದ ಭಾಗವಾಗಿದ್ದ ಕನ್ನಡನಾಡಿನ ಶ್ರವಣಬೆಳ್ಗೊಳದಲ್ಲಿ ಜೈನಗುರು ಭದ್ರಬಾಹುವಿನೊಂದಿಗೆ ಬಂದು ನೆಲೆಸಿ ಕೊನೆಗಾಲವನ್ನು ಕಳೆದನು. ಸಣ್ಣ ಬೆಟ್ಟದ ಮೇಲೆ ಇದ್ದ ಚಂದ್ರಗುಪ್ತ ಬಸದಿ ಇವನೇ ಕಟ್ಟಿಸಿದ್ದು ಎಂದು ನಂಬಲಾಗುತ್ತದೆ. ಸಾಮ್ರಾಟ್ ಅಶೋಕನು ಪಟ್ಟವೇರಿದ ಎಂಟೇ ವರ್ಷಗಳಲ್ಲಿ ಕಳಿಂಗದ ಘನಘೋರ ಕಾಳಗ ನಡೆದು ವಿಜಯಿಯಾದನು. ಆದರೆ ಯುದ್ಧದಲ್ಲಿ ಲಕ್ಷಗಟ್ಟಲೆ ಜನ ಮಡಿದು, ಅಸಂಖ್ಯರು ಸೆರೆಯಾಳಾಗಿದ್ದರಿಂದ, ಹಿಂಸೆಗೆ ಹೇಸಿದ ಅವನ ಮನಃ ಪರಿವರ್ತನೆಯಾಯಿತು. ಅಂತೆಯೇ ಸಕಲ ಜೀವ ಕೋಟಿಯ ಬಗ್ಗೆ ಅನುಕಂಪ, ದೀನದಲಿತರ ಬಗ್ಗೆ ದಯೆ, ಮಮತೆ ಸಾರುವ ಬೌದ್ಧಧರ್ಮವನ್ನು ಸ್ವೀಕರಿಸಿದ. ಈ ಧರ್ಮದ ಪ್ರಸಾರಕ್ಕಾಗಿ, ಮೊಗ್ಗಲಿಪುತ್ತ ತಿಸ್ಸನ ನೇತೃತ್ವದಲ್ಲಿ ಬೇರೆ ಬೇರೆ ತಂಡಗಳನ್ನು, ದೇಶದ ವಿವಿಧ ಭಾಗಗಳಿಗೆ ಕಳಿಸಲಾಯಿತು. ರಖ್ಖಿತನ ಮುಖಂಡತ್ವದ ತಂಡ, ವನವಾಸಕ (ಉತ್ತರ ಕನ್ನಡ ಜಿಲ್ಲೆಯ ಬನವಾಸಿ)ಕ್ಕೂ ಭಿಕ್ಕು ಮಹಾದೇವನ ತಂಡ, ಮಹಿಷ ಮಂಡಲ(ಮೈಸೂರು)ಕ್ಕೂ ಧರ್ಮ ರಖ್ಖಿತನ ತಂಡ ಅಪರಾಂತ(ಕೊಂಕಣ)ಕ್ಕೂ ಪ್ರಯಾಣ ಬೆಳೆಸಿದವು. ಇಂಥ ಸಂಚಾರದ ಮಹತ್ವವನ್ನು ಭಗವಾನ್ ಬುದ್ಧನೇ ಹೇಳಿದ್ದಾನೆ. "ಚರತ ಭಿಕ್ಕವೇ, ಚಾರಿತಾಂ, ಬಹುಜನ ಹಿತಾಯ, ಬಹುಜನ ಸುಖಾಯ... ಲೋಕಾನುಕಂಪಾಯ..." ಎಂದು ('ಚಲಿಸುತ್ತಲೇ ಇರಿ, ಭಿಕ್ಕುಗಳೇ, ಬಹುಜನರ ಹಿತಕ್ಕಾಗಿ, ಬಹುಜನರ ಸುಖಕ್ಕಾಗಿ, ಜನರ ಮೇಲಿನ ಅನುಕಂಪೆಗಾಗಿ ತಿರುಗಾಡುತ್ತಲೇ ಇರಿ')

ಹದಿನೈದು ಶತಕಗಳವರೆಗೂ, ಅಂದರೆ ಕ್ರಿ.ಶ. ಮೂರನೆ ಶತಕದಿಂದ ಕ್ರಿ.ಶ.೧೩ನೇ ಶತಕದವರೆಗೆ ಬೌದ್ಧಧರ್ಮ, ಕರ್ನಾಟಕದ ಧಾರ್ಮಿಕ, ಶೈಕ್ಷಣಿಕ ಜೀವನದ ಮೇಲೆ ಪ್ರಭಾವ ಬೀರಿತು. ಜೈನರು, ವೈಷ್ಣವರು, ಶೈವರು ಪ್ರಬಲವಾಗಿದ್ದ ನಾಡಿನಲ್ಲಿ ಇಷ್ಟೊಂದು ಕಾಲ ಈ ಧರ್ಮ, ಉಸಿರು ಹಿಡಿದು ಜೀವಿಸಿರಬೇಕಾಗಿದ್ದರೆ, ಕನ್ನಡಿಗರು ಅದರಲ್ಲಿರುವ ಮಾನವಿಕ,

ಮುಖ್ಯವಾಗಿ ಶೈಕ್ಷಣಿಕ ಅಂಶವನ್ನು ಮನವಾರೆ ಮೆಚ್ಚಿಕೊಂಡಿದ್ದರೆಂದು ತೋರುತ್ತದೆ. ರಾಜಾಶ್ರಯದಲ್ಲಿ ಇನ್ನಿತರ ಪಂಥಗಳು ಅಭಿವೃದ್ಧಿ ಹೊಂದಿದಾಗ, ಬೌದ್ಧರು ನಗರಗಳಿಂದ ಕಂಬಿಕಿತ್ತು, ಚಿಕ್ಕಪುಟ್ಟ ಊರುಗಳಿಗೇ ತಮ್ಮ ಚಟುವಟಿಕೆಗಳನ್ನು ಸೀಮಿತಗೊಳಿಸಬೇಕಾದ ಪ್ರಸಂಗಗಳೆಷ್ಟೋ ಬಂದಿವೆ. ಆದರೆ ಅಂಥ ಸಂದರ್ಭಗಳಲ್ಲೂ ಈ ಧರ್ಮ, ಕರ್ನಾಟಕದಿಂದ ಪೂರ್ತಿ ಕಣ್ಮರೆಯಾಗದೇ ಹೋದದ್ದು ಗಮನಾರ್ಹ ಸಂಗತಿ. ಶಾತವಾಹನರ ಮೊದಲ ಅರಸರು ಬೌದ್ಧಧರ್ಮಕ್ಕೆ ಆಶ್ರಯ ನೀಡಿದರು. ಗಂಗರು, ಬಾಣರು, ಪಲ್ಲವರು ಹೆಚ್ಚಿನ ಸಹಿಷ್ಣುತೆಯಿಂದ ಹಿಂದಿನ ಪ್ರೋತ್ಸಾಹವನ್ನು ಮುಂದರಿಸಿದರು. ಇದರಿಂದಾಗಿ ಕ್ರಿ.ಶ. ಒಂದನೆ ಮತ್ತು ಎರಡನೆ ಶತಕಗಳಲ್ಲಿ ಕರ್ನಾಟಕದಲ್ಲಿ ಬೌದ್ಧಧರ್ಮ ಬೇರೂರಲು ಅನುಕೂಲವಾಯಿತು. ಇದೇ ಕಾಲಕ್ಕೆ ನೆರೆನಾಡಿನ ಆಂಧ್ರದಲ್ಲಿ ನಾಗಾರ್ಜುನಕೊಂಡವೆಂಬ ಖ್ಯಾತ ವಿದ್ಯಾಸಂಸ್ಥೆ ತಲೆಯೆತ್ತಿತು. ಗಂಗ ಅರಸು ಇಮ್ಮಡಿ ಮಾಧವನು (ಕ್ರಿ.ಶ.೪೫೦-೭೫), ಬೌದ್ಧ ವಿಹಾರಕ್ಕೆ ಭೂದಾನ ಕೊಟ್ಟು ಪ್ರೋತ್ಸಾಹಿಸಿದನು. ಐದನೆಯ ಶತಕದಲ್ಲಿ ಜೈನರ ಪ್ರಭಾವ ಹೆಚ್ಚೆಚ್ಚಾಗಿ ಬೆಳೆದು ಬೌದ್ಧರ ಚಟುವಟಿಕೆಗಳು ಕುಗ್ಗುವಂತಾದವು. ಆದರೆ ಕಾಂಚಿಯಿನ್ನೂ ಬೌದ್ಧಧರ್ಮದ ಮಹತ್ವದ ಕೇಂದ್ರವಾಗಿ ಮುಂದರಿದಂತೆ, ಕನ್ನಡನಾಡಿನ ವಿದ್ಯಾಕೇಂದ್ರಗಳೂ ಜೈನರಿಗೆ ಸಂಪೂರ್ಣ ಶರಣಾಗತರಾಗದಂತೆ ಇಲ್ಲಿಯ ಬೌದ್ಧ ವಿದ್ವಾಂಸರು ಎಚ್ಚರಿಕೆ ವಹಿಸಿದರೆಂದು ತೋರುತ್ತದೆ. ಏಕೆಂದರೆ ಏಳನೆಯ ಶತಕದಲ್ಲಿ ಕರ್ನಾಟಕ-ಕಾಂಚಿಗಳಿಗೆ ಭೇಟಿಯಿತ್ತಿದ್ದ ಚೀನೀ ಮಹಾಯಾತ್ರಿಕ ಹ್ಯೂಯೆನ್ ತ್ಸಾಂಗನು, ಈ ನಾಡಿನವರ ವಿದ್ಯಾಪ್ರೇಮವನ್ನು ಕೊಂಡಾಡಿದ್ದಲ್ಲದೇ ಪುಲಿಕೇಶಿಯ ರಾಜ್ಯದಲ್ಲಿ ನೂರಕ್ಕೂ ಮಿಕ್ಕಿ ವಿಹಾರಗಳಿದ್ದು ಅಲ್ಲಿ ಐದುಸಾವಿರಕ್ಕೂ ಹೆಚ್ಚು ಭಿಕ್ಕುಗಳಿದ್ದುದನ್ನು ಗಮನಿಸಿದ್ದ.[೧] ಬೌದ್ಧರ ಮಹಾಯಾನ, ಹೀನಯಾನ ಮತ್ತು ಅನಂತರ ವಜ್ರಯಾನಗಳು ಈ ನಾಡಿನಲ್ಲಿ ಬದುಕುವಂತಾಗಿದ್ದು, ವೈಶಿಷ್ಟ್ಯ.

ಅಸಂಖ್ಯಾತ ವಿದೇಶೀಯ ಯಾತ್ರಿಕರು ಭಾರತದ ಉದ್ದಗಲಕ್ಕೂ ಪ್ರವಾಸ ಮಾಡಿ ತಮ್ಮ ಅನುಭವಗಳನ್ನು ಭಾವೀ ಪೀಳಿಗೆಗಾಗಿ ಬರೆದಿಟ್ಟು ಕಣ್ಮರೆಯಾದರೂ, ಚೀನಾದ ಬೌದ್ಧ ಭಿಕ್ಕು ಹ್ಯೂಯೆನ್ ತ್ಸಾಂಗ್(ಕ್ರಿ.ಶ.೬೦೦-೬೬೪)ನ ಭಾರತ ಯಾತ್ರೆ ಅಪೂರ್ವವಾದದ್ದು. ಇನ್ನಿತರರು ಸಾಹಸಕ್ಕಾಗಿ, ಸ್ವಪ್ರತಿಷ್ಠೆಗಾಗಿ, ಲಾಭಕ್ಕಾಗಿ ಪರ್ಯಟನ ಕೈಕೊಂಡರೆ, ಇವನು ಕೇವಲ ವಿದ್ಯಾರ್ಜನೆಗೆ ಬಂದವನು. ಮಧ್ಯ ಏಷ್ಯದ ಹಲವಾರು ದೇಶಗಳು, ರಷ್ಯ, ಅಫ್ಘಾನಿಸ್ತಾನ, ಈಗಿನ ಪಾಕಿಸ್ತಾನಗಳನ್ನು ಸುತ್ತಿ ಕ್ರಿ.ಶ. ೬೩೬ರಲ್ಲಿ ಶ್ರೀನಗರ ತಲುಪಿದನು. ಸುಡುಬಿಸಲು, ಹಿಮಗಾಳಿ, ಚಳಿ, ಮಳೆ, ಸುಂಟರಗಾಳಿಗಳನ್ನು ಎದುರಿಸಿ ಪರ್ವತ, ಕೊರಕಲುಗಳನ್ನು ಹಾದು, ಭಿನ್ನಮತೀಯರ ವಿರೋಧ, ಅಧಿಕಾರಿಗಳ ಕೀಟಲೆ, ಕಳ್ಳಕಾಕರ ಭೀತಿ, ಯಾವುದನ್ನೂ ಲೆಕ್ಕಿಸದೇ, ಹದಿನಾರು ವರ್ಷಗಳ ದೀರ್ಘ ಪರ್ಯಟನವನ್ನು ಕೈಕೊಂಡನು. ಭಾರತದಲ್ಲಿ ಹರಡಿಕೊಂಡಿದ್ದ ಬೌದ್ಧಧರ್ಮ-ಶಿಕ್ಷಣ ಕೇಂದ್ರಗಳಿಗೆ ಭೇಟಿಕೊಡಲು ಅವನು ಕುದುರೆ, ಕತ್ತೆ, ಹೇಸರಗತ್ತೆ, ಮೇನೆ, ಎತ್ತು, ನಾವೆ, ಕಾಲ್ನಡಿಗೆ ಎಲ್ಲವನ್ನೂ ಬಳಸಿದ. ಹೋದಲ್ಲೆಲ್ಲ ಆತನ ವಾಗ್ವೈಖರಿ, ಬೋಧನೆ ಮತ್ತು ತತ್ವಪ್ರತಿಪಾದನೆಯನ್ನು ಕೇಳಲು ಜನರು

ಕಿಕ್ಕಿರಿದು ತುಂಬುತ್ತಿದ್ದರು. ಹರ್ಷವರ್ಧನನ ಓಲಗದಲ್ಲಿ ಅವನು ಅಸಂಖ್ಯಾತ ವಾದ, ಸಭೆಗಳಲ್ಲಿ ಪಾಲುಗೊಂಡು, ಬೌದ್ಧಧರ್ಮದ ಹಿರಿಮೆಯನ್ನು ಸ್ಥಾಪಿಸಿ, ಎಲ್ಲರಿಂದಲೂ ತಲೆದೂಗಿಸಿಕೊಂಡನು. ಬಲಾಢ್ಯನೆನಿಸಿಕೊಂಡ ಹರ್ಷವರ್ಧನನನ್ನು ಕನ್ನಡ ಅರಸು ಇಮ್ಮಡಿ ಪುಲಕೇಶಿ ಯುದ್ಧದಲ್ಲಿ ಸೋಲಿಸಿದ ಐತಿಹಾಸಿಕ ಸತ್ಯವನ್ನು ದೃಢೀಕರಿಸಿದ್ದು ಈತನೇ! ಅವನು ಕರ್ನಾಟಕದ ಅನೇಕ ಬೌದ್ಧ ಕೇಂದ್ರಗಳನ್ನು ಸಂದರ್ಶಿಸಿ, ಶ್ರೀಲಂಕಾಗೆ ಭೇಟಿಕೊಡಲೆಂದು ಕಾಂಚಿಯಲ್ಲಿ ತಂಗಿದ್ದನು. ಆದರೆ ಆಗ ಆ ನಾಡಿನಲ್ಲಿ ಭೀಕರ ಕ್ಷಾಮ ತಲೆದೋರಿ, ಜನರೆಲ್ಲ ದೊಂಬಿಯೆದ್ದದ್ದರಿಂದ, ಮತ್ತು ಸಿಂಹಳ ದ್ವೀಪದಲ್ಲಿ ಆತನು ಅರಿತುಕೊಳ್ಳಬೇಕಾದದ್ದು ಏನೂ ಇಲ್ಲವೆಂದು ಕೆಲ ಭಿಕ್ಕುಗಳು ದೃಢೀಕರಿಸಿದ್ದರಿಂದ, ಹ್ಯೂಯೆನ್ ತ್ಸಾಂಗನು ತಿರುಗಿ ನಾಲಂದ ವಿಶ್ವವಿದ್ಯಾಲಯಕ್ಕೆ ಹೋದನು. ಅವನು ಕ್ರಿ.ಶ.೬೪೩ರಲ್ಲಿ ಚೀನಕ್ಕೆ ಮರುಪ್ರಯಾಣ ಬೆಳೆಸಿದಾಗ ತನ್ನ ಜೊತೆಗೆ ಐದುನೂರ ಐವತ್ತಾರು ಮೂಟೆಗಳಲ್ಲಿ ಆರನೂರು ಐವತ್ತೇಳು ಸೂತ್ರಗಳ ಹಸ್ತಪ್ರತಿಗಳು ಮತ್ತಿತರ ಸಾಮಗ್ರಿಗಳನ್ನು ಒಯ್ದಿದ್ದ. ಅವುಗಳಲ್ಲಿ ಕರ್ನಾಟಕದವು ಕೆಲವಾದರೂ ಇರಬಹುದು! ಎರಡು ವರ್ಷಗಳ ಕಷ್ಟಕರವಾದ ಪ್ರಯಾಣದ ನಂತರ ಅವನು ಚೀನದ ರಾಜಧಾನಿ ಚಾಂಗ್-ಅಸ್‌ವನ್ನು ತಲುಪಿದಾಗ, ಅವನಿಗೆ ಭವ್ಯ ಸ್ವಾಗತ ನೀಡಲಾಯಿತು. ಚೀನಿ ಚಕ್ರವರ್ತಿ, ಪರಮ ವಿಶ್ವಾಸದಿಂದ ಅವನಿಗೆ ಆಶ್ರಯವಿತ್ತ. ಕೆಲ ವರ್ಷ ಆಳರಸರ ಆತಿಥ್ಯದಲ್ಲಿ ಅಧ್ಯಯನ ಕೈಕೊಂಡು, ಭಾರತದಿಂದ ಒಯ್ದ ಸೂತ್ರ ಗ್ರಂಥಗಳನ್ನು 'ಮಾತೃ ಪ್ರೇಮ'ವೆಂಬ ಬೌದ್ಧಾಲಯಕ್ಕೆ ಸಾಗಿಸಿ, ಭಾಷಾಂತರ ಕಾರ್ಯವನ್ನು ಆರಂಭಿಸಿದನು. ಅವನು ತಂದ ಈ ಅಪೂರ್ವನಿಧಿಯನ್ನು ಶಾಶ್ವತವಾಗಿ ಕಾಯ್ದಿರಿಸಲು, ಸಾಯನ್ ನಗರದಲ್ಲಿ ಕ್ರಿ.ಶ. ೬೫೨ರಲ್ಲಿ ಸಾಯನ್ ಪಗೋಡವನ್ನು ಕಟ್ಟಲಾಯಿತು. ಈ ಭವ್ಯ ಕಟ್ಟಡ ಇಂದಿಗೂ ಸುಸ್ಥಿತಿಯಲ್ಲಿರುವದು ಸೋಜಿಗ. ಕ್ರಿ.ಶ.೬೬೪ರಲ್ಲಿ ನಿರ್ಯಾಣ ಹೊಂದಿದ ಮೇಲೆ ಅವನ ಪ್ರವಾಸಕಥನವನ್ನು, ಆತನ ಅನುಯಾಯಿ ಯಾನ್, ತುಂಗ್‌ನು ಕ್ರಿ.ಶ. ೬೮೮ರಲ್ಲಿ ಬರೆದು ಮುಗಿಸಿದನು.[೨]

ಕರ್ನಾಟಕದ ಉದ್ದಗಲಕ್ಕೂ ಬೌದ್ಧಧರ್ಮದ ಅವಶೇಷಗಳು ಹರಡಿಕೊಂಡಿವೆ. ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ತಾಲೂಕಿನಲ್ಲಿ ಇರುವ ಹೈಗುಂದ, ಕ್ರಿ.ಶ. ಎರಡನೇ ಶತಮಾನದಲ್ಲಿ ಬೌದ್ಧಕೇಂದ್ರವಾಗಿತ್ತು ಎಂದು ಅಲ್ಲಿ ಇದ್ದ ಯಕ್ಷ ಮತ್ತು ಕುಬ್ಜರ ಅವಶೇಷಗಳು ಸಾರುತ್ತವೆ. ಪಾಳು ಮನೆಯ ನೆಲೆಗಟ್ಟು ಅಗೆಯುವಾಗ, ಪ್ರಾಚೀನ ಕಾಲದ ಹರಿ ನೀರಿನ ವ್ಯವಸ್ಥೆ ಕಣ್ಣಿಗೆ ಬೀಳುವಂತಾಯಿತು. ಅಲ್ಲಿ ಉತ್ಖನನ ಕೈಕೊಂಡರೆ, ಹೆಚ್ಚಿನ ವಿವರಗಳು ದೊರೆಯುವದು ಖಂಡಿತ. ಭೀಮಾನದಿಯ ದಂಡೆಯ ಮೇಲೆ ಇರುವ ಸನ್ನತಿಯು ಕ್ರಿ.ಶ.೨ನೇ ಶತಮಾನದಿಂದ ನಾಲ್ಕನೇ ಶತಮಾನದವರೆಗೆ ದೊಡ್ಡ ಬೌದ್ಧ ಶಿಕ್ಷಣ ಕೇಂದ್ರವಾಗಿತ್ತೆಂದು ಅಲ್ಲಿಯ ಸ್ತೂಪದ ಅವಶೇಷಗಳು, ಸ್ಮಾರಕ ಶಿಲ್ಪಗಳು, ಬುದ್ಧನ ಜೀವನದ ಆಧಾರಿತ ಜಾತಕ ಕಥೆಯ ಶಿಲ್ಪಗಳು, ಮತ್ತು ಶಾಸನಗಳು ಸಾರುತ್ತವೆ. ಸಿರ್ಸಿ ತಾಲೂಕಿನ ಮಾಲಂಜಿ, ಬಿದಿರಳ್ಳಿ, ಬನವಾಸಿ, ಮುಂಡಗೋಡ ತಾಲೂಕಿನ ಬೆಡಸಗಾಂವ್, ಅಂಕೋಲಾ ತಾಲೂಕಿನ ಬಬ್ರುವಾಡಾ

(ಬೌದ್ಧವಾಡಾ, ಬಬ್ರುವಾಡಾ ಆಗಿರಬಹುದೇ ?) ಕುಮಟಾ ತಾಲೂಕಿನ ದೀವಗಿ(ದೀಪಕ ?)ಯಲ್ಲಿ ಬೌದ್ಧ ವಿಹಾರ ಮತ್ತು ಅದಕ್ಕನುಸರಿಸಿದ ಇನ್ನಿತರ ಅವಶೇಷಗಳು ದೊರಕಿವೆ. ಭೋಜರ ಹಿರೇಗುತ್ತಿ, ತಾಮ್ರ ಶಾಸನ ಮತ್ತು ಕೇಕಯರ ಹೊನ್ನಾವರ ತಾಮ್ರ ಶಾಸನಗಳು, ವಿಹಾರಗಳಿಗೆ ಕೊಡಮಾಡಿದ ದಾನವನ್ನು ನಮೂದಿಸುವದರಿಂದ, ಉತ್ತರ ಕನ್ನಡ ಜಿಲ್ಲೆಯಲ್ಲಿ ಸಾಕಷ್ಟು ಪ್ರಮಾಣದಲ್ಲಿ ಶಿಕ್ಷಣ ಸೌಲಭ್ಯಗಳು ಇದ್ದವೆಂದಾಗುತ್ತದೆ. ಬೌದ್ಧ ವಿಹಾರಗಳಲ್ಲೆಲ್ಲ ತಪ್ಪದೇ ವಿದ್ಯಾದಾನಕ್ಕೆ ಏರ್ಪಾಡು ಇರುತ್ತಿತ್ತು.

ಅಶೋಕನು ಬೌದ್ಧಧರ್ಮ, ಜನರಿಗೆ ಸುಲಭವಾಗಿ ಅರ್ಥವಾಗುವಂತೆ, ದೇಶದ ಒಳಗೂ ಹೊರಗೂ ಅನೇಕಾನೇಕ ಶಾಸನಗಳನ್ನು ಬರೆಸಿದ. ಇವುಗಳು ಬ್ರಾಹ್ಮಿ ಲಿಪಿಯಲ್ಲಿಯೂ, ಪ್ರಾಕೃತ ಭಾಷೆಯಲ್ಲಿಯೂ ಇದ್ದುದರಿಂದ, ಕರ್ನಾಟಕದಲ್ಲಿ ಅವನ್ನು ಓದಿ ಅರ್ಥಮಾಡಿಕೊಳ್ಳುವ ಶಿಕ್ಷಣ ಪದ್ಧತಿ ಲಭ್ಯವಿದ್ದಿರಲೇಬೇಕು. ಈ ಶಾಸನಗಳೆಲ್ಲ ಸ್ಥಳೀಯ ಭಾಷೆಯನ್ನು ಅಳವಡಿಸಿಕೊಂಡದ್ದರಿಂದ ಕನ್ನಡ ನಾಡಿನಲ್ಲಿ ಸಿಕ್ಕಿರುವ ಆರು ಶಾಸನಗಳಲ್ಲಿ ಬಳಸಿದ ಪ್ರಾಕೃತ ಭಾಷೆ, ಉತ್ತರದ ಶಾಸನಗಳಲ್ಲಿ ಬಳಸಿದ್ದಕ್ಕಿಂತ ಭಿನ್ನವಾಗಿದೆ. ರಾಯಚೂರ ಜಿಲ್ಲೆಯ ಮಸ್ಕಿಯಲ್ಲಿ ಇದ್ದ ಲಘು ಶಿಲಾಲಿಪಿ, ಚರಿತ್ರಕಾರರ ಕಣ್ತೆರೆಸಿತು. ಆ ತನಕ 'ದೇವಾನಾಂಪ್ರಿಯ ಪ್ರಿಯದರ್ಶಿ' ಯಾರೆಂದು ಅರ್ಥವಾಗಿರಲಿಲ್ಲ. ಮಸ್ಕಿಯ ಶಾಸನದಲ್ಲಿ 'ದೇವನಾಂ ಪಿಯಸ ಅಸೋಕಸ' ಎಂದು ಬರೆಯಲಾಗಿದ್ದರಿಂದ ಈ ಧರ್ಮಪ್ರಚಾರಕನ ಗುಟ್ಟು ರಟ್ಟಾಯಿತು. ಕೊಪ್ಪಳ ಜಿಲ್ಲಾ ಸ್ಥಳದ ಬಳಿ ಇರುವ ಗವಿಮಠ, ಪಾಲ್ಕಿಗುಂಡು, ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಜಟಿಂಗ ರಾಮೇಶ್ವರ, ಸಿದ್ಧಾಪುರಗಳಲ್ಲಿಯೂ ಲಘು ಶಿಲಾಲಿಪಿಯ ಶಾಸನಗಳು ಇವೆ. ಈ ಶಾಸನಗಳ ಪ್ರಕಾರ, ಸುವರ್ಣಗಿರಿ (ರಾಯಚೂರು ಜಿಲ್ಲೆಯ ಕನಕಗಿರಿ) ಮತ್ತು 'ಇಸಿಲಾ' (ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ ?)ಗಳಲ್ಲಿ 'ಮಹಾಮಾತ್ರ' ಅಧಿಕಾರಿಗಳನ್ನು ನೇಮಿಸಲಾಗಿತ್ತು. ಇವರು ಧಾರ್ಮಿಕ-ಶೈಕ್ಷಣಿಕ ಚಟುವಟಿಕೆಗಳ ಮೇಲ್ವಿಚಾರಕರಿದ್ದರೆಂದು ಇಲ್ಲಿ ಸ್ಮರಿಸಿಕೊಳ್ಳಬಹುದು. ವನವಾಸಕ(ಬನವಾಸಿ)ಕ್ಕೂ ಧರ್ಮ ಪ್ರಚಾರಕರ ತಂಡ ಬಂದಿತ್ತು. ಇದಲ್ಲದೇ ಉತ್ತರ ಕನ್ನಡ ಜಿಲ್ಲೆಯ ಕಾರವಾರ(ಅಂಜದೀಪ ?) ದಕ್ಷಿಣ ಕನ್ನಡದ ಕುಂದಾಪುರ, ಮೂಳೂರು, ಎಲ್ಲಂಪಳ್ಳಿ, ಕದ್ರಿ, ವಿಜಾಪುರ ಜಿಲ್ಲೆಯ ಚಿಕ್ಕಂಡಿ, ಧಾರವಾಡ ಜಿಲ್ಲೆಯ ಡಂಬಳ, ಕೋಳಿವಾಡ, ಶಿವಮೊಗ್ಗ ಜಿಲ್ಲೆಯ ಬಳ್ಳಿಗಾವಿ, ಕೋಲಾರ ಮತ್ತು ತುಮಕೂರು ಜಿಲ್ಲೆಗಳಲ್ಲಿಯೂ ಬೌದ್ಧರ ವಸತಿಯ ಕೆಲ ಅವಶೇಷಗಳು ದೊರಕಿದ್ದರಿಂದ, ಬೌದ್ಧಧರ್ಮ ಶಿಕ್ಷಣದ ವ್ಯಾಪ್ತಿಯ ಕಲ್ಪನೆ ಬರುವಂತಾಗುತ್ತದೆ.

ಧರ್ಮ ಶಿಕ್ಷಣ ಪ್ರಸಾರವನ್ನು ಕೈಕೊಂಡು ನಿರಂತರವಾಗಿ ಸಂಚರಿಸುತ್ತಿದ್ದ ಭಿಕ್ಕುಗಳಿಗೆ ಮಳೆಗಾಲದಲ್ಲಿ ಆಶ್ರಯಕ್ಕಾಗಿ ಮೊದಮೊದಲು ಗುಹಾಲಯಗಳಲ್ಲಿ ಅನುಕೂಲ ಮಾಡಿದ್ದರು. ಬರುಬರುತ್ತ ಅವು ಧಾರ್ಮಿಕ, ಅಧ್ಯಾತ್ಮಿಕ, ಶೈಕ್ಷಣಿಕ ಕೇಂದ್ರಗಳಾದವು. ಅಲ್ಲಿ ಪ್ರಾರ್ಥನೆ, ಅಧ್ಯಯನ, ನಿವಾಸ ಮತ್ತು ವಿದ್ಯಾಭ್ಯಾಸಕ್ಕೆ ಏರ್ಪಾಡಾಯಿತು. ಇಂದಿನ ಕರ್ನಾಟಕದಲ್ಲಿ ಇಂಥ ವಿದ್ಯಾಲಯಗಳು ಕಂಡುಬಾರದಿದ್ದರೂ, ಹಿಂದಿನ ಬೃಹತ್ ಕನ್ನಡ ನಾಡಿನಲ್ಲಿ ಸಹಸ್ರಕ್ಕೂ ಹೆಚ್ಚು

ಅವು ಅಸ್ತಿತ್ವದಲ್ಲಿ ಇದ್ದವು.[೮] ಬಾದಾಮಿಯ ಗುಹಾಲಯದಲ್ಲಿ ಅರೆಕೆತ್ತಿದ ಬುದ್ಧನ ಪ್ರತಿಮೆ ಇರುವದರಿಂದ, ಪ್ರಾರಂಭದಲ್ಲಿ ಬೌದ್ಧರು ಇದನ್ನು ವಿಹಾರಕ್ಕೆಂದು ನಿರ್ಮಿಸಲು ಪ್ರಾರಂಭಿಸಿ ಸಾಧ್ಯವಾಗದೇ ನಂತರ ಇವೇ ಶೈವ ವೈಷ್ಣವ ಜೈನ ಗುಹೆಗಳಾಗಿ ಪರಿವರ್ತನಗೊಂಡಿರಬೇಕು ಅನಿಸುತ್ತೆ. ಮುಂಬಯಿಯಿಂದ ೨೫ ಕಿಲೋಮೀಟರ್ ದೂರದ ಕೃಷ್ಣಗಿರಿ ಅಥವಾ ಕಾನೇರಿಯೊಂದರಲ್ಲಿಯೇ ನೂರಹನ್ನೆರಡು ಸಣ್ಣ ದೊಡ್ಡ ಬೌದ್ಧಾಲಯಗಳು ಗುಹೆಗಳಲ್ಲಿವೆ. ಅಜಂತಾ, ಎಲ್ಲೋರಾ, ಔರಂಗಬಾದ, ನಾಸಿಕ, ಎಲಿಫಂಟಾ, (ಘಾರಾಪುರಿ) ಕಾರ್ಲಾ ಗುಹಾಲಯಗಳ ನಿರ್ಮಾಣ ಮತ್ತು ಬೆಳವಣಿಗೆಗೆ, ಕನ್ನಡಿಗರ ಕೊಡುಗೆ ಒಂದಿಲ್ಲೊಂದು ವಿಧದಲ್ಲಿ ಇದ್ದೇ ಇದೆ. ಇವುಗಳಲ್ಲಿ ಹೆಚ್ಚಿನವು ಇಂದು ನಿರ್ಲಕ್ಷ್ಯಕ್ಕೊಳಗಾದರೂ, ಅವನ್ನು ಲಕ್ಷ್ಯಪೂರ್ವಕವಾಗಿ ನೋಡಿದಲ್ಲಿ ಅಂದಿನ ಶಿಕ್ಷಣ ಪದ್ಧತಿಯ ಕಲ್ಪನೆ ಬರುತ್ತದೆ.

ಪಶ್ಚಿಮ ಕರಾವಳಿಗುಂಟ ವ್ಯಾಪಿಸಿದ ಸಹ್ಯಾದ್ರಿ ರಾಜನೇ ಈ ಗುಹಾಲಯಗಳಿಗೆ ಆಶ್ರಯದಾತ. ನದಿ, ಸರೋವರ ಇಲ್ಲವೇ ಝುರಿಯ ನೀರು, ಸಿಗುವಲ್ಲಿ ಈ ಕೇಂದ್ರಗಳನ್ನು ಸ್ಥಾಪಿಸಲಾಗಿದೆ. ಎಲಿಫಂಟಾದ ಸುತ್ತಲೂ ಸಮುದ್ರ ಆವರಿಸಿದರೂ ಗುಹೆಯಲ್ಲಿ ಕುಡಿಯುವ ನೀರಿನ ಹೊಂಡವಿದೆ. ನಾಸಿಕದ 'ಲೇಣೆ' (ಗವಿಗಳು) ಎತ್ತರದ ಗುಡ್ಡದ ಮೇಲಿದ್ದರೂ, ಅಲ್ಲಿ ಸ್ವಚ್ಛ ನೀರಿನ ಬಾವಿಗಳಿವೆ. ಅಜಂತಾ ಗುಹೆಗಳ ಎದುರಿನಲ್ಲಿಯೇ ನದಿ ಹರಿಯುತ್ತಿದೆ. ಶಿಲೆಯಲ್ಲಿ ಕೊರೆದು ಗುಹಾಲಯಗಳನ್ನು ನಿರ್ಮಿಸುತ್ತಿದ್ದರು. ಅವುಗಳ ರಚನೆ, ಕಂಭ, ಸೂರುಗಳನ್ನು ನೋಡಿದರೆ ಗಚ್ಚು, ಗಾರೆಗಳಿಂದ ಕಟ್ಟಿದ ಕಟ್ಟಡವೇ! ಎಂದು ಭ್ರಮೆಯಾಗುತ್ತದೆ. (ಚಿತ್ರ 1). ಕೆಲವು ನಿಸರ್ಗ ನಿರ್ಮಿತವಿರಬೇಕು, ಅನಿಸುವಷ್ಟು ಸಾದಾ ಇದ್ದರೆ, ಹಲವು ಅತ್ಯಾಧುನಿಕ ಕಟ್ಟಡಗಳನ್ನು ನಾಚಿಸುವಷ್ಟು ತಾಂತ್ರಿಕ ಪರಿಣತಿಯಿಂದ ಕೂಡಿವೆ. ಒಂದೇ ಅಂತಸ್ತಿನಲ್ಲಿ ಇವುಗಳ ರಚನೆಯಾಗುವದು ಸಾಮಾನ್ಯವಾಗಿದ್ದರೂ, ಎಲ್ಲೋರದಲ್ಲಿ ಕೆಲವು ಎರಡು ಮೂರು ಮಾಳಿಗೆಗಳನ್ನು ಹೊಂದಿವೆ. (ಚಿತ್ರ 2) ಮಹಾದ್ವಾರ, ಚೈತ್ಯಗೃಹಕ್ಕೆ ಪ್ರವೇಶ ನೀಡುತ್ತದೆ. ಅಲ್ಲಿ ಬುದ್ಧನ ಪ್ರತಿಮೆ ಅಥವಾ ಸ್ತೂಪದ ಎದುರು ಸಕಲ ವಿದ್ಯಾರ್ಥಿವೃಂದವೇ ಅಧ್ಯಾಪಕ ಗಣದೊಂದಿಗೆ ನೆರೆದು ಪ್ರಾರ್ಥನೆ ಸಲ್ಲಿಸುವಷ್ಟು ಅವು ವಿಶಾಲವಾಗಿವೆ. ಅವಕ್ಕೆ ಹೊಂದಿ ಪ್ರಶಸ್ತವಾದ ಅಧ್ಯಯನ ಮಂದಿರವಿರುತ್ತದೆ. ಅಲ್ಲಿರುವ ಕಲ್ಲಿನ ಆಸನ, ಬೆಂಚುಗಳು ಅದು ವಿದ್ಯಾರ್ಥಿಗಳು ಪಠಣಕ್ಕೆ ಕೂಡ್ರುತ್ತಿದ್ದ ಸ್ಥಳವೆಂದು ಖಚಿತಪಡಿಸುತ್ತವೆ. ಗೋಡೆಗಳಲ್ಲಿ ಕರಿಹಲಗೆಯಂತೆ ಬಳಸುವ ಚಚ್ಚೌಕಗಳು ಇರುವಂತೆ, ಅಲ್ಲಿ ಇಲ್ಲಿ ಮಸಿ ಮೆತ್ತಿಕೊಂಡ ಗೂಡುಗಳು ದೀಪವಿಡುವ ಸ್ಥಳಗಳೆಂದು ಖಚಿತಪಡಿಸುತ್ತವೆ. ಈ ಪಠಣ ಶಾಲೆಯನ್ನು ಸುತ್ತುವರಿದು ಇರುವ ಸಣ್ಣ ದೊಡ್ಡ ಕೋಣೆಗಳು ಭಿಕ್ಕುಗಳ ವಾಸಸ್ಥಾನಗಳಾಗಿದ್ದವು. ಅವುಗಳಲ್ಲಿ ಒಬ್ಬನಿಂದ ನಾಲ್ವರವರೆಗೆ ಭಿಕ್ಕುಗಳು ವಾಸಿಸಬಹುದಿತ್ತು. ಅಲ್ಲಿ ಕಲ್ಲಿನ ಮಂಚ, ಗೋಡೆಗಳಲ್ಲಿ ದೀಪವಿಡಲು ಗೂಡು, ಬಟ್ಟೆ ತೂಗು ಹಾಕಲು ವ್ಯವಸ್ಥೆಯನ್ನು ಗುರುತಿಸಬಹುದಾಗಿದೆ.

ಕಾರ್ಲಾದ ಗುಹಾಲಯಗಳಲ್ಲೇ ಸುಂದರವಾದ ಪ್ರಾರ್ಥನಾ ಮಂದಿರದಲ್ಲಿದ್ದ ಪ್ರಾಕೃತ ಶಾಸನವೊಂದು "ವೆಜಂತಿತೊ ಸೆಠಿನಾ ಭೂತಪಾಲೇನ ಸೆಲಾಘರಂ ಪರಿನಿಠಾಪಿತಂ"

(ವೈಜಯಂತಿಯ ಸೆಟ್ಟಿ ಭೂತಪಾಲನಿಂದ ಈ ಶಿಲಾಗೃಹದ ನವೀನೀಕರಣವಾಯಿತು) ಎಂದು ಸಾರುತ್ತದೆ. ಈ ಭೂತಪಾಲನು ವೈಜಯಂತಿ ಅಥವಾ ಬನವಾಸಿಯವನು. ಇವನು, ಶಾತವಾಹನ ಕಾಲದಿಂದಲೂ ಗ್ರೀಸ್, ರೋಮಗಳೊಂದಿಗೆ ವ್ಯಾಪಾರ ಮಾಡುತ್ತಿದ್ದ ನಮ್ಮ ನಾಡಿನ ಧನಾಢ್ಯ ಶ್ರೇಷ್ಠಿಗಳಲ್ಲಿ ಒಬ್ಬನಾಗಿರಬೇಕು. ಹತ್ತಿರದ ಕಲ್ಯಾಣ, ಸೋಪಾರಾಗಳು ಪ್ರಸಿದ್ಧ ಬಂದರುಗಳಾಗಿದ್ದವು. ಚಾಲುಕ್ಯ-ರಾಷ್ಟ್ರಕೂಟರ ಕಾಲದಲ್ಲೂ ಅವು ಅಂತರ್ರಾಷ್ಟ್ರೀಯ ರೇವುಗಳಾಗಿದ್ದವು. ಹೀಗಾಗಿ ವಿದ್ಯಾದಾನದ ದತ್ತಿಗಳು ಕಾನೇರಿಯಲ್ಲಿ ಮುಂದರಿದವು. ಕ್ರಿ.ಶ.೭-೮ನೇ ಶತಕಗಳಲ್ಲಿ ವಿದ್ಯಾರ್ಥಿಗಳಾಗಿ, ಚೀನೀ ಪ್ರವಾಸಿಕರು ನಾಲಂದಕ್ಕೆ ಮಧ್ಯ ಏಷ್ಯ ಮತ್ತು ಅಫ್ಘಾನಿಸ್ತಾನ ಮಾರ್ಗವಾಗಿ ಬರುತ್ತಿದ್ದರು. ಅಂಥ ವಿದ್ಯಾರ್ಥಿಗಳಿಗೆ ಸಹಾಯವಾಗಲೆಂದು ಅಫ್ಘಾನಿಸ್ತಾನದಲ್ಲಿ ಕರ್ನಾಟಕದ ಚಾಲುಕ್ಯ ಅರಸರು, ಸಕಲ ಸೌಕರ್ಯಗಳಿಂದ ಕೂಡಿದ ವಿಹಾರವನ್ನು ಕಟ್ಟಿಸಿದ್ದರು. ರಾಷ್ಟ್ರಕೂಟರು ಕ್ರಿ.ಶ.೬೯೦-೭೧೦ರಲ್ಲಿ ಸೌರಾಷ್ಟ್ರದ ಮೈತ್ರಕರನ್ನು ಸೋಲಿಸಿ ತಮ್ಮ ಸತ್ತೆ ಸ್ಥಾಪಿಸಿದರು. ಅಲ್ಲಿಯ ಬೌದ್ಧಶಿಕ್ಷಣ ವ್ಯವಸ್ಥೆಯಲ್ಲಿ ಹಸ್ತಕ್ಷೇಪ ಮಾಡಲಿಲ್ಲವಷ್ಟೇ ಅಲ್ಲ, ಕಾಂಪಿಲ್ಯದ ಐದುನೂರು ಭಿಕ್ಕುಗಳು ಓದುತ್ತಿದ್ದ ಮಹಾವಿಹಾರಕ್ಕೆ ದಂತಿದುರ್ಗ ಮತ್ತು ಇಮ್ಮಡಿ ಧ್ರುವ ಅವರು ದಾನ ದತ್ತಿಗಳನ್ನು ಕೊಡಮಾಡಿದರು. ಬಳ್ಳಿಗಾವಿಯ ಪಂಚ ಮಠಗಳಲ್ಲಿ ಒಂದು ಬುದ್ಧನಿಗೆ ಮೀಸಲಾಗಿದ್ದುದು ಗಮನಾರ್ಹ ವಿಚಾರ. ಬಾಪ್ಪುರ ನಾಗಿಯಕ್ಕನೆಂಬಾತ ಅಲ್ಲಿ ತಾರಾಭಗವತಿಯ ಪ್ರತಿಷ್ಠಾಪನೆ ಮಾಡಿದರೆ, ಬನವಾಸಿಯ ನಿವಾಸಿ ರೂಪಭಟ್ಟ[೫]ಯ್ಯನು ಹುಟ್ಟೂರಿನ ನೆನಪಿಗೆ ಜಯಂತೀ ಪ್ರಭಾ ಎಂಬ ವಿಹಾರ ಕಟ್ಟಿಸಿದ. ಕೆಲ ಶತಕಗಳವರೆಗಾದರೂ ಕರ್ನಾಟಕದಲ್ಲಿ ಬೌದ್ಧ ವಿದ್ಯಾಕ್ರಮ ಒಂದಿಲ್ಲೊಂದು ವಿಧದಲ್ಲಿ ಬಾಳಿಕೊಂಡು ಬಂದದ್ದಕ್ಕೆ ಇವು ನಿದರ್ಶನಗಳಾಗಿವೆ.

ಬೌದ್ಧ ವಿದ್ಯಾಪದ್ಧತಿಯಲ್ಲಿ ಮಕ್ಕಳ ಶಿಕ್ಷಣದ ಪ್ರಾರಂಭ, ಮಾನಸಿಕ ಬೆಳವಣಿಗೆಗೆ ಅನುಗುಣವಾಗಿರುತ್ತಿತ್ತು. ಏಳುವರ್ಷಕ್ಕೆ ಅಕ್ಷರಾಭ್ಯಾಸ ಶುರುವಾಗುತ್ತಿತ್ತು. ಬ್ರಿಟಿಷರ ಕಾಲದ ತನಕ ಇದೇ ವಯಸ್ಸಿಗೆ ಶಾಲೆಗೆ ಸೇರಿಸುವ ಪದ್ಧತಿ ಇತ್ತೆಂದು ಇಲ್ಲಿ ಸ್ಮರಿಸಿಕೊಳ್ಳಬಹುದು. ಆದರೆ ಇಂದು ಮಕ್ಕಳನ್ನು 'ದಿಢೀರ್' ವಿದ್ಯಾವಂತರನ್ನಾಗಿ ಮಾಡುವ ಗಡಿಬಿಡಿಯಲ್ಲಿ ನಾಲ್ಕೈದು ವರ್ಷಕ್ಕೇ ಶಾಲೆಗೆ ಸೇರಿಸಿಬಿಡುವ ಮನೋಧರ್ಮ ನಮ್ಮದು. ಅಂತೆಯೇ ಮಾಧ್ಯಮಿಕ ಶಾಲೆಗೆ ಬಂದರೂ ಕೆಲ ಮಕ್ಕಳ 'ಮಂಗ್ಯಾತನ' ಮಾಯವಾಗಿರುವದಿಲ್ಲ! ಬೌದ್ಧ ವಿದ್ಯಾಲಯಗಳಲ್ಲಿ ಅಕ್ಷರಾಭ್ಯಾಸವಲ್ಲದೇ ವ್ಯಾಕರಣ, ಭಾಷಾಶಾಸ್ತ್ರ, ತರ್ಕಶಾಸ್ತ್ರ (ಹೇತು ವಿದ್ಯೆ), ಚಿಕಿತ್ಸಾ ವಿದ್ಯೆ, ಶಿಲ್ಪಕರ್ಮ ವಿದ್ಯೆ, ಅಧ್ಯಾತ್ಮ ವಿದ್ಯೆಗಳಲ್ಲಿ ತರಬೇತಿ ನೀಡುತ್ತಿದ್ದರು.[೬] ಕೊನೆಯದು ಸನ್ಯಾಸಿಗಳಾಗಬಯಸುವವರಿಗೆ ಮೀಸಲಾದರೂ ಎಲ್ಲರಿಗೂ ನೂಲುವದು, ನೇಯುವದು, ಬಡಿಗತನ, ಚಿತ್ರಕಲೆ ಮುಂತಾದ ಒಂದಿಲ್ಲೊಂದು 'ಶಿಲ್ಪ'(ಸಿಪ್ಪ)ದ ತರಬೇತಿ ಕಡ್ಡಾಯವಾಗಿತ್ತು. ಗುಹಾಲಯಗಳಲ್ಲಿ ಕಾಣಸಿಗುವ ವಾಸ್ತು-ವೈವಿಧ್ಯ ಮತ್ತು ಭಿತ್ತಿಚಿತ್ರಗಳ ಕಲಾತ್ಮಕತೆ ಎಂಥವರೂ ವಿಸ್ಮಯಪಡುವಂತೆ ಮಾಡುತ್ತವೆ.

ಬೌದ್ಧ ಶಿಕ್ಷಣ ಪದ್ಧತಿ ಇಂದು ನಮ್ಮೊಂದಿಗೆ ಇಲ್ಲವಾದರೂ ಅದರ ಕೆಲ ಕುರುಹುಗಳು

ನಮ್ಮ ವಿದ್ಯಾಕ್ರಮದಲ್ಲಿ ಹಾಸುಹೊಕ್ಕಾಗಿವೆ. ಅವರ ವಿದ್ಯಾಭ್ಯಾಸ "ಸಿದ್ಧಂ ನಮಃ" ಎಂಬ ಅಕ್ಷರಗಳಿಂದ ಪ್ರಾರಂಭವಾಗುತ್ತಿತ್ತು. ನಂತರ ಸಿದ್ಧಿರಸ್ತು ಅಥವಾ ಸಿದ್ಧ ಮಾತೃಕೆ ಎಂಬ "ಹನ್ನೆರಡು ಅಧ್ಯಾಯ"ಗಳ (ಕಾಗುಣಿತಗಳ) ಕೋಷ್ಟಕವನ್ನು ಬಳಸಲಾಗುತ್ತಿತ್ತು. 'ಸಿದ್ಧಂ ನಮಃ' ಎಂಬುದನ್ನು ವೈದಿಕರೂ, ಜೈನರೂ ಸ್ವೀಕರಿಸಿದರೆ ಹತ್ತನೆಯ ಶತಕದಲ್ಲಿ ಸಹ, ಭಾರತೀಯರೆಲ್ಲರ ವಿದ್ಯಾಭ್ಯಾಸ, ಸಿದ್ಧಮಾತೃಕೆಯಿಂದ ಪ್ರಾರಂಭವಾಗುತ್ತಿತ್ತು.[೭] ಕನ್ನಡದಲ್ಲಿ ಬಳ್ಳಿಯೆನಿಸಿಕೊಳ್ಳುವ ಮತ್ತು ಏ, ಐ ಗಳಿಲ್ಲದ ಹನೆರಡು ಅಕ್ಷರದ ಕಾಗುಣಿತ, ಮಹಾರಾಷ್ಟ್ರದಲ್ಲಿ, (ಮತ್ತು ಉತ್ತರ ಕರ್ನಾಟಕದಲ್ಲಿ) "ಬಾರಾಖಡೀ" ಅನಿಸಿಕೊಳ್ಳುತ್ತದೆ. ಇದೇ ಬಾರಾಖಡಿಯನ್ನು ಹ್ಯುಯೆನ್ ತ್ಸಾಂಗ್ ೧೨ ಅಧ್ಯಾಯ(Twelve chapters)ದ ಕೋಷ್ಟಕವೆಂದು ಕರೆದ. ಬೌದ್ಧರು ನೆಲೆಗಟ್ಟು ಹಾಕಿದ ಬಾರಾಖಡಿಯ ಬಳ್ಳಿ ಎರಡು ಸಹಸ್ರ ವರ್ಷ ನಡೆದು ಬಂದ ರೀತಿ ವಿಶ್ವವಿದ್ಯಾಪದ್ಧತಿಯಲ್ಲಿ ಒಂದು ದಾಖಲೆಯಾಗಿರಬೇಕು! ಅನೇಕ ಶಾಲೆಗಳಲ್ಲಿ ಇಂದಿಗೂ "ಸಿದ್ಧಂ ನಮಃ" ಎಂದೇ ಪಾಠವನ್ನು ಪ್ರಾರಂಭಿಸುತ್ತಾರೆ.[೮] ಕೆಲವರು ಪತ್ರದ ಪ್ರಾರಂಭದಲ್ಲಿಯೂ ಈ ಪ್ರಾರ್ಥನೆ ಬರೆಯುತ್ತಾರೆ.

ಈಗ ಬೌದ್ಧಧರ್ಮ, ಭಾರತದಲ್ಲಿ ಹೇಳಹೆಸರಿಲ್ಲದೇ ಹೋದರೂ, ನಮ್ಮಿಂದ ಅದನ್ನು ಎರವಲಾಗಿ ಪಡೆದ ಶ್ರೀಲಂಕಾ, ಕಂಪೂಚಿಯ, ವಿಯೆಟ್ನಾಂ, ಬರ್ಮಾ, ತಿಬೇಟ್, ಚೀನ, ಜಪಾನ್‌ಗಳಲ್ಲಿ ಊರ್ಜಿತಾವಸ್ಥೆಯಲ್ಲೇ ಇದೆ. ತಿಬೇಟನ್ನರು ಪ್ರಾಚೀನ ಕಾಲದಿಂದ ಪರರಾಷ್ಟ್ರಗಳ ಆಧುನಿಕತೆಯ ಸೋಂಕು ತಮಗೆ ತಗಲದಂತೆ ಜೀವಿಸಿದ್ದರಿಂದ ಅವರ ಲಾಮಾ ಬೌದ್ಧಧರ್ಮ, ಶತಮಾನಗಳಲ್ಲಿ ಏಕಪ್ರಕಾರವಾಗಿ ಉಳಿದುಕೊಂಡಿದೆ. ರಾಜಕೀಯ ಕಾರಣಗಳಿಗಾಗಿ ಅವರಲ್ಲಿ ಹಲವರು ಭಾರತಕ್ಕೆ ವಲಸೆ ಬಂದಾಗ ಕೆಲವರಿಗೆ ಕರ್ನಾಟಕವೂ ಆಶ್ರಯ ನೀಡಿತು. ಕ್ರಿ.ಶ.೧೯೬೭ರಲ್ಲಿ ಉತ್ತರ ಕನ್ನಡ ಜಿಲ್ಲೆಯ ಮುಂಡಗೋಡ ತಾಲೂಕಿನ ತಟ್ಟಿ ಹಳ್ಳಿಯಲ್ಲಿ ಸುಮಾರು ನಾಲ್ಕು ಸಾವಿರ ಎಕರೆ ಭೂಮಿಯನ್ನು ಅವರಿಗೆ ಕೊಡಮಾಡಿ ಜೀವನೋಪಾಯಕ್ಕೆ ಅನುವು ಮಾಡಿಕೊಡಲಾಯಿತಷ್ಟೆ? ಇಲ್ಲಿಯ ಹವಾಮಾನ ತಿಬೇಟಿನದಕ್ಕೆ ತದ್ವಿರುದ್ಧವಾದರೂ ಬೆನ್ನುಮುರಿ ದುಡಿದು, ಬಾಚಿನ ನದಿಗೆ ಒಡ್ಡು ಕಟ್ಟಿ ಒಂಬತ್ತು ಶಿಬಿರಗಳನ್ನು ಸ್ಥಾಪಿಸಿದರು. ಇವುಗಳಲ್ಲಿ ಎರಡು ಧರ್ಮಬೋಧನೆಯ ಕೇಂದ್ರಗಳಾಗಿವೆ. ಅವರ ಮುಖ್ಯ ಆರಾಧ್ಯದೇವತೆ, ಬುದ್ಧ ಅವಲೋಕಿತೇಶ್ವರ.

ಅವರ ಗೋಮಾಂಗ್, ಶಾಕ್ಯ, ಶಾರ್ಸೆ ಬೌದ್ಧಾಲಯಗಳನ್ನು ವೀಕ್ಷಿಸಿದಾಗ, ಗತಕಾಲದ ವಿಹಾರ, ಚೈತ್ಯಗೃಹ ಮತ್ತು ಪ್ರಾರ್ಥನಾಮಂದಿರಗಳು ಹೇಗೆ ಚಟುವಟಿಕೆಯಿಂದ ಪುಟಿಯುತ್ತಿದ್ದವು! ಎಂಬ ಸ್ಪಷ್ಟ ಕಲ್ಪನೆ ಬರುತ್ತದೆ. ಅಲ್ಲಿ ಕಳ್ಳಕಾಕರ ಭಯವಿಲ್ಲ. ಕೊಲೆಸುಲಿಗೆಯ ಹೆಸರೇ ಇಲ್ಲ. ವಿದ್ಯಾಭ್ಯಾಸಕ್ಕಾಗಿ ಅತ್ಯಂತ ಶಾಂತ ವಾತಾವರಣ. ಎಲ್ಲೆಡೆಯಲ್ಲಿ ಅಚ್ಚ ಹಳದಿ, ತಿಳಿ ಕೆಂಪು ಬಣ್ಣ ಲೇಪಿಸಿದ್ದಾರೆ. ಅಲ್ಲಲ್ಲಿ ಪಗೋಡಗಳನ್ನು ಹೋಲುವ 'ಚೋರಟನ್'ಗಳು. ಇವು ಮೃತ ಲಾಮಾರ ಅವಶೇಷಗಳನ್ನು ಹೊಂದಿದ ಕಲ್ಲು ಮಣ್ಣಿನಿಂದ ಕಟ್ಟಿ, ಸುಣ್ಣ-ಬಣ್ಣ ಲೇಪಿಸಿದ ಗೋರಿಗಳು. ಇವನ್ನು ತಿಬೇಟನ್ನರ ಸ್ತೂಪಗಳೆಂದು ಕರೆಯಬಹುದು. ಮುಂಬರುವ ಜನ್ಮದ

ಒಳಿತಿಗಾಗಿ ತಿಬೇಟನ್ನರು ಇಂಥವನ್ನು ಕಟ್ಟುತ್ತಲೇ ಇರುತ್ತಾರೆ. ಜನ್ಮಾಂತರಗಳಲ್ಲಿ ವಿಶ್ವಾಸವಿಟ್ಟು, ಭವಿಷ್ಯ ಸಂತತಿಗಾಗಿ, 'ಓಂ ಮಣಿ ಪದ್ಮೋಹಂ' ಜಪಿಸುತ್ತಿರುತ್ತಾರೆ. ಜಪಕ್ಕಾಗಿ ಕೆಲವರು ಪ್ರಾರ್ಥನಾ ಚಕ್ರ ಬಳಸಿದರೆ, ಕೆಲವರು ಜಪಮಾಲೆ ಎಣಿಸುತ್ತಿರುತ್ತಾರೆ. ಪ್ರತಿ ಸದಸ್ಯನೂ ಒಂದಲ್ಲೊಂದು ಚಟುವಟಿಕೆಯಲ್ಲಿ ತೊಡಗಿರುತ್ತಾನೆ. ವೇಳೆಯ ಅಪವ್ಯಯವೆಂಬುದು ಅವರಿಗೆ ಅರಿಯದ ಮಾತು. ವಿದ್ಯಾರ್ಥಿಗಳು ನೀರು, (ಚಿತ್ರ 3) ಉರುವಲು ತರುವಂತಹ ಕಾಯಕದಲ್ಲಿ ತೊಡಗಿರಲೇಬೇಕು.

ಪ್ರತಿ ಕುಟುಂಬದಿಂದ ಒಬ್ಬ ಸದಸ್ಯನಾದರೂ ಧರ್ಮದ ಅಭ್ಯಾಸ ಕೈಕೊಳ್ಳಬೇಕೆಂಬ ಕಡ್ಡಾಯ ಅವರಲ್ಲಿದೆ. ಇವರಿಗೆ ಊಟ, ವಸತಿ, ಶಿಕ್ಷಣ ಎಲ್ಲವೂ ಉಚಿತ. ಪ್ರಾರ್ಥನಾ ಮಂದಿರದಲ್ಲಿ ರೇಶಿಮೆಯ ಹಳದಿ, ಕೇಸರಿ ಪತಾಕೆಗಳನ್ನು ತೂಗಹಾಕಿರುತ್ತಾರೆ. ಕುಸರಿ ಕೆಲಸವಿದ್ದ ಪೀಠದ ಮೇಲೆ ಬುದ್ಧನ ಪ್ರತಿಮೆಯನ್ನು ಸ್ಥಾಪಿಸಿರುತ್ತಾರೆ. ಅಲ್ಲಲ್ಲಿ ಸುಂದರವಾದ ನಕ್ಷೆಯಿದ್ದ ಕೊರಡಿನ ಕೆತ್ತನೆ ಕೆಲಸ. ಹಿರಿಯ ಲಾಮಾ (ಧರ್ಮಗುರು) ಪ್ರವೇಶಿಸಿದಾಗ, ವಿದ್ಯಾರ್ಥಿಗಳು ನಿಷ್ಠೆಯಿಂದ ಅಡ್ಡಬಿದ್ದು, ನಾಲಿಗೆ ಹೊರಚಾಚಿ, ತಮ್ಮ ವಿಧೇಯತೆ ಸೂಚಿಸುತ್ತಾರೆ. ಕಹಳೆಯೂದಿ, ಸಗಾರಿ ಬಾರಿಸಿ, ಪ್ರಾರ್ಥನೆ ಮುಗಿಸಿ, ಭಿಕ್ಕುಗಳು ತಮ್ಮ ತಮ್ಮ ವರ್ಗಗಳಿಗೆ ತೆರಳುತ್ತಾರೆ. ಅವರ ಶಿಕ್ಷಣ ಕ್ರಮದಲ್ಲಿ ತಿಬೇಟಿ ಭಾಷೆಯ ಅಕ್ಷರ ಬರೆಯುವದು, ಓದುವದು ಮತ್ತು ಲೆಕ್ಕ ಮಾಡುವದಕ್ಕೆ ಪ್ರಾಧಾನ್ಯ. ಸುಮಾರು ಒಂದು ಅಂಗುಲ ಅಗಲ, ಒಂದು ಮೊಳ ಉದ್ದದ ಕರಿಹಲಗೆ(ಪಾಟಿ)ಯ ಮೇಲೆ, ಬಿದಿರಿನ ಲೇಖನಿಯಿಂದ ಕರಿಮಸಿಯಿಂದ ಸುಂದರ ಅಕ್ಷರಗಳನ್ನು ಬರೆಯುವದನ್ನು ಕಲಿಸುತ್ತಾರೆ. (ಚಿತ್ರ 4) ಕಾಲಕಾಲಕ್ಕೆ ಶಿಕ್ಷಕರಿಗೆ ತೋರಿಸಿ, (ಚಿತ್ರ 5) ತಿದ್ದಿಸಿ, ತಿರುಗಿ ಬರೆಯುತ್ತಾರೆ. ಈ ಅಕ್ಷರಗಳನ್ನು ಬಟ್ಟೆಯಿಂದ ಸುಲಭವಾಗಿ ಒರೆಸಬಹುದು. ಭೂರ್ಜ ಪತ್ರದ ಮೇಲೆ ಬರೆದ ಧಾರ್ಮಿಕ ಗ್ರಂಥಗಳನ್ನು ಸಹಾಯಕ ಹಲಗೆಯ ಮೇಲೆ ಇಟ್ಟು ಓದುವದನ್ನು ಕಲಿಸುತ್ತಾರೆ. (ಚಿತ್ರ 6) ಶರೀರವನ್ನು ಜೋಕಾಲಿಯಂತೆ ತೂಗಿಸುತ್ತ ರಾಗವಾಗಿ ಓದುವದು ಕೇಳಲು ಇಂಪಾಗಿರುತ್ತದೆ. ಅವರಿಗೆ ಚಿತ್ರಕಲೆಯನ್ನು ಕಲಿಸಲಾಗುತ್ತದೆ. ಇದಲ್ಲದೇ ವಿದ್ಯಾರ್ಥಿಗಳು ಅಡಿಗೆ ಮಾಡುವದರಲ್ಲಿ, ಕೃಷಿಯಲ್ಲಿ, ಇತರ ಕೆಲಸಗಳಲ್ಲಿ ನೆರವು ನೀಡಬೇಕಾಗುತ್ತದೆ. ಶತಮಾನಗಳ ಹಿಂದೆ ಕರ್ನಾಟಕದ ವಿಹಾರಗಳಲ್ಲಿ ವಿದ್ಯಾರ್ಥಿಗಳು ಇಂತಹದೇ ಜೀವನ ನಡೆಸುತ್ತಿದ್ದಿರಬೇಕು ಎಂದು ಅನಿಸುತ್ತದೆ.

## ಸಂದರ್ಭ ಸೂಚಿ

೧. ಥಾಮಸ್ ವಾಟರ್ಸ್: "ಆನ್ ಯುಆನ್ ಚ್ವಾಂಗ್‌ಸ್ ಟ್ರಾವಲ್ಸ್ ಇನ್ ಇಂಡಿಯಾ" (ಹ್ಯೂಯೆನ್ ತ್ಸಾಂಗ್) II ಪು.೨೩೯ (ವಾಟರ್ಸ್), ಲಂಡನ್ ೧೯೦೪.
೨. ಆರ್ಥರ್ ವೇರಿ: "ದಿ ರಿಯಲ್ ತ್ರಿಪಿಟಕ್ ಎಂಡ್ ಅದರ್ ಪೀಸಸ್", ಲಂಡನ್ ೧೯೫೨, ಪು.೯-೧೩೦.
೩. ಸುಕುಮಾರ್ ದತ್: "ಬುದ್ಧಿಸ್ಟ್ ಮೊಂಕ್ಸ್ ಎಂಡ್ ಮೊನ್ಯಾಸ್ಟರೀಸ್ ಆಫ್ ಇಂಡಿಯಾ", ಲಂಡನ್ ೧೯೬೨, (ದತ್) ಪು.೧೨೮.

೪. ಪೂರ್ವೋಕ್ತ: ಕಾಪಿಶ (ಅಫ್ಘಾನಿಸ್ತಾನದ ಕಾಫಿರಿಸ್ತಾನ್)ದ ವಿಹಾರ ಕಟ್ಟಿಸಿದ್ದು ಗುಜರಾತದ ಚಾಲುಕ್ಯರು ಎಂದು ಪ್ರೊಫೆಸರ್ ದತ್ ಉಲ್ಲೇಖಿಸಿದ್ದಾರೆ. ಆದರೆ ಅದು ಬಾದಾಮಿಯ ಚಾಲುಕ್ಯರು, ಪ್ರವಾಸಿಗಳಿಗಾಗಿ ಕಟ್ಟಿಸಿದ ಮಠವಾಗಿತ್ತು, ಪು. ೩೩೮.

ಅದೇ ಪು.೨೩೦.

೫. ಎ.ಕ. VII ಶಿಕಾರಪುರ ೧೭೦.

೬. ವಾಟರ್ಸ್: ಪೂರ್ವೋಕ್ತ: I ಪು. ೧೫೪-೧೫೫.

೭. ಅಲ್ಬರೂನಿ I ಪು.೧೭೩.

೮. ಬಿ. ಶೇಷಗಿರಿರಾವ್: "ಆಂಧ್ರ ಕರ್ನಾಟಕ ಜೈನಿಸಂ", ಮದ್ರಾಸ್ ೧೯೨೨, ಪು.೬೪.

# ೨. ಜೈನರಲ್ಲಿ

ಗೌತಮಬುದ್ಧ ಮತ್ತು ಮಹಾವೀರರು ಸಮಕಾಲೀನರಾದರೂ ಬೌದ್ಧಧರ್ಮಕ್ಕಿಂತ ಮೂರು ತಲೆಮಾರು ಮೊದಲೇ ಕನ್ನಡ ನಾಡಿನಲ್ಲಿ ಜೈನಧರ್ಮ ಕಾಲಿಟ್ಟಿತ್ತು. ಭಾರತದ ಒಳಗೂ ಹೊರಗೂ ಬೌದ್ಧಧರ್ಮ ಹರಡಲು ಕಾರಣನಾದ ಅಶೋಕ ಚಕ್ರವರ್ತಿಯ ಅಜ್ಜ, ಚಂದ್ರಗುಪ್ತ ಮೌರ್ಯನು, ಜೈನನಾಗಿದ್ದು, ತನ್ನ ಗುರುಗಳಾದ ಉಜ್ಜಯನಿಯ ಭದ್ರಬಾಹು ಸ್ವಾಮಿಯೊಡನೆ ಶ್ರವಣಬೆಳಗೊಳ (ಕಟವಪ್ರ)ಕ್ಕೆ ಬಂದು ವೃದ್ಧಾಪ್ಯವನ್ನು ಇಲ್ಲಿಯೇ ಕಳೆದನೆಂದು ಜ್ಞಾಪಿಸಿಕೊಳ್ಳಬಹುದು.[೧] ಉಳಿದ ಧರ್ಮಗಳ ಶೈಕ್ಷಣಿಕ ಕೇಂದ್ರಗಳು ನಾಯಿಕೊಡೆಗಳಂತೆ ಹುಟ್ಟಿ ಅದೃಶ್ಯವಾದರೂ, ಶ್ರವಣಬೆಳಗೊಳ, ಎರಡು ಸಹಸ್ರವರ್ಷಕ್ಕೂ ಮಿಕ್ಕಿ ವಿದ್ಯಾದಾನ ಮಾಡುತ್ತಲೇ ಬಂದಿರುವದು ಗಮನಾರ್ಹ ಸಂಗತಿ. ಕ್ರಿಸ್ತಶಕದ ಪೂರ್ವದಿಂದಲೂ ಅದು ಜೈನರಿಗೆಲ್ಲ ಅತ್ಯಂತ ಪವಿತ್ರವಾದ ಶೈಕ್ಷಣಿಕ ಮತ್ತು ಧಾರ್ಮಿಕ ಕೇಂದ್ರವಾಗಿದೆ. ಸಾಮಾಜಿಕ, ರಾಜಕೀಯ, ಆರ್ಥಿಕ ವ್ಯವಸ್ಥೆಯಲ್ಲಿ ಎಂಥ ಜಡಿಮಳೆ, ಸುಂಟರಗಾಳಿ ಬಂದರೂ ಜೈನಧರ್ಮ, ತಾನು ನಡೆದು ಬಂದ ದಾರಿಯನ್ನು ಚಾಚೂ ತಪ್ಪದೇ ಅನುಸರಿಸುತ್ತದೆ, ಎಂದು ವಿಶ್ವಕ್ಕೇ ಸಾರಲು, ಒಂದು ಸಹಸ್ರ ವರ್ಷಗಳಿಂದಲೂ ದೊಡ್ಡ ಬೆಟ್ಟದ ತುತ್ತ ತುದಿಯಲ್ಲಿ ಗೋಮಟೇಶ್ವರ ಬಾಹುಬಲಿಯು ಜೀವನದ ನಶ್ವರತೆಯನ್ನು ಮಂದಸ್ಮಿತತೆಯಿಂದಲೇ ಸಾರುತ್ತ ನಿಂತಿದ್ದಾನೆ. ಈ ಧರ್ಮವನ್ನು ಮನಸಾ ಪಾಲಿಸುವವರಿಗೆ ಅಂಥ ನಿರ್ಲಿಪ್ತತೆಯ ಸಾಕ್ಷಾತ್ಕಾರವಾಗುವದರಲ್ಲಿ ಸಂದೇಹವಿಲ್ಲ.

ಜೀವದಯೆ, ಜೈನಧರ್ಮದ ತಿರುಳು. ಅಧಿಕಾರ, ಧನಸಂಚಯಗಳುಳ್ಳ ಯಾರನ್ನೂ ಮಹಾನ್ ಎಂದು ಪರಿಗಣಿಸುವ ಬದಲಾಗಿ ತ್ಯಾಗ, ಪರೋಪಕಾರ, ಅಧ್ಯಯನ, ದಾನ, ಧಾರ್ಮಿಕ ಪ್ರವಾಸಗಳು ಅವರ ಜೀವನದ ಯಶಸ್ಸಿನ ಅಳತೆಗೋಲುಗಳು. ಅಂತೇ ಪ್ರಸಿದ್ಧ ಜೈನಗುರುಗಳೆಲ್ಲ, ನಿರಾಡಂಬರವಾಗಿ ಸಾರ್ವಜನಿಕರ ಲಕ್ಷ ಸೆಳೆಯದೇ ಶಿಕ್ಷಣ, ಧರ್ಮಬೋಧೆಗೆ ಜೀವನವನ್ನು ಮುಡಿಪಿಡುತ್ತಿದ್ದರು. ಜೀವನದ ಸಕಲ ಆಕರ್ಷಣೆಗಳನ್ನು ಮೆಟ್ಟಿನಿಂತು, ಕಠಿಣ ದೇಹದಂಡನೆ ಕೈಕೊಂಡು, ದಿಗಂಬರರಾಗಿ ಅಲೆಯುವಂತಹ ಘನಪಿದ್ವಾಂಸರು ಬೇರೆ ಇನ್ನಾವ ಧರ್ಮದಲ್ಲಿ ಇದ್ದಾರೆ? ಶರೀರವನ್ನು ವಿವಿಧ ರೀತಿಯ ವ್ರತ, ಉಪವಾಸ, ತಪಗಳಿಗೆ ಒಳಪಡಿಸಿದಾಗಲೇ ಪರೋಪಕಾರ, ಪರದ ಚಿಂತನೆ ಮಾಡಲು ಸಾಧ್ಯವೆಂಬುದು ಅವರ ನಂಬಿಕೆ. ಜಿನಾಲಯಗಳಲ್ಲಿ ಡಾಂಭಿಕತೆಗೆ ಅವಕಾಶವಿಲ್ಲ. ನಿಜವಾದ ಗುರುವಿಗೆ ನವಿಲುಗರಿಗಳ

ಕಿರುಚಾಮರ, ನೀರಿಗಾಗಿ ಕಮಂಡಲಗಳಷ್ಟೇ ಅಮೂಲ್ಯ ಸೊತ್ತುಗಳೆಂದರೆ ನಂಬುವದು ಕಷ್ಟ! ಜೈನರಲ್ಲಿ ಶಿಕ್ಷಕನು ಧರ್ಮಬೋಧಕನೂ ಹೌದು, ಧರ್ಮಪ್ರಚಾರಕ ಶಿಕ್ಷಕನೂ ಹೌದು. ಅಂತೆಯೇ ಅವರಲ್ಲಿ ಶಿಕ್ಷಣ, ಧರ್ಮ, ಅಧ್ಯಯನಗಳು ಸಕ್ರಿಯವಾಗಿ ಹಾಸುಹೊಕ್ಕಾಗಿವೆ.

ಜಿನಾಲಯಗಳಲ್ಲಿ ಶಿಕ್ಷಣ ಪಡೆಯುವವನು, ಭವಿಷ್ಯದ ಧರ್ಮಬೋಧಕನೂ ಆಗಿರುವದರಿಂದ ವಿದ್ಯಾರ್ಥಿಗಳನ್ನು ಆರಿಸುವಾಗ ಅತಿ ಎಚ್ಚರಿಕೆ ವಹಿಸಲಾಗುತ್ತಿತ್ತು. ಪ್ರವಜ್ಯಾ ದಾಯಕನೆಂಬ ಅಧಿಕಾರಿ, ಪ್ರತಿಯೊಬ್ಬ ಅಭ್ಯರ್ಥಿಯ ಶೈಕ್ಷಣಿಕ, ಧಾರ್ಮಿಕ ಅರ್ಹತೆಗಳನ್ನು ಒರೆಗಲ್ಲಿಗೆ ಹಚ್ಚಿ ನೋಡುತ್ತಿದ್ದ. ಜೈನಬಸದಿಯಲ್ಲಿ ಪ್ರವೇಶ ದೊರಕಿಸಿದ ನಂತರವೂ ಪ್ರತಿಯೊಬ್ಬ ವಿದ್ಯಾರ್ಥಿಯ ನಡಾವಳಿಕೆಯನ್ನು ನಿರ್ಯಾಪಕನು ಕಣ್ಣಲ್ಲಿ ಕಣ್ಣಿಟ್ಟು ನಿರೀಕ್ಷಿಸಿ ಕೆಲವರನ್ನು ಎಚ್ಚರಿಸಿ, ದಂಡಿಸುತ್ತಿದ್ದ. ಕಲಿಯುವಿಕೆಯಲ್ಲಿ ಶ್ರದ್ಧೆ ಸಾಲದು, ಎಂದು ಗುರುತಿಸಿದವರನ್ನು ಸುಖವಾಗಿ ಬಾಳಲು, ಹಿಂದಿರುಗಿ ಕಳಿಸಲೂ ಹಿಂದೆ ಮುಂದೆ ನೋಡುತ್ತಿರಲಿಲ್ಲ. ಹೊಸ ವಿದ್ಯಾರ್ಥಿಗಳಿಗೆ ಕಠಿಣ ಜೀವನದ ಪ್ರಾರಂಭಿಕ ಪಾಠಗಳಾಗುತ್ತಿದ್ದವು. ಇದಕ್ಕಾಗಿ ಅವರನ್ನು ಕಾಡುಮೇಡುಗಳಲ್ಲಿ ಅಲೆದಾಡಿಸುತ್ತಿದ್ದರು. ವೈಯಕ್ತಿಕ ಅಗತ್ಯತೆಗಳನ್ನೆಲ್ಲ ಸ್ವತಃ ಪೂರೈಸಿಕೊಳ್ಳ ಬೇಕಾಗಿತ್ತು. ಸಾಧನಾರತರಿಗೆ ಬಸದಿ, ಮಠಗಳಲ್ಲಿ ದಾನಿಗಳು ಎಲ್ಲ ಅನುಕೂಲತೆಗಳನ್ನು ಪೂರೈಸುತ್ತಿದ್ದರೂ, ಭಿಕ್ಷಾಟನೆಯಿಂದ ಆಹಾರ ಸಂಗ್ರಹಿಸಬೇಕಾಗಿತ್ತು. ಊಟದಲ್ಲಿ ತಾಮಸ ಅಂಶದ ವ್ಯಂಜನಗಳಿಗೆ ಸ್ಥಾನವೇ ಇರಲಿಲ್ಲ. ನಂತರ ಸಿಟ್ಟು, ಆನಂದ, ದುಃಖಗಳನ್ನು ನಿಯಂತ್ರಿಸಲು ತರಬೇತಿ ನೀಡಲಾಗುತ್ತಿತ್ತು. ನಿರ್ಗ್ರಂಥರಲ್ಲಿ (ದಿಗಂಬರರಲ್ಲಿ) ಅಧ್ಯಯನದ ಮಟ್ಟ ಏರಿದಂತೆ ಬಳಸುವ ಬಟ್ಟೆಯ ಪ್ರಮಾಣ ಕಡಿಮೆಯಾಗುತ್ತ ಹೋಗುತ್ತಿತ್ತು.

ಜಿನಾಲಯದ ಸಕಲ ಚಟುವಟಿಕೆಗಳು ಪಂಚಪರಮೇಷ್ಠಿಗಳ ಸುತ್ತ ಕೇಂದ್ರೀಕೃತ ವಾಗಿರುತ್ತಿದ್ದವು. ಇವರಲ್ಲಿ 'ಅರ್ಹತ್'ರು ಮತ್ತು 'ಸಿದ್ಧ'ರು ತೀರ್ಥಂಕರರ ಸಮಾನರು. 'ಆಚಾರ್ಯ'ರು', ಶ್ರೇಷ್ಠ ವಿದ್ವಾಂಸರಾಗಿದ್ದು ಬಸದಿಗಳ ದಿನಂಪ್ರತಿ ಆಗುಹೋಗುಗಳ ಮೇಲ್ವಿಚಾರಕರು. 'ಉಪಾಧ್ಯಾಯ'ರು ವಿಷಯಗಳ ಅಧ್ಯಾಪಕರು. ಶ್ರಮಣ (ಸವಣ)ರು ಸನ್ಯಾಸಿಗಳಾಗಿದ್ದು ಜನ ಸಾಮಾನ್ಯರೊಂದಿಗೆ ನಿಕಟ ಸಂಬಂಧ ಹೊಂದಿದ 'ಸಾಧು'ಗಳು. ಈ ಎಲ್ಲ ಸಂಘಟಕರಿಗೆ ಬೇರೆ ಮನೆ, ಸಂಸಾರ ಇರುತ್ತಿರಲಿಲ್ಲವಾದ್ದರಿಂದ, ತಮ್ಮ ಸಕಲ ಆಯುಷ್ಯವನ್ನು ಜಿನಾಲಯದ ಉನ್ನತಿಗಾಗಿ ಮೀಸಲಿಡುತ್ತಿದ್ದರು. ಆದರೆ ಒಂದೇ ಕಡೆ ಅವರು ನೆಲೆಸಿದರೆ ಮಾಯೆ-ಮೋಹಗಳ ಲಿಪ್ತತೆ ಸೋಕುವ ಸಾಧ್ಯತೆ ಇದ್ದುದರಿಂದ, ಆಗಾಗ ಬೇರೆ ಬಸದಿಗಳ ಮೇಲ್ವಿಚಾರಕರಾಗಿ ಹೋಗುತ್ತಿರುತ್ತಿದ್ದರು. ಇದರಿಂದ ತಾವೆಲ್ಲ ಜೈನ ಶಿಕ್ಷಣ ಮತ್ತು ಧರ್ಮ ಪ್ರಸಾರಕ್ಕಾಗಿ ಕಂಕಣಬದ್ಧರಾದ ವಿಶ್ವಕುಟುಂಬಿಗಳೆಂಬ ಭಾವನೆ ಮೂಡುತ್ತಿತ್ತು. ಜೈನಸಂಸ್ಥೆಗಳು ಪೂರೈಸುತ್ತಿದ್ದ ಊಟ, ವಸತಿ, ಆಶ್ರಯ ಬಿಟ್ಟು ಬೇರಾವ ಪ್ರತಿಫಲವೂ ಅವರಿಗೆ ದೊರೆಯುತ್ತಿರಲಿಲ್ಲ.

ವಿದ್ಯಾರ್ಥಿಗಳೂ ಸಾಧುಗಳೂ ಒಟ್ಟಿಗೆ ಇರುತ್ತಿದ್ದ ಜಿನಾಲಯಗಳಲ್ಲಿ ಕೆಲ ಸಾಮಾನ್ಯ ನಿಯಮಾವಳಿಗಳಿದ್ದವು. ಆಚಾರ್ಯರು ಆಗಮಿಸಿದಾಗ, ಗೌರವಾರ್ಥ ಎಲ್ಲರೂ ಎದ್ದುನಿಂತು

ವಂದನೆಗಳನ್ನು ಸಲ್ಲಿಸುತ್ತಿದ್ದರು. ಯೋಗ್ಯ ಆದರೋಪಚಾರಗಳನ್ನು ಮಾಡಿ ದಣಿವಾರಿಸುತ್ತಿದ್ದರು. ಗುರುಗಳು ಹೊರಟು ನಿಂತಾಗ ಅನತಿ ದೂರ ಹಿಂಬಾಲಿಸುತ್ತಿದ್ದರು. ಹೆಚ್ಚಿನ ವಿದ್ಯೆಯನ್ನು ಗುರುಮುಖೇನ ಕಲಿಯುತ್ತಿದ್ದರಿಂದ ಶಿಷ್ಯರಿಗೆ ಶ್ರವಣ ಅಥವಾ ಸಮಣನೆಂಬ ಹೆಸರು ಬಂದಿತು. ಶತಕಗಳಿಂದ ಶ್ರವಣರನ್ನು ಆಕರ್ಷಿಸಿದ ಭೂಮಿ, ಶ್ರವಣಬೆಳಗೊಳವೆಂದು (ಶ್ರವಣ+ಬಿಳಿ+ಕೊಳ; (ಶ್ರವಣ = ಗಮನವಿಟ್ಟು ಕೇಳುವದು, ಕೇಳುವವ) ಹೆಸರು ಪಡೆಯಿತು. ಸಣ್ಣ, ದೊಡ್ಡ ಬೆಟ್ಟಗಳಿಗೆ ಕನ್ನಡಿ ಹಿಡಿದಂತೆ ಇದ್ದ ಬಿಳಿ ನೊರೆಯ ಕೊಳ ಈ ಹೆಸರನ್ನು ಪುಷ್ಟೀಕರಿಸುತ್ತದೆ. ಗುರುಗಳು ಕಲಿಸಿದ್ದನ್ನು ವಿದ್ಯಾರ್ಥಿಗಳು ಪುನರುಚ್ಚರಿಸುತ್ತಿದ್ದರು, ಪ್ರಶ್ನೆ ಕೇಳುತ್ತಿದ್ದರು, ಚರ್ಚೆ ಮಾಡುತ್ತಿದ್ದರು. ನಂತರ ಆ ವಿಷಯದ ಬಗ್ಗೆ ಆಳವಾದ ಅಭ್ಯಾಸ ಮಾಡಿ, ಮನನ ಮಾಡಿಕೊಳ್ಳುತ್ತಿದ್ದರು. ಇವುಗಳ ಜೊತೆಯಲ್ಲಿ ಜೈನಶಾಸ್ತ್ರಗಳನ್ನು ಆಳವಾಗಿ ಅಭ್ಯಸಿಸುತ್ತಿದ್ದರು. ಧರ್ಮಪ್ರಸಾರಕ್ಕಾಗಿ, ಜೈನಾಗಮಗಳ ಪ್ರತಿಮಾಡಿ ಹಂಚುತ್ತಿದ್ದರು. ಆಗಾಗ ಪಂಡಿತರ ಸಭೆಗಳಲ್ಲಿ ಪಾಲುಗೊಳ್ಳುತ್ತಿದ್ದರು. ಜನ ಸಾಮಾನ್ಯರೊಂದಿಗೆ ಒಂದಾಗಿ ಅವರಿಗೆ ಅರ್ಥವಾಗುವ ಸುಲಭ ಭಾಷೆ, ಶೈಲಿಗಳಲ್ಲಿ ಧರ್ಮ ಬೋಧೆ ಮಾಡುತ್ತಿದ್ದರು. ಗುರು-ಶಿಷ್ಯರು ಒಂದೇ ಕಡೆಯಲ್ಲಿ ವಾಸಮಾಡುತ್ತಿದ್ದುದರಿಂದ ವಿಚಾರ-ವಿಮರ್ಶೆಗಳಿಗೆ ಅಪಾರ ಅವಕಾಶಗಳು ದೊರೆಯುತ್ತಿದ್ದವು. ದೇಶ ಪರ್ಯಟನ, ಶಿಕ್ಷಣದ ಅವಿಚ್ಛಿನ್ನ ಅಂಗವಾಗಿದ್ದರಿಂದ ಹೃದಯ ವೈಶಾಲ್ಯತೆ ಬೆಳೆಯುತ್ತಿತ್ತು. ಎಂತಲೇ ದೀನ-ದಲಿತರು, ಅನಾರೋಗ್ಯದಿಂದ ಬಳಲುತ್ತಿದ್ದವರ ಕರೆಗೆ ಅವರು ಸದಾಕಾಲ ಓಗೊಟ್ಟು ಧಾವಿಸುತ್ತಿದ್ದರು.

ಜೈನ ಶಿಕ್ಷಣದಲ್ಲಿ ವರ್ತಕರದು, ಸಾಮಾನ್ಯ ಪ್ರಜೆಗಳದು ಮಹತ್ವದ ಪಾತ್ರವಿದೆ. ಅವರನ್ನೆಲ್ಲ ಆಗಾಗ ಬಸದಿಗಳಿಗೆ ಬರಮಾಡಿಕೊಂಡು, ವಿಚಾರ ವಿಮರ್ಶೆ, ಬೋಧನೆಗಳಲ್ಲಿ ಪಾಲುಗೊಳ್ಳುವಂತೆ ಮಾಡುತ್ತಿದ್ದರು. ವರ್ತಕವರ್ಗ, ಈ ಅವಕಾಶದ ಸಂಪೂರ್ಣ ಲಾಭಪಡೆದು, ಹಲವಾರು ಭಾಷೆಗಳನ್ನು ತಮ್ಮವನ್ನಾಗಿ ಮಾಡಿಕೊಳ್ಳುತ್ತಿದ್ದರು. ಕೆಲವು ಲಿಪಿಗಳನ್ನಾದರೂ ರೂಢಿ ಮಾಡಿಕೊಂಡಿರುತ್ತಿದ್ದರು. ದೇಶ-ವಿದೇಶಗಳಲ್ಲಿ ಸಂಚರಿಸುವ ಈ ವರ್ಗದ ಕೊಡುಗೆ, ವಿವಿಧ ಭಾಷೆ ಮತ್ತು ಲಿಪಿಗಳ ಬೆಳವಣಿಗೆಯಲ್ಲಿ ದೊಡ್ಡದು ಎಂದು ನಂಬಲಾಗಿದೆ.

ಈ ವ್ಯಾಪಾರಿವರ್ಗ, ತಮ್ಮ ವ್ಯವಸಾಯ ಮತ್ತು ಧರ್ಮಾಚಾರಣೆಗಳನ್ನು ಬೇರೆ ಬೇರೆಯಾಗಿ ಇಟ್ಟುಕೊಂಡಿದ್ದು ಗಮನಾರ್ಹ. ಮುಂಜಾನೆ ಎದ್ದು ಇರುವೆಗಳಿಗೆ ಸಕ್ಕರೆ, ವರಲೆಗೆ (ಗೆದ್ದಲಿಗೆ) ರವೆ, ಪಕ್ಕಿಗಳಿಗೆ ನೀರು, ಹದ್ದುಗಳಿಗೆ ತಿಂಡಿಯನ್ನು ಉದಾರ ಹಸ್ತದಿಂದ ಕೊಡ ಮಾಡುತ್ತಿದ್ದರು. ವ್ಯಾಪಾರದಲ್ಲಿ ತೊಡಗಿದಾಗ, ಇನ್ನಾರಿಗೂ ಕಡಿಮೆ ಇಲ್ಲದಷ್ಟು ಲಾಭದ ಕೊಳ್ಳೆ ಹೊಡೆಯುತ್ತಿದ್ದರು. ಆದರೆ ಅದರ ಬಹುದೊಡ್ಡ ಪಾಲು ಜನರ ಸೇವೆಗೆ ಮೀಸಲು. ಅಂತೆಯೇ ಬಡಬಗ್ಗರಿಗೆ ಶಾಲೆಗಳು, ಆಸ್ಪತ್ರೆಗಳು, ಯಾತ್ರಿಕರಿಗಾಗಿ ದೇಶದ ಉದ್ದಗಲಕ್ಕೂ ಧರ್ಮಶಾಲೆಗಳನ್ನು ನಿಲ್ಲಿಸಿದರು. ಜಿನಾಲಯ-ಬಸದಿಗಳಲ್ಲಿ ನಡೆಯುವ ಶಿಕ್ಷಣಕ್ಕಾಗಿ ಅಪಾರ ಧನಸಹಾಯ ಮಾಡಲಾರಂಭಿಸಿದರು. ಹೀಗಾಗಿ ಜೈನ ವಿದ್ಯಾಭ್ಯಾಸ ಪದ್ಧತಿ, ಹಣದ ಕೊರತೆಯಿಂದ

ಎಂದೂ ಕೊರಗಲಿಲ್ಲವೆಂದರೆ ಅತಿಶಯೋಕ್ತಿಯಲ್ಲ. ಇದರಿಂದ ಜನಜಾಗೃತಿ, ಧರ್ಮ ವಿಸ್ತಾರಕ್ಕೆ ಪ್ರೋತ್ಸಾಹ ದೊರೆಯಿತು. ಕರ್ನಾಟಕದ ವಿವಿಧ ಜಿಲ್ಲೆಗಳಲ್ಲಿ ಬಸದಿ, ಮಠಗಳು ಶತಕಗಳಲ್ಲಿ ಹುಟ್ಟಿ ಬೆಳೆದವು. ಅವುಗಳಲ್ಲಿ ಖ್ಯಾತಿವೆತ್ತವೆಂದರೆ, ದಕ್ಷಿಣ ಕನ್ನಡದ ಮೂಡಬಿದುರೆ, ಕಾರ್ಕಳ, ವೇಣೂರು, ಬಾರಕೂರು, ಮುಲ್ಕಿ, ಉತ್ತರ ಕನ್ನಡದ ಗೇರುಸಪ್ಪಾ, ಹಾಡುವಳ್ಳಿ, ಬನವಾಸಿ, ಶಿವಮೊಗ್ಗೆಯ ಹುಂಚ (ಹೊಂಬುಚ್ಚ), ಬಳ್ಳಿಗಾವಿ, ಕೊಪ್ಪಳ, ಧಾರವಾಡದ ಬಂಕಾಪುರ, ಬಳ್ಳಾರಿಯ ಕೋಗಳಿ ಇತ್ಯಾದಿ.

ಜೈನರು, ಶಿಕ್ಷಣವು ಸರ್ವರ ಸೊತ್ತಾಗಬೇಕೆಂದು ಮೊದಲಿನಿಂದ ಪ್ರಯತ್ನಿಸಿದ್ದರಿಂದ ಪ್ರಾದೇಶಿಕ ಭಾಷೆಯನ್ನೆ ಮಾಧ್ಯಮವಾಗಿ ಬಳಸಿದರು. ಉತ್ತರದಲ್ಲಿ ಅರ್ಧಮಾಗಧಿ, ಪ್ರಾಕೃತದ ಇತರ ರೂಪಗಳಲ್ಲಿ ನಮ್ಮ ನಾಡಿನಲ್ಲಿ ಸಂಸ್ಕೃತದ ಬದಲಾಗಿ ಕನ್ನಡಕ್ಕೆ ಮಹತ್ವ ಬಂದಿತು. ಮೋಕ್ಷಕ್ಕೆ ಮಾರ್ಗ ತೋರಿಸುವ ಗ್ರಂಥಗಳು ಎಲ್ಲರಿಗೂ ಅರ್ಥವಾಗಬೇಕೆಂದು, ದಿವಾಕರಣಂದಿ ಮುನಿಗಳು ತತ್ವಾರ್ಥ ಸೂತ್ರವನ್ನು ಕನ್ನಡಕ್ಕಿಳಿಸಿದರು.[೫] ಇಷ್ಟಾದರೂ ಉಚ್ಚ ವಿದ್ಯಾಭ್ಯಾಸದ ಕ್ರಮ ಎಲ್ಲ ಪಂಥದವರಿಗೂ ಸಾಮಾನ್ಯವಾಗಿದ್ದರಿಂದ ವೇದೋಪನಿಷತ್ತು, ಶಾಸ್ತ್ರಗಳ ಅಧ್ಯಯನಕ್ಕಾಗಿ ಸಂಸ್ಕೃತವನ್ನೂ ಬಳಸಿಕೊಂಡರು. ಭಾಷಾಪಾಠ, ವ್ಯಾಕರಣ, ಗಣಿತ, ಸಂಗೀತ ಕಲೆಗಳನ್ನು ಪ್ರಾಥಮಿಕ ಹಂತದಲ್ಲಿ ಕಲಿಸಿದರೆ, ಸಮಸ್ತ ವ್ಯಾಕರಣಶಾಸ್ತ್ರ, ನಿಘಂಟು, ವಾತ್ಸಾಯನ, ಜ್ಯೋತಿಷ, ಶಕುನ, ಛಂದಸ್ಸು, ಮನು, ಅಲಂಕಾರ, ಮಹಾಕಾವ್ಯ, ನಾಟಕ, ಅಧ್ಯಾತ್ಮ, ಅರ್ಥಶಾಸ್ತ್ರ, ತರ್ಕಶಾಸ್ತ್ರಗಳು ಉಚ್ಚಶಿಕ್ಷಣದಲ್ಲಿ ಸಮಾವೇಶಗೊಂಡಿದ್ದವು.[೬] ಜೈನಮುನಿಗಳು ಕಾಮಶಾಸ್ತ್ರದಂತಹ ವಿಷಯಗಳನ್ನು ಗಂಭೀರವಾಗಿ ಅಭ್ಯಸಿಸಿ, ಇತರರಿಗೂ ಕಲಿಸುತ್ತಿದ್ದರು. ಅವರಿಗೆ ಜೀವನದ ಆಕರ್ಷಣೆಗಳು ತ್ಯಾಜ್ಯವಿದ್ದರೂ, ವಿದ್ಯಾಭ್ಯಾಸಕ್ಕಾಗಿ ಯಾವುದಕ್ಕೂ ನಿಷೇಧವಿರಲಿಲ್ಲ. ವಾತ್ಸಾಯನನು ೬೪ ಕಲೆಗಳನ್ನು ಹೆಸರಿಸಿದರೆ, ಜೈನರು ಅವನ್ನು ಎಪ್ಪತ್ತೆರಡಕ್ಕೆ ಏರಿಸಿದರು. ಇವುಗಳಲ್ಲಿ ರಸಾಯನಶಾಸ್ತ್ರ, ವಿಜ್ಞಾನ, ಸಣ್ಣಪುಟ್ಟ ಯಂತ್ರಗಳನ್ನು ತಯಾರಿಸುವದು, ಮುಂತಾದವು ಇರುವದು ಗಮನಾರ್ಹ. ಇವುಗಳಲ್ಲಿ ತರಬೇತಿ ಮತ್ತು ಉತ್ಪಾದನೆಗೆ ವರ್ತಕ ಶ್ರೇಣಿಗಳು ಅವಕಾಶ ಮಾಡಿಕೊಡುತ್ತಿರಬೇಕು.

ಬಸದಿ, ಜೈನಮಠಗಳಲ್ಲಿರುವ ಭಿತ್ತಿಚಿತ್ರ ಮತ್ತು ಶಿಲ್ಪಗಳಲ್ಲಿ ಹಲವಾರು ವಿದ್ಯಾದಾನದ ಸನ್ನಿವೇಶಗಳನ್ನು ಗುರುತಿಸಬಹುದು. ಪ್ರಶಾಂತ ವಾತಾವರಣದಲ್ಲಿ ಒಂದು ಮರದ ಆಸರೆಯಲ್ಲಿ ಗುರುವು ವ್ಯಾಖ್ಯಾನ ನಡೆಸಿದಾಗ(7) ವಿದ್ಯಾರ್ಥಿಗಳು ಏಕಚಿತ್ತದಿಂದ ಗ್ರಹಣ ಮಾಡುತ್ತಿದ್ದರು. ಒಂದು ಶಿಲ್ಪದಲ್ಲಿ, ಅಧ್ಯಯನದಲ್ಲಿ ತೊಡಗಿದ ವಿದ್ಯಾರ್ಥಿಯ ಸುಂದರ ಚಿತ್ರಣವಿದೆ. ಕಿರಿದಾದ ಕಾಲುಮಣೆಯೊಂದರ ಮೇಲೆ ಆಸೀನನಾಗಿ, ತಾಳೆಗರಿಯೊಂದನ್ನು ಎರಡೂ ಕೈಯಲ್ಲಿ ಎತ್ತಿಹಿಡಿದು ಪಠನದಲ್ಲಿ ಮೈ ಮರೆತಿದ್ದಾನೆ(8). ಎದುರಿಗಿದ್ದ ಟವಣೆಕೋಲಿನ ಆಶ್ರಯದಲ್ಲಿ ನೀರಿನ ಹೂಜೆ ಇದ್ದರೆ, ಬಲ ಕಂಕುಳಲ್ಲಿ ಗರಿಗಳ ಕಟ್ಟು ಇದೆ. ಕರಾವಳಿಯ ಒಂದು ಉಬ್ಬು ಚಿತ್ರದಲ್ಲಿ ವಿದ್ಯಾರ್ಥಿಯೊಬ್ಬನು, ಹಂಚಿನ ಮಾಡಿನ ಕಟ್ಟಡದಲ್ಲಿ ಓದುವದರಲ್ಲಿ ತೊಡಗಿದ್ದನ್ನು ಪ್ರತಿನಿಧೀಕರಿಸಿದ್ದಾರೆ. ಬಹುಶಃ ಅಲ್ಲಿಯ ವಿಪರೀತ ಮಳೆಗಾಳಿಗಳೂ ಅವನ

ಅಧ್ಯಯನಕ್ಕೆ ಯಾವ ಅಡಚಣೆಗಳನ್ನೂ ತರುತ್ತಿರಲಿಲ್ಲ ಎಂಬುದು ಗೂಢಾರ್ಥವಿದ್ದಿರಬಹುದು! ಇನ್ನೊಂದು ಚಿತ್ರದಲ್ಲಿ ಸಮೆಯದ ಮಂದವಾದ ಬೆಳಕಿನಲ್ಲಿ ತಾಳೆಗರಿಗ್ರಂಥ ಓದುತ್ತಿರುವದು ಚಿತ್ರಿತವಾಗಿದೆ. ಇಂದಿಗೂ ಕರಾವಳಿಯ ಹಲವಾರು ಹಳ್ಳಿಗಳಲ್ಲಿ ಹೊನ್ನೆಣ್ಣೆ ಬಳಸಿ ಉರಿಸುವ ಇಂತ ದೀವಳಿಗೆಗಳನ್ನು ನೋಡಬಹುದು.

ಸಲ್ಲೇಖನ ಸ್ಮಾರಕಗಳು, ನಿಸಿದಿಗಲ್ಲುಗಳ ಮೇಲೆ, ಶಾಸನಗಳಲ್ಲಿ, ಬೋಧನೆಯಲ್ಲಿ ತೊಡಗಿದ ಗುರುಗಳ ಚಿತ್ರಗಳನ್ನು ಗುರುತಿಸಬಹುದು. ಒಂದರಲ್ಲಿ, ಪೀಠದಲ್ಲಿ ಕುಳಿತು, ಎಡಗೈಯಲ್ಲಿ ತಾಳೆಗರಿ ಹಿಡಿದು, ವಿದ್ಯಾದಾನ ಮಾಡುತ್ತಿದ್ದರೆ(9), ಇನ್ನೊಂದರಲ್ಲಿ ಪ್ರೌಢರಿಗೆ ಮೋಕ್ಷದ ಕಲ್ಪನೆ ಕೊಡುವಂತಿದೆ (10). ಈ ಗುರುಗಳ ಸಾಧನೆಗೆ ಕೊನೆಮೊದಲಿಲ್ಲ. ಅವರು ಬಿಟ್ಟು ಹೋದ ಅಸಂಖ್ಯ ತಾಳೆಗರಿ ಮತ್ತಿತರ ಹಸ್ತಪ್ರತಿಗಳು ಈ ವರ್ಗದ ಅಧ್ಯಯನದ ಆಳವನ್ನು ಸೂಚಿಸುತ್ತವೆ. ಗುಣಭದ್ರ, ಕುಂದಕುಂದಾಚಾರ್ಯ, ಸಮಂತ ಭದ್ರ, ಶಾಕಟಾಯನ, ಅನಂತವೀರ್ಯ, ಪ್ರಭಾಚಂದ್ರ, ಪೂಜ್ಯಪಾದ ಮೊದಲಾದ ಯತಿಗಳು ಜೈನಾಗಮಗಳಿಗೆ ವೃತ್ತಿ ಬರೆಯುವದರ ಜೊತೆಗೆ, ಶಾಸ್ತ್ರಗ್ರಂಥಗಳನ್ನು, ವ್ಯಾಕರಣ ಗ್ರಂಥಗಳನ್ನು ರಚಿಸಿದ್ದಾರೆ. ಜೈನರು ಇವುಗಳಿಗೆ ಧರ್ಮಗ್ರಂಥಗಳ ಸ್ಥಾನಮಾವನ್ನೆ ಕೊಟ್ಟು, ಎಚ್ಚರಿಕೆಯಿಂದ ಸಂರಕ್ಷಿಸಿ ಕೊಂಡುಬಂದಿದ್ದಾರೆ. ಮೂಡಬಿದರೆ, ಶ್ರವಣಬೆಳಗೊಳ ವಿದ್ಯಾಭಂಡಾರಗಳಲ್ಲಿ ಏಳೆಂಟು ಶತಮಾನಗಳಷ್ಟು ಹಳೆಯ ಹಸ್ತಪ್ರತಿಗಳಿವೆ. ಅವುಗಳೆಲ್ಲ ಸುಲಭವಾಗಿ ನೋಡಲು, ಓದಲು ಸಿಗದ್ದರಿಂದ ಆ ಭಂಡಾರ ಎಷ್ಟು ಶ್ರೀಮಂತವಾದದ್ದು? ಎಂದು ಅಂದಾಜು ಮಾಡುವದು ಅಸಾಧ್ಯ. ಇಷ್ಟೇ ಅಲ್ಲದೆ ಕರ್ನಾಟಕದ ಅನೇಕಾನೇಕ ಹಸ್ತಪ್ರತಿಗಳು ಭಾರತದ ಇನ್ನಿತರ ಜೈನ ಕೇಂದ್ರಗಳಲ್ಲಿಯೂ ಲಭ್ಯವಿದೆ. ಅಪರೂಪದ ಅದೆಷ್ಟೋ ಹಸ್ತಪ್ರತಿಗಳು ಇಂತಹ ಮೂಲಗಳಿಂದ ದೊರಕಿವೆ ಎಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಇಷ್ಟೆಲ್ಲ ಸಾಧನೆಗೆ ಜೈನರು ಎಲ್ಲ ಆಳರಸರಿಂದ ನೆರವು ಪಡೆದದ್ದೆ ಮುಖ್ಯ ಕಾರಣ. ತಲಕಾಡಿನ ಗಂಗರು, ಬಾದಾಮಿಯ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಹೊಯ್ಸಳರು, ಬೇರೆ ಪಂಥಗಳನ್ನು ಅನುಸರಿಸಿದರೂ ಜೈನಧರ್ಮ, ಶಿಕ್ಷಣಗಳಿಗೆ ಉದಾರ ಕೊಡುಗೆಯಿತ್ತಿದ್ದರು.

ಬೌದ್ಧರು, ಅನುಮಾನಿಸುತ್ತಲೇ ಭಿಕ್ಷುಣಿಯರನ್ನು ಸಂಘಕ್ಕೆ ಬರಮಾಡಿಕೊಂಡರೆ, ಜೈನರು ಪ್ರಾರಂಭದಿಂದಲೇ ತೆರೆದ ಮನಸ್ಸಿನಿಂದ ಸನ್ಯಾಸಿನಿಯರನ್ನು ಸ್ವಾಗತಿಸಿದರು. ಧರ್ಮದಾನವೇ ತಮ್ಮ ಏಕೈಕ ಗುರಿ, ಎಂದು ಸನ್ಯಾಸಿಯರಾಗಲು ಹೊರಟ ಹೆಂಗಳೆಯರಿಗೆ ಗುಜರಾತದ ತಪೋಗಚ್ಛ ವಿಶ್ವವಿದ್ಯಾಲಯ ೧೪ನೇ ಶತಮಾನದಲ್ಲಿ ಹಲವಾರು ಕ್ಷೇತ್ರಗಳಲ್ಲಿ ಆಳವಾದ ತರಬೇತಿ ನೀಡುತ್ತಿತ್ತು. ಅನಂತರ ಅವರಿಗೆ ಶಿಕ್ಷಣ ಮತ್ತು ಧರ್ಮಬೋಧೆಯ ಹೊಣೆಯನ್ನು ಕೊಡಲಾಗುತ್ತಿತ್ತು. ಅಲ್ಲಿ ಅವರಿಗೆ ಜೈನಧರ್ಮಗ್ರಂಥಗಳನ್ನು ಓದಿ ಹೇಳುವದಲ್ಲದೇ (11) ಅವುಗಳ ಆಳವಾದ ಚರ್ಚೆಗೂ ಅವಕಾಶವೀಯಲಾಗುತ್ತಿತ್ತು(12).

ಸನ್ಯಾಸಿನಿ(ಕಂತಿ)ಯರು ಜೈನಾಗಮಗಳನ್ನು ಅಭ್ಯಸಿಸಿ ಬೋಧಿಸುತ್ತಿದ್ದರು. ಅವರು ಶಿಷ್ಯೆಯರೊಂದಿಗೆ ಧಾರ್ಮಿಕ ಕಾರ್ಯಗಳಲ್ಲಿ ಪಾಲುಗೊಳ್ಳುತ್ತಿದ್ದರು. ವಿದುಷಿಯಾಗಿದ್ದ

ನಾಗಶ್ರೀಯ ತಾಯಿ ತ್ರಿವೇದಿ, ಕಂತಿಯಾದ ಬ್ರಹ್ಮಿಲೆಯಿಂದ ದೀಕ್ಷೆ ಪಡೆದಳು.[೭] ಇದರಂತೆ ಮಹಾಭಕ್ತೆಯಾಗಿದ್ದ ಅನಂತಮತಿ, ಬ್ರಹ್ಮಚಾರಿಣಿ, ಕಮಲಶ್ರೀ ಕಂತಿಯಿಂದ ದೀಕ್ಷೆಪಡೆದಿದ್ದಳು.[೮] ಧರ್ಮಬೋಧನೆಯಲ್ಲಿ ನಿರತರಾದವರನ್ನು ಅಜ್ಜಿ(ಆರ್ಯೆ ಶಬ್ದದ ತದ್ಭವ)ಯರೆಂದು ಗುರುತಿಸಲಾಗುತ್ತಿತ್ತು. ವಿದ್ಯಾರ್ಥಿಗಳಿಗೆ ವಿದ್ಯೆ ನೀಡುವದು ಅವರ ಮುಖ್ಯ ಜವಾಬ್ದಾರಿಯಿದ್ದು, ಅದಕ್ಕಾಗಿ ದಾನ ಪಡೆಯುತ್ತಿದ್ದರು. ವಿದ್ಯಾರ್ಥಿಗಳೊಂದಿಗೇ ವಾಸಿಸುತ್ತಿದ್ದರು. ಜೈನರಲ್ಲಿ ಲಿಂಗಭೇದವಿಲ್ಲದೇ ಪುರುಷರು ಗುರುಗಳಾಗಿದ್ದಂತೆ, ಗಂಡಸರೂ ಕಂತಿಯರ ಗುಡ್ಡ(ಶಿಷ್ಯ) ರಿರುತ್ತಿದ್ದರು.[೯] ಈ ಸನ್ಯಾಸಿನಿಯರು ಗುರುಗಳಿಗೆ ಸ್ಮಾರಕಗಳನ್ನು ನಿಲ್ಲಿಸುತ್ತಿದ್ದರು.[೧೦] ಎಂಥ ಕಠಿಣ ವ್ರತಗಳನ್ನು ಕೈಕೊಳ್ಳಲು ಈ ಸನ್ಯಾಸಿನಿಯರು ಹಿಂಜರಿದವರಲ್ಲ.[೧೧] ಸಲ್ಲೇಖನ ವ್ರತ ಕೈಕೊಂಡು ತಿಂಗಳುಗಟ್ಟಲೆ ಉಪವಾಸವಿದ್ದು ಮೃತಪಟ್ಟ ಮಹಿಳೆಯರಿಗೆ ನಿಲ್ಲಿಸಿದ ಸ್ಮಾರಕಗಳು ಹಲವಾರು. ಹೆಣ್ಣುಮಕ್ಕಳಿಗೆ ಓದು ಬರಹವನ್ನು ಕಲಿಸುವ ವೃತ್ತಿ ಕೈಕೊಳ್ಳುತ್ತಿದ್ದರು. 'ಪಂಡಿತೆ'ಯೆಂದೇ ಜನಪ್ರಿಯಳಾದ ದಾದಿ, ಶ್ರೀಮತಿಗೆ ಓದು ಬರೆಹ, ಚಿತ್ರಕಲೆ ಕಲಿಸಿ ಪ್ರವೀಣೆಯನ್ನಾಗಿ ಮಾಡಿದ್ದಳು.[೧೨] ಬಾಲವಿಧವೆಯಾಗಿದ್ದ ನಾರಾಯಣ ದತ್ತೆ ತರ್ಕಶಾಸ್ತ್ರ ಅಭ್ಯಸಿಸಿ 'ಶಾಪಾನುಗ್ರಹ ಸಮರ್ಥೆ' ಎಂದು ಪ್ರಚಾರ ಗಿಟ್ಟಿಸಿದ್ದಳು.[೧೩] ಹೊಯ್ಸಳ ರಾಣಿ ಶಾಂತಲೆ, ಅಭಿನವ ಸರಸ್ವತಿ, ಗೀತವಾದ್ಯ ನೃತ್ಯಕಲಾ ಸೂತ್ರಧಾರೆ ಎನಿಸಿಕೊಂಡಿದ್ದಳು.[೧೪] ಬಾಚಲೆ, ಅಭಿನಯದಲ್ಲಿಯ ಪರಿಣಿತಿಗಾಗಿ, 'ಪಾತ್ರ ಜಗದ್ದಳೆ' ಎಂದೆನಿಸಿಕೊಂಡಿದ್ದಳು.[೧೫] ವಿದ್ಯಾದಾನ ಮತ್ತು ಓದುವ ವರ್ಗಕ್ಕೆ ಆಹಾರ, ಆಶ್ರಯ, ಔಷಧ, ಪುಸ್ತಕದಾನ ಮಾಡಿದವರೆಷ್ಟೋ ಜನ. ಇಂಥ ಅಸಮಾನ್ಯ ಸ್ತ್ರೀಯರಿಂದಾಗಿ ಜೈನಧರ್ಮ, ಶಿಕ್ಷಣಗಳ ಪ್ರಸಾರಕ್ಕೆ ಸಹಾಯವಾಯಿತು.

**ಸಂದರ್ಭ ಸೂಚಿ**

೧ ಎ.ಕ. II ಶ್ರವಣಬೆಳಗೊಳ, ಪೀಠಿಕೆ ಮತ್ತು .
೨. ಅದೇ VIII ನಗಿರೆ ೫೭.
೩. ಎಸ್.ಐ.ಐ. xi (೧) ೬೧ ಪು. (೬೦-೬೧).
೪. ದಾಸ್‌ಗುಪ್ತ, ಡಿ.ಸಿ.: ಜೈನ ಸಿಸ್ಟಮ್ ಆಫ್ ಎಜುಕೇಶನ್ ಪು.೭೪-೭೫.
೫. ಮೈಸೂರ್ ಆರ್ಕಿಯಾಲಾಜಿಕಲ್ ರಿಪೋರ್ಟ್ ೧೯೨೪, ಪು.೧೪
೬. ಎ.ಕ. II ಶ್ರ. (೨೬೮) ಹೊಸ ೩೭೪, ಪು.೨೪೧.
೭. ವಡ್ಡಾರಾಧನೆ I ಪು.೨೪.
೮. ಧರ್ಮಾಮೃತಂ ೩, ಪದ್ಯ ೨೩೫, ಪು.೨೩೧.
೯. ಆರ್ಕಿಯಾಲಾಜಿಕಲ್ ರಿಪೋರ್ಟ್ ಆನ್ ಸೌತ್ ಇಂಡಿಯನ್ ಎಪಿಗ್ರಾಫಿ: ೧೯೫೪-೫೫, ಪು.೯೬.
೧೦. ಐ.ಎ.:XII, ಪು.೧೦೨.
೧೧. ಎ.ಕ.II ಶ್ರ.(೩೫೧) ಹೊಸ ೪೮೪, ಪು.೩೦೩.
೧೨. ಪಂಪನ ಆದಿಪುರಾಣ ೩, ಪದ್ಯ ೨೧.
೧೩. ಧರ್ಮಾಮೃತಂ ೧೦ ಪದ್ಯ ೧೯೧.
೧೪. ಎ.ಕ.II ಶ್ರ ೧೬೨ (೧೩೨), ಪು.೧೦೫.
೧೫. ಅದೇ VII, ಶಿವಮೊಗ್ಗ ೯೭.

## ೩. ತಾಳೆಗರಿ

ಮಹಮ್ಮದೀಯರನ್ನುಳಿದು ಉಳಿದೆಲ್ಲ ಧರ್ಮದವರು ಹರಡಿದ ಅಕ್ಕಿ ಅಥವಾ ಮರಳಲ್ಲಿ ಅಕ್ಷರಗಳನ್ನು ತೀಡಿಸಿ ಶಿಕ್ಷಣವನ್ನು ಪ್ರಾರಂಭಿಸುತ್ತಿದ್ದರು. ಬರೆಯುವದು ಹೆಚ್ಚಾದಂತೆ, ವಿದ್ಯಾರ್ಥಿಗಳು ಬೇರೊಂದು ಮಾಧ್ಯಮ ಬಳಸುತ್ತಿದ್ದಿರಬೇಕು. ಬಿಳಿ ಹಲಗೆಯ ಮೇಲೆ ಇದ್ದಿಲಿನಿಂದಾಗಲಿ, ಇಲ್ಲವೆ ಕರೆ ಹಲಗೆಯ ಮೇಲೆ ಬಿಳುಪಿನಿಂದ ಬರೆಯುತ್ತಿರಬಹುದು. ಕಡತ, ಪಟಗಳು ಕ್ರಮೇಣ ಬಳಕೆಯಲ್ಲಿ ಬಂದಿರಬಹುದು. ಉಚ್ಚ ಶಿಕ್ಷಣಕ್ಕಾಗಿ ತಾಳೆಗರಿಗಳನ್ನು ಬಳಸಿರಬಹುದು. ಅದರೆ ಅವು ಆರೇಳು ಶತಕಗಳಿಗಿಂತ ಹೆಚ್ಚು ಕಾಲ ತಾಳಿಕೆ ಬಾರದ್ದರಿಂದ, ಮತ್ತು ಅವನ್ನು ಸಂರಕ್ಷಿಸಿಡಲು ಪ್ರಯತ್ನವನ್ನು ಹೆಚ್ಚಿನವರು ಮಾಡದ್ದರಿಂದ, ಅವು ನಾಶವಾಗಿ, ಶತಮಾನಗಳೇ ಜಾರಿಕೊಂಡಿವೆ. ಧರ್ಮಗ್ರಂಥಗಳಾಗಿ ಬಳಸಿದ ತಾಳೆಯೋಲೆಗಳು ಮಾತ್ರ ಹೆಚ್ಚಿನ ಸಂಖ್ಯೆಯಲ್ಲಿ ಇಂದು ಲಭ್ಯವಿವೆ. ಸುಮಾರು ಹನ್ನೊಂದನೇ ಶತಮಾನದಲ್ಲಿ ರಚಿತವಾದ ಜೈನ ಗ್ರಂಥ, ಧವಳ ಮತ್ತು ಮಹಾಧವಳಗಳನ್ನು ಹೊತ್ತ ತಾಳೆಗರಿಗಳ ಹೊತ್ತಗೆಗಳೇ ಲಭ್ಯವಿದ್ದವುಗಳಲ್ಲಿ ಅತಿ ಪುರಾತನವೆನ್ನಬಹುದು. ಅವುಗಳನ್ನು ಸಂಬಂಧಿತ ಧರ್ಮಾಧಿಕಾರಿಗಳು ವಿಶೇಷ ಶ್ರದ್ಧೆ, ಆಸ್ಥೆಗಳಿಂದ ಸಂರಕ್ಷಿಸಿದ್ದರಿಂದಲೇ ಕಾಲನನ್ನು ಎದುರಿಸಿ ಅವು ತಾಳಿಕೊಂಡಿರಲು ಸಾಧ್ಯವಾಯಿತು. ಅದರ ಹಿಂದೆ ಮತ್ತು ಅನಂತರ ಬಂದ ಅದೆಷ್ಟು ಸಾಹಿತ್ಯಿಕ, ಕಲಾತ್ಮಕ ಕೃತಿಗಳು ಗೆದ್ದಿಲು, ಜಿರಳೆ, ಇಲಿಗಳಿಗೆ ಆಹಾರವನ್ನು ಒದಗಿಸಿವೆಯೋ!

ಕ್ರಿಸ್ತಶಕ ನಾಲ್ಕನೆಯ ಶತಕದಲ್ಲಿಯೇ ಹಸ್ತಪ್ರತಿಗಳು ಬಳಕೆಯಲ್ಲಿ ಇದ್ದವು. ಹೆಂಗಳೆಯರು ಮನೆಗೆಲಸಗಳನ್ನು ಮುಗಿಸಿ ದೀಪದ ಬೆಳಕಿನಲ್ಲಿ ಅವುಗಳನ್ನು ಓದಿ ಅರ್ಥಮಾಡಿಕೊಳ್ಳುತ್ತಿದ್ದರು.[೧] ಪ್ರಥಮ ಬೌದ್ಧ ಸಮ್ಮೇಳನದಲ್ಲಿ ತ್ರಿಪೀಟಕವನ್ನು ತಾಳೆಗರಿಗಳ ಮೆಲೆ ಬರೆದ ಉಲ್ಲೇಖವಿದೆ. ಕ್ರಿ.ಶ. ಎರಡನೇ ಶತಮಾನದಲ್ಲಿ ಅಶ್ವಘೋಷನು ರಚಿಸಿದ ನಾಟಕವನ್ನು ಹೊತ್ತ ತಾಳೆಗರಿಯ ತುಣುಕುಗಳು ದೊರಕಿವೆ. ಕನ್ನಡ ಕೃತಿ, ಕವಿ ವಿಠಲನ ವಿದಗ್ಧ ಚೂಡಾಮಣಿ, ಎಂಬ ಅಮರಕೋಶಕ್ಕೆ ಬರೆದ ಟೀಕಾಗ್ರಂಥ, ಎಂಟನೂರ ಐವತ್ತು ವರ್ಷಗಳಿಗಿಂತಲೂ ಹೆಚ್ಚು ಪುರಾತನವಾದದ್ದರಿಂದ ಗರಿಗಳು ಶಿಥಿಲವಾಗಿವೆ. ಕ್ರಿ.ಶ.೧೩೭೯ರಲ್ಲಿ ಪ್ರತಿ ಮಾಡಿದ 'ಆದಿಪುರಾಣ'ದ ಗ್ರಂಥ ಇಂದು ಬರೆದಷ್ಟು ಸ್ಫುಟವಾಗಿದೆ. ಅನೇಕಾನೇಕ ತಾಳೆಗರಿ ಹಸ್ತಪ್ರತಿಗಳು, ವಿವಿಧ ವಿಶ್ವವಿದ್ಯಾಲಯಗಳಲ್ಲಿ, ಮಠ, ದೇವಾಲಯ, ಸರಕಾರಿ ಸಂಸ್ಥೆಗಳಲ್ಲಿ ಪುರಾತನ ಲಿಪಿ ಪಂಡಿತರಲ್ಲಿ ಇವೆ. ಅಲ್ಲದೇ ಉತ್ತರಭಾರತದ ಧರ್ಮಕ್ಷೇತ್ರಗಳಲ್ಲಿಯೂ

ಹಲವಾರು ತಾಳೆಗರಿ ಹಸ್ತಪ್ರತಿಗಳು ಇವೆ. ಆದರೆ ಅವುಗಳ ಬಗ್ಗೆ ಇರುವ ಜ್ಞಾನ, ಪ್ರೀತಿಗಳಿಗಿಂತ ಅಜ್ಞಾನವೇ ಹೆಚ್ಚು! ಖಾಸಗೀ ರೀತಿಯಲ್ಲಿ ಅವನ್ನು ಹೊಂದಿದವರು, ಅವುಗಳು ತಮ್ಮ ಆಸ್ತಿ-ಪಾಸ್ತಿಗಳ ವಿವರಗಳನ್ನು ಹೊಂದಿವೆ. ಗುಪ್ತಧನದ ಗುಟ್ಟು ಹೊತ್ತಿವೆ, ಈ ಬ್ರಹ್ಮಲಿಪಿ ಹೊಂದಿದವರಿಗೆ ಮೋಕ್ಷ ಪ್ರಾಪ್ತಿ! ಎಂದೆಲ್ಲ ತಿಳಿದಿದ್ದರಿಂದ ಅವುಗಳನ್ನು ಬಚ್ಚಿ ಇಡುವವರೇ ಹೆಚ್ಚು ಜನ! ಅವನ್ನು ವರ್ಷಕ್ಕೊಮ್ಮೆಯೂ ಗಾಳಿ ಬೆಳಕಿಗೆ ತಾರದೇ, ಅಲ್ಲೇ ಧೂಳು, ಹುಳು, ಗೆದ್ದಲಿಗೆ ಆಹುತಿಯಾಗಿ ಮಳೆನೀರಿಗೆ ತೊಯ್ದು ಬೆಂಕಿಗೆ ಎಷ್ಟು ಹಸ್ತಪ್ರತಿಗಳು ಆಹುತಿಯಾಗಿವೆಯೋ ಬಲ್ಲವರಾರು?

ಆಸ್ಟ್ರೇಲಿಯ ಖಂಡದ ಆದಿವಾಸಿಗಳು ಮರದ ತೊಗಟೆಯನ್ನು ತಮ್ಮ ಕಲಾಕೃತಿಗಳಿಗೆ ಬಳಸಿಕೊಂಡಂತೆ, ಉತ್ತರ ಹಿಂದುಸ್ತಾನದವರು ಭೂರ್ಜಮರದ ತೊಗಟೆಯನ್ನು ಬರವಣಿಗೆಗೆ ಬಳಸಲಾರಂಭಿಸಿದರು. ಆದರೆ ಕನ್ನಡಿಗರು ಇದಕ್ಕೂ ಮುಂದೆ ಹೋಗಿ ನಾಡಿನ ಉದ್ದಗಲಕ್ಕೂ ಬೆಳೆಯುವ ತಾಳೆಮರ(ಬೊರ್‍ಯಾಸಸ್ ಫ್ಲಾಬೆಲಿಫರ್) ಎಲೆಗಳನ್ನೇ ಬರವಣಿಗೆಗಾಗಿ ಉಪಯೋಗಿಸಬಹುದೆಂದು ಕಂಡುಹಿಡಿದದ್ದು, ಪ್ರಾಚೀನ ಕಾಲದ ಒಂದು ಮಹಾಶೋಧ. ತೆಂಗಿನಂತೆ ತಾಳೆಮರವೂ ವರ್ಷವಿಡೀ ಗರಿಗಳನ್ನು ಹೊರಹಾಕುತ್ತಲೇ ಇರುವದರಿಂದ, ಕೆಲವೇ ಮರಗಳು ಅಸಂಖ್ಯ ತಾಳೆಗರಿಗಳನ್ನು ಪೂರೈಸಬಲ್ಲವು. ಅದೇ ತೊಗಟೆಗೆ ಹೊಸ ಹೊಸ ಮರಗಳ ಅವಶ್ಯಕತೆ ಇರುತ್ತಿತ್ತು. ಇಪ್ಪತ್ತು ಮೂವತ್ತು ಮೀಟರ್ ಎತ್ತರವಾಗಿ ಬೆಳೆಯುವ ತಾಳೆ ಮರಕ್ಕೆ ಸುಮಾರು ಐವತ್ತರಷ್ಟು ಬೀಸಣಿಕೆ ಆಕಾರದ ಎಲೆಗಳಿರುತ್ತವೆ. ಆರೋಗ್ಯ ವರ್ಧನೆಗಾಗಿ ನೀರಾ (ಎಳನೀರನ್ನು ಹೋಲುವ ಪೌಷ್ಟಿಕ ಪೇಯ), ಮಕ್ಕಳಿಗೆ ತಿನ್ನಲು "ತಾಟಿ ನುಂಗು"(ತಾಳೆಬೊಂಡ), ಕುಡುಕರಿಗೆ ಮಾದಕಪೇಯ ಪೂರೈಸುವ ಮರವೇ ಹೆಚ್ಚಿನ ಖರ್ಚಿಲ್ಲದ ಬರವಣಿಗೆಯ ಮಾಧ್ಯಮ ಒದಗಿಸಿದ್ದು ಕುತೂಹಲಕಾರಿ ಘಟನೆ! ಬಲಿತ ಎಲೆಗಳನ್ನು ಹರಿಯದಂತೆ ಜಾಗರೂಕತೆಯಿಂದ ಕಡಿದು, ಗರಿ ತಯಾರಕರಿಗೆ ಪೂರೈಸಲಾಗುತ್ತಿತ್ತು.

ತಾಳೆಯೆಲೆಗಳು ತುಂಬಾ ಬಲಿತು ಬಿಸಿಲಿಗೆ ಒಣಗಿದರೆ, ಅವನ್ನು ಬರೆಯಲು ಬಳಸುವಾಗ ಹರಿದು ಹೋಗುವ ಸಾಧ್ಯತೆ ಇದ್ದದ್ದರಿಂದ, ಅವುಗಳು ಕೊಂಚ ಹಸಿಯಿರುವಾಗಲೇ ಕೊಯ್ಲುಮಾಡಿ ಅವುಗಳಲ್ಲಿಯ ಹಸಿರು ವರ್ಣ, ಕಣಗಳನ್ನು ಹೊರಗೆಡವಲು ಹದವಾಗಿ ಬೇಯಿಸುತ್ತಿದ್ದರು. ನಂತರ ಎಳೆಬಿಸಿಲಲ್ಲಿ ಒಣಗಿಸುತ್ತಿದ್ದರು. ಅವುಗಳಿಗೆ ಹದ ಹಾಕಿ ನುಣುಪು ಮಾಡುವ ಪರಿಣತರಿದ್ದರು. ನಂತರ ಬರೆಯಲು ಬಳಸಬಹುದಾದ ಮಧ್ಯಭಾಗವನ್ನು ಒಂದೇ ಅಳತೆಯಲ್ಲಿ ಕತ್ತರಿಸಿ ವರ್ಗೀಕರಿಸುತ್ತಿದರು. ಅರಿಸಿಣ ಬಣ್ಣದ ತಾಲಪತ್ರಗಳು ದಪ್ಪವಾಗಿ ಕೇವಲ ಎಂಟಂಗುಲ ಉದ್ದವಿದ್ದು ಮಣಿದರೆ ಸುಲಭವಾಗಿ ಮುರಿಯುವಂಥವು. ಇವು ತೀರ ಅಗ್ಗ ಬೆಲೆಗೆ ಲಭ್ಯವಿದ್ದುದರಿಂದ ವಿದ್ಯಾರ್ಥಿಗಳಿಗೆ ತಾತ್ಪೂರ್ತಿಕ ಬರವಣಿಗೆಗೆ ಪೂರೈಸಲಾಗುತ್ತಿತ್ತು. ನಸುಗೆಂಪು ಬಣ್ಣದ ಶ್ರೀತಾಲ ಗರಿಗಳು ತೆಳುವಾಗಿ, ಮೃದುವಾಗಿ, ಸುಲಭವಾಗಿ ಮಣಿಸಲು ಬರುವಂಥವಿದ್ದು ಇಪ್ಪತ್ನಾಲ್ಕು ಮತ್ತು ಮೂವತ್ತೆರಡು ಅಂಗುಲ ಉದ್ದವಾಗಿ ಕತ್ತರಿಸಲಾಗುತ್ತಿತ್ತು. ಇವನ್ನು ಉಚ್ಚ ಶಿಕ್ಷಣ ಪಡೆಯುವ ವಿದ್ಯಾರ್ಥಿಗಳಿಗೂ, ಶಿಕ್ಷಕರಿಗೂ, ಲೇಖಕರಿಗೂ

ಪೂರೈಸಲಾಗುತ್ತಿತ್ತು. ಇವುಗಳನ್ನು ಸಿದ್ಧಮಾಡಿ ಸಂತೆಗಳಲ್ಲಿ,[೨] ಹಳ್ಳಿ ಹಳ್ಳಿಗಳಲ್ಲಿ[೩] ಮಾರುವದನ್ನು ವೃತ್ತಿಯನ್ನಾಗಿ ಮಾಡಿಕೊಂಡವರಿದ್ದು ಮಠ, ಬಸದಿ, ವಿದ್ಯಾಲಯಗಳಲ್ಲಿ ಅವನ್ನು ಕೊಂಡು ದಾಸ್ತಾನು ಮಾಡಿಡುತ್ತಿದ್ದರು. ರಸಿಕರು ಅವನ್ನು ಅರಿಸಿನ ನೀರಿನಲ್ಲಿ ಅದ್ದಿ ತೆಗೆದರೆ, ತಮ್ಮ ಕೃತಿಗಳು ಶತಕಗಳವರೆಗೆ ಅಚ್ಚಳಿಯದೇ ಉಳಿಯಬೇಕೆನ್ನುವವರು ಎಣ್ಣೆಯ ಲೇಪನ ಮಾಡಿಸುತ್ತಿದ್ದರು. ಅವುಗಳನ್ನು ರೇಶಿಮೆ ಸೂಲಿನಿಂದ ಪೋಣಿಸಿ, ಗ್ರಂಥ ಮಾಡುವದಕ್ಕಾಗಿ ಎರಡು ತೂತು ಮಾಡಿಕೊಳ್ಳುತ್ತಿದ್ದರು.

ತಾಳೆಗರಿಗಳ ಮೇಲೆ ಅಕ್ಷರಗಳನ್ನು ಮೂಡಿಸುವ ವಿಧಾನ ಕುತೂಹಲಕಾರಿಯಾಗಿದೆ. ಬೇರಾವ ದೇಶವೂ ಅರಿಯದ ಮಸಿ ಇಲ್ಲದ ಲೇಖನಿ, ಕಂಟವನ್ನು ಇದಕ್ಕಾಗಿ ಬಳಸುತ್ತಿದ್ದರು. ಅಂದಿನ ವಿದ್ಯಾರ್ಥಿಗಳು ತಮ್ಮ ಜೊತೆಗೆ ತಾಳೆಗರಿ-ಕಂಟಗಳನ್ನು ಒಯ್ಯುವ ದೃಶ್ಯವೇ ಮೋಜಾಗಿರಬೇಕು. ಬಿರುಸಾದ ಉಕ್ಕಿನಿಂದ ಸಿದ್ಧಮಾಡಿದ ಕಂಟಗಳು ವಿವಿಧ ಅಳತೆ, ಆಕಾರಗಳಲ್ಲಿ ಇರುತ್ತಿದ್ದವು. ಪ್ರಾಥಮಿಕ ವಿದ್ಯಾರ್ಥಿಗಳಿಗೆ ಪೂರೈಸುವಂಥವು, ಮೊಳೆಯಂತೆ ಇದ್ದರೆ, ಆಸ್ಥಾನಕವಿಗಳು ಮಣಿಖಚಿತ ಕಂಟಗಳನ್ನು ಬಳಸುತ್ತಿದ್ದರು(13). ಒಂದೇ ಕಂಟದಿಂದ ವಿವಿಧ ಅಳತೆಯ ಅಕ್ಷರಗಳನ್ನು ಮೂಡಿಸಲು ಒಂದು ಕಡೆ ತೀರ ಹರಿತವಾಗಿಯೂ ಇನ್ನೊಂದೆಡೆ ಮೊನಚಾಗಿಯೂ ಇಡುವದು ರೂಢಿ. ವಿವಿಧ ತುದಿಗಳುಳ್ಳ ಕಂಟವನ್ನು ಬಳಸುವವರೂ ಇದ್ದರು. ಕೆಲವರ ಕಂಟಕ್ಕೆ ಒಂದು ಅಂಚಿಗೆ ಹರಿತವಾದ ಚಾಕು ಮಾಡಿರುತ್ತಿದ್ದರು. ವಿದ್ಯಾರ್ಥಿಗಳ, ಬರೆಹಗಾರರ ಅಭಿರುಚಿಗೆ ಅನುಗುಣವಾಗಿ ಕಂಟಗಳನ್ನು ತಯಾರಿಸಿ ಪೂರೈಸುವದನ್ನು ಹಲವರು ವೃತ್ತಿಯನ್ನಾಗಿ ಮಾಡಿಕೊಂಡಿದ್ದರು.[೪] ಬರೆಯುವಾಗ ಕಂಟವನ್ನು ಲೆಕ್ಕಣಿಕೆಯಂತೆ ಹಿಡಿದರೂ(14) ತಾಳೆಗರಿಯಲ್ಲಿ ಅಕ್ಷರಗಳನ್ನು ಒತ್ತು ಹಾಕಿ ಕೊರೆಯಬೇಕಾಗಿತ್ತು. ಪ್ರಾರಂಭದಲ್ಲಿ ವಿದ್ಯಾರ್ಥಿಗಳು ಅದೆಷ್ಟು ತಾಳೆಗರಿಗಳನ್ನು ಹರಿಯುತ್ತಿದ್ದರೋ ಏನೋ! ಸುಖಾಸನದಲ್ಲಿ ಶಾಂತಚಿತ್ತದಿಂದ ತಾಳಗರಿಗ್ರಂಥ ಓದಬೇಕೆಂಬ ನಿಯಮವಿದ್ದರೂ, ಲಗುಬಗೆಯಿಂದ ಓದಿ ಮುಗಿಸುವವರೂ ಇದ್ದರು (15).

ಬಳಸಿದ ತಾಳೆಗರಿಗಳು ಮುದುಡಿಯಾಗದಂತೆ, ಹರಿದು ಹೋಗದಂತೆ, ಅವಕ್ಕೆ ಕೆಳಗೆ, ಮೇಲೆ ಕವಚಗಳಿಂದ ಹೊದಿಸಲೇಬೇಕಾಗಿತ್ತು. ಇದಕ್ಕಾಗಿ ತೆಳುವಾದ ಹಲಗೆ(16) ಬಳಸುವದು ಸಾಮಾನ್ಯವಾಗಿದ್ದರೂ ಕಲಾಭಿರುಚಿಯುಳ್ಳವರು ವಿವಿಧ ಬಗೆಯ ಕವಚಗಳನ್ನು ತಯಾರಿಸುತ್ತಿದ್ದರು. ವೃತ್ತಿಕಲಾಕಾರರಿಂದ ಅವುಗಳ ಮೇಲೆ ಅರ್ಥಪೂರ್ಣವಾದ ಚಿತ್ರಗಳನ್ನು ರಚಿಸಿಕೊಳ್ಳುತ್ತಿದ್ದರು. ಅಲ್ಲದೇ ಪ್ರತಿ ವಿದ್ಯಾಕೇಂದ್ರದಲ್ಲಿ ಹವ್ಯಾಸಿ ಚಿತ್ರಕಾರರು ಇದ್ದೇ ಇರುತ್ತಿದ್ದರು. ಹೊದಿಕೆಗಳ ಹೊರಮೈಯನ್ನು ತಿಕ್ಕಿ, ಉಜ್ಜಿ ನುಣುಪುಮಾಡಿ ಅವು ವರಲೆ, ಬೂಷ್ಟುಗಳ ಆಕ್ರಮಣಕ್ಕೆ ಬಲಿಯಾಗದಂತೆ ರಾಸಾಯನಿಕದಲ್ಲಿ ಅದ್ದಿಸಿ ಇಡುತ್ತಿದ್ದರು. ಎಂಟು ಹತ್ತು ದಿನಗಳ 'ಚಿಕಿತ್ಸೆ'ಯ ನಂತರ ಅವುಗಳನ್ನು ನೆರಳಲ್ಲಿ ಒಣಗಿಸಿ ವರ್ಣಲೇಪನ ಮಾಡುತ್ತಿದ್ದರು. ಇದಕ್ಕಾಗಿ ಅರಗು ಇಲ್ಲವೇ ತೈಲವರ್ಣಗಳನ್ನು ಬಳಸುವದು ಸಾಮಾನ್ಯವಾಗಿತ್ತು. ವರ್ಣ, ಖನಿಜಗಳಿಂದ ದೊರಕಿಸಿದ ಜಲವರ್ಣಗಳನ್ನು ತಾತ್ಪೂರ್ತಿಕ ರಕ್ಷಾಕವಚಗಳಿಗಾಗಿ ಉಪಯೋಗಿಸುತ್ತಿದ್ದರು.

ಮುಖಪುಟದ ಮೇಲೆ ಎಂಥ ಚಿತ್ರವಿರಬೇಕೆಂಬುದು ಹಸ್ತಪ್ರತಿಯ ಮೇಲೆ ಅವಲಂಬಿಸಿರುತ್ತಿತ್ತು. ಓದುಗನಿಗೆ ಗೊಂದಲವಾಗದಂತೆ ಹಲವರು ಆಕೃತಿಗಳ ಹೆಸರನ್ನು ಬರೆಯುತ್ತಿದ್ದರು.

ನಿಸರ್ಗ ಪ್ರೇಮಿ, ಹತ್ತಾರು ಕಮಲದ ಹೂಗಳನ್ನು ಇಲ್ಲವೆ ಮೊಗ್ಗು-ಹೂಗಳನ್ನು ತಳೆದ ಬಳ್ಳಿಗಳನ್ನು ಮುಖಚಿತ್ರಕ್ಕೆ ಬಳಸಬಹುದು. ಪಕ್ಷಿಪ್ರಿಯನು ಹಂಸವನ್ನು ತನ್ನ ಅಭಿರುಚಿಗೆ ಅನುಗುಣವಾಗಿ ಕಲಾತ್ಮಕವಾಗಿ ರಚಿಸಬಹುದು(17). ಸೂರ್ಯೋದಯ ಕಾಲದಲ್ಲಿ ಮರಿ ಜಿಗರೆ, ತಾಯನ್ನು ಅರಸಿಕೊಂಡು ಹೋಗುವಾಗ ಭಯಗ್ರಸ್ಥ ಮಾಂಸಾಹಾರಿ ಪ್ರಾಣಿಯೂ ಕಾಲಿಗೆ ಬುದ್ಧಿ ಹೇಳುವದು(18) ಇನ್ನೊಂದರ ಮೇಲೆ ಚಿತ್ರಿತವಾಗಿದೆ. ವಿವಿಧ ಭಂಗಿಯಲ್ಲಿ ವಿದೂಷಕರು ಒಂದೆಡೆ ಚಿತ್ರಿತವಾದರೆ, ವಾಯುವೇಗದಿಂದ ಓಡುವ ಕುದುರೆ ಸವಾರ, ಮತ್ತೊಂದರ ಮೇಲೆ ಮೂಡಿದ್ದಾನೆ(19). ಶ್ರೀವೈಷ್ಣವ ಕೃತಿಯೊಂದರ ಮೇಲೆ ಶಂಖ, ಚಕ್ರ, ನಾಮಕ್ಕೆ ಪ್ರಾಮುಖ್ಯತೆ ಕೊಟ್ಟಿದ್ದರೆ, ಇನ್ನೂ ಕೆಲವುಗಳ ಮೇಲೆ ವಿಷ್ಣುವಿಗಾಗಿ ಕೆಲವರು ಕೈಮುಗಿದು ನಿಂತ ಚಿತ್ರವಿದೆ. ರಾಮಾಯಣದ ಹೊದಿಕೆಯ ಮೇಲೆ ವಾನರ ಸೇನೆಯೇ ಸ್ವಾಗತಕ್ಕಾಗಿ ನಿಂತಿದ್ದರೂ ತಮ್ಮೊಳಗೆ ಕಪಿಚೇಷ್ಟೆಗೆ ಏನೂ ಕೊರತೆ ಮಾಡಿಕೊಂಡಿಲ್ಲ. ಶೈವ ಕೃತಿಗಳ ಮೇಲೆ, ಮಧ್ಯ ಅಲಂಕೃತ ಲಿಂಗವನ್ನು ರಚಿಸಿ ಅತ್ತಿತ್ತ ಬಸವನ ಚಿತ್ರಗಳನ್ನು ಜೋಡಿಸಲಾಗಿದೆ. ಜೈನ ಕೃತಿಗಳ ಮೇಲೆ ವಿವಿಧ ತೀರ್ಥಂಕರರ ಚಿತ್ರಗಳೊಂದಿಗೆ ಅವರ ವಾಹನ ಸೇರಿಸಲಾಗಿದೆ.

ತಾಳೆಗರಿಗಳ ಮೇಲೆ ಶುದ್ಧ, ಸುಂದರ ಅಕ್ಷರಗಳನ್ನು ಮೂಡಿಸುವದಕ್ಕೆ ಹೆಚ್ಚಿನ ಲಕ್ಷಪೂರ್ವಕ ತರಬೇತಿ ಕೊಡಲಾಗುತ್ತಿತ್ತು. ದುಂಡುದುಂಡಾಗಿ ಮುತ್ತಿನ ಅಕ್ಷರ ಮೂಡಿಸಿದವರಿಗೆ, ವರ್ಗದಲ್ಲಿ ಹೆಚ್ಚಿನ ಮಾನ್ಯತೆಯಿರುತ್ತಿತ್ತು. ಹೆಚ್ಚಿನ ಕಲಾಸಕ್ತಿ ಉಳ್ಳವರು, ಪ್ರಥಮ ಅಕ್ಷರದ ಸುತ್ತಲೂ ಹೂಬಳ್ಳಿಗಳನ್ನು ರಚಿಸುವ ಪರಿಪಾಠವಿದ್ದಿತು. ತಮ್ಮ ಕಂಟದ ಬರವಣಿಗೆ ಸ್ಫುಟವಾಗಿರಬೇಕೆಂದು ಅದರ ಮೇಲೆ ಇದ್ದಿಲುಪುಡಿ, ಅಂಟು, ಗಿಡ ಮೂಲಿಕೆಗಳ ರಸಾಯನ ಮಿಶ್ರಣವನ್ನು ಲೋಹದ ಕಡ್ಡಿಯಿಂದ ಸವರಿ ತೀಡುತ್ತಿದ್ದರು. ಹೆಚ್ಚಿನ ಮಿಶ್ರಣವನ್ನು ಒರೆಸಿ ತೆಗೆಯುತ್ತಿದ್ದರು. ವಿದ್ಯಾರ್ಥಿಯಾದವನು ಕಚ್ಚಾ ಪ್ರತಿ ಬರೆದು ತಿದ್ದಿ, ತೀಡಿ, ಗುರುಗಳಿಂದ ಒಪ್ಪಿಗೆ ಪಡೆದ ನಂತರವೇ ಅದನ್ನು ಶುಭ್ರವಾಗಿ ತಾಳೆಗರಿಯ ಮೇಲೆ ಬರೆಯಬೇಕಾಗಿತ್ತು. ಒಮ್ಮೆ ಬರೆದದ್ದು ಅಳುಕಿಸಲು ಆಗುತ್ತಿರಲಿಲ್ಲವಾದ್ದರಿಂದ, ಪ್ರತಿ ಮಾಡುವಾಗ ಎಚ್ಚರಿಕೆ ವಹಿಸುವದು ಅತಿ ಅವಶ್ಯವಿತ್ತು. ಒಮ್ಮೊಮ್ಮೆ ಒಂದೆರಡು ಅಕ್ಷರ ಅಥವಾ ಶಬ್ದಗಳನ್ನು ತಪ್ಪಾಗಿ ಬರೆದರೆ ಇಡೀ ಗರಿಯನ್ನೇ ತ್ಯಜಿಸುವದು ಅನಿವಾರ್ಯವಾಗಿಬಿಡುತ್ತಿತ್ತು. ದಾರ ಪೋಣಿಸುವದಕ್ಕಾಗಿ ರಚಿಸಿದ ಛಿದ್ರಗಳು ಸತತವಾದ ಬಳಕೆಯಿಂದಾಗಿ ಹಿಗ್ಗುತ್ತ ಹೋಗುವದರಿಂದ ಅದರ ಸುತ್ತಲೂ ಸಾಕಷ್ಟು ಸ್ಥಳ ಬಿಟ್ಟೇ ಬರೆಯುತ್ತಿದ್ದರು.

'ಲೇಖಕ ಶಿಖಾಮಣಿ' ಎಂದು ಬಿರುದು ಪಡೆದ ರಚ್ಚುಕನು ಅತ್ಯಂತ ಸುಂದರ ಅಕ್ಷರಗಳನ್ನು ಮೂಡಿಸುತ್ತಿದ್ದುದರಿಂದ ವನಿತೆಯರು ಪ್ರೇಮಪತ್ರಗಳನ್ನು ಬರೆಸಲು ಆತನ ಸಹಾಯ ಪಡೆಯುತ್ತಿದ್ದರಂತೆ! ಸೋಮದೇವ ಸೂರಿಯ ಯಶಸ್ತಿಲಕ ಕಾವ್ಯದ ಪ್ರತಿ ಮಾಡಿಸಲು

ಈ ರಚ್ಚುಕನ ನೆರವು ಲಭ್ಯವಾಯಿತು.[೫] ಉತ್ತಮ ಲಿಪಿಕಾರರಿಗೆ ಸಮಾಜದಲ್ಲಿ ಗೌರವ, ಮಾನ್ಯತೆಗಳು ಇದ್ದವು. ಅಂತೆಯೇ ಅರಸರು, ಆಡಳಿತಗಾರರು, ವಿದ್ವಾಂಸರು, ಶ್ರೀಮಂತರು, ಸಾರ್ವಜನಿಕರು ಅವರನ್ನು ಸನ್ಮಾನಿಸುವ ಪರಿಪಾಠ ಬೆಳೆದು ಬಂದಿತ್ತು. ಅರಸರು, ಪ್ರಧಾನಿಗಳು, ಮಂತ್ರಿಗಳು ಹಲವಾರು ಲಿಪಿಗಳನ್ನು ರೂಢಿಸಿಕೊಳ್ಳುತ್ತಿದ್ದರು.

ಉದಯೋನ್ಮುಖ ಕವಿಯು ಸದಾಕಾಲವೂ ತನ್ನ ಹತ್ತಿರ ತಾಳೆಗರಿ, ಕಂಟ, ಮಸಿ, ಹಲಗೆ, ಬಳಪಗಳನ್ನು ಇಟ್ಟಿರಬೇಕೆಂಬ ಕಡ್ಡಾಯವಿತ್ತು.[೬] ಸ್ಫೂರ್ತಿ ಬಂದಾಗ, ವಿಚಾರ ಹೊಳೆದಾಗ, ತಕ್ಷಣ ಅವನ್ನು ಬರೆದಿಡುವದಕ್ಕೆ ಸಹಾಯವಾಗುತ್ತಿತ್ತು. ಈ ಕೆಲಸ ಮುಂದೆ ಹಾಕಿದರೆ, ಇಲ್ಲವೇ ಮಾಡದೇ ಹೋದರೆ, ಆಗುವ ಹಾನಿ ಅಷ್ಟಿಷ್ಟಲ್ಲ. ನಂತರ ಕರಡು ಪ್ರತಿಯನ್ನು ಆದಷ್ಟು ಶೀಘ್ರವಾಗಿ ಪರಿಷ್ಕರಿಸಿ ಬರೆಯಬೇಕಾಗಿತ್ತು. ಸ್ನೇಹಿತರ ಅಭಿಪ್ರಾಯ ಪಡೆಯುವ ನೆಪದಲ್ಲಿ ಅದನ್ನು ಮುಂದೂಡುವಂತೆಯೂ ಇರಲಿಲ್ಲ. ಕವಿಯ ಅಥವಾ ಲೇಖಕನ ಅಕ್ಷರಗಳು ಸುಂರವಾಗಿರದಿದ್ದರೆ, ಲಿಪಿಕಾರನ ಸಹಾಯ ಪಡೆಯಬಹುದಾಗಿತ್ತು. ಲಿಪಿಕಾರನು ಸಣ್ಣ ತಾಳೆಚೂರಿನ ಮೇಲೆ ತನ್ನ ಇಷ್ಟದೇವತೆಯ ಹೆಸರು ಬರೆದು ಅದನ್ನು ನೀರ ಮೇಲೆ ತೇಲಿಬಿಟ್ಟು ತನ್ನ ಯತ್ನಕ್ಕೆ ಯಶಸ್ಸು ಕೋರುತ್ತಿದ್ದ. ಕೈಯಲ್ಲಿ ತಾಳೆಗರಿ ಕಟ್ಟು, ಕಂಟಗಳ ಪೆಟ್ಟಿಗೆ, ಮಸಿ-ದೌತಿಗಳನ್ನು ಹೊಂದಿದ ಲಿಪಿಕಾರರನ್ನು ಜನ ಕೂಡಲೇ ಗುರುತಿಸಿ ಗೌರವಿಸುತ್ತಿದ್ದರು. ಅವರು ಕಾಲುಮಣೆಗಳ ಮೇಲೆ ಗರಿಗಳನ್ನು ಇಟ್ಟು ಕಣ್ಣಲ್ಲಿ ಕಣ್ಣಿಟ್ಟು ಬೆನ್ನು, ಸೊಂಟ, ಕೊರಳು ಬಾಗಿಸಿ, ನೋಯಿಸಿಕೊಂಡು, ಅತ್ಯಂತ ಪರಿಶ್ರಮದಿಂದ ಗ್ರಂಥವನ್ನು ಸಿದ್ಧ ಮಾಡುತ್ತಿದ್ದರು.

ಪಥ್ಯ, ಅರ್ಧ ಓಲೆಗೇ ಮುಗಿದಾಗ, ಎರಡು ಅಧ್ಯಾಯಗಳ ನಡುವಿನ ಸ್ಥಳವನ್ನು ಆಕರ್ಷಕ ವರ್ತುಲಾಕೃತಿಗಳಿಂದ ಅಲಂಕರಿಸುತ್ತಿದ್ದರು. ವಿದ್ಯಾರ್ಥಿಯಿದ್ದಾಗ ಬರಿಗೈಯಲ್ಲಿ ಇಂಥ ವರ್ತುಲ ರಚಿಸಿದರೂ ಪರಿಣತರೆನಿಸಿಕೊಂಡಾಗ ಕಂಪಾಸ್ ಬಳಸಲು ಅನುಮತಿ ಕೊಡಲಾಗುತ್ತಿತ್ತು. ಕೇವಲ ಕಂಪಾಸ್ ಒಂದನ್ನೇ ಬಳಸಿ, ವರ್ತುಲ, ಅರ್ಧ ವರ್ತುಲಗಳಲ್ಲಿ ಅಂದಿನವರು ರಚಿಸಿದ ಚಿತ್ರಗಳು(20) ಆಧುನಿಕರನ್ನೂ ಬೆರಗುಗೊಳಿಸುವಂಥವು. ಹೂ, ಮೊಗ್ಗು, ಪಕಳೆ, ಪರ್ಣಗಳನ್ನು ರಚಿಸುತ್ತಿದ್ದರು. ಹಲವೆಡೆ ಎರಡು ಆಕೃತಿಗಳ ನಡುವಿನ ಸ್ಥಳವನ್ನು ಕಿರುಚಿತ್ರಗಳಿಂದ(21) ತುಂಬಿಸುತ್ತಿದ್ದರು. ಅಕ್ಷರಗಳನ್ನೂ ಚಿತ್ರಗಳನ್ನೂ ಸಂಯುಕ್ತವಾಗಿ ರಚಿಸಿದವರು(22) ಎಲ್ಲರಿಂದ ತಲೆತೂಗಿಸಿಕೊಳ್ಳುತ್ತಿದ್ದರು. ಎಷ್ಟೋ ತಾಳೆಗರಿ ಗ್ರಂಥಗಳಲ್ಲಿ ಇಂಥ ಚಿತ್ರಗಳಿಗೆ ಬಣ್ಣಗಳನ್ನು ತುಂಬಿ ಆಕರ್ಷಣೆಯನ್ನು ಹೆಚ್ಚಿಸಲಾಗಿದೆ. ಈ ಚಿತ್ರಗಳಲ್ಲದೇ, ಕೃತಿಯನ್ನು ಆಧರಿಸಿ ಚಿತ್ರಗಳನ್ನು ನಿರ್ಮಿಸಲಾಗುತ್ತಿತ್ತು. "ಗಣೇಶ ಮಹಾತ್ಮೆ"ಯಲ್ಲಿ ಚತುರ್ಭುಜ ಗಣಪನ ವಿಗ್ರಹವನ್ನು(23) ವಿಶಿಷ್ಟ ಶೈಲಿಯಲ್ಲಿ ರಚಿಸಲಾಗಿದೆ. ಅದರಂತೆ ಕಲಾತ್ಮಕ ಹಂಸ(24) ಇನ್ನಿತರ ಪ್ರಾಣಿಗಳೊಡನೆ ಕಾಣಸಿಗುತ್ತದೆ. ಕೆಲವೊಮ್ಮೆ ಒಂದೇ ಆಕೃತಿಗೆ ಎರಡು, ಮೂರು ತಾಳೆಗರಿ ಬಳಸಿ, ಸಂಯುಕ್ತ ಚಿತ್ರವನ್ನು ರಚಿಸುತ್ತಿದ್ದರು. ಜೈನ ಕೃತಿಗಳಾದ ಧವಳ, ಮಹಾಧವಳ, ಜಯಧವಳಗಳಲ್ಲಿ ವರ್ಣಚಿತ್ರಗಳನ್ನು ಸೇರಿಸಲಾಗಿದೆ.

ಸಿದ್ಧವಾದ ಗ್ರಂಥಗಳನ್ನು ಅತ್ಯಂತ ಜಾಗರೂಕತೆಯಿಂದ ಕಾದಿಡುವದು ಅವಶ್ಯವಾಗಿತ್ತು. ಅವುಗಳನ್ನು ರಕ್ಷಿಸಿ ಇಡುವದಕ್ಕಾಗಿ, ಓಲೆಗರಿ ಪೆಟ್ಟಿಗೆಗಳನ್ನು ಸಾಗವಾನಿ, ನಂದಿಗಳಂತಹ ಕೊರಡಿನಿಂದ ತಯಾರಿಸುತ್ತಿದ್ದರು. ಇನ್ನಿತರ ಕಟ್ಟಿಗೆಗೆ ಬಲುಬೇಗ ಗೆದ್ದಲು ಹಿಡಿಯುತ್ತಿತ್ತು. ಈ ಪೆಟ್ಟಿಗೆಗಳಿಗೆ ನಾಲ್ಕು ಕಾಲುಗಳಿದ್ದು(25) ಮುಚ್ಚಳ, ಬೀಗ ಹಾಕುವ ವ್ಯವಸ್ಥೆ ಇರುತ್ತಿತ್ತು ಇಂಥ ಪೆಟ್ಟಿಗೆಗಳನ್ನು ಸಿದ್ಧಮಾಡಲು, ಹೊರಮೈ ಅಲಂಕರಿಸಲು, ಚಿತ್ರ ಬರೆಯಲು(26) ತಜ್ಞ ಗುಡಿಗಾರರ ನೆರವು ಪಡೆಯುತ್ತಿದ್ದರು. ಲೇಖಕರು, ಯತಿಗಳು, ಗುರುಗಳು, ಶಿಕ್ಷಕರು ಊರಿಂದೂರಿಗೆ ಪ್ರಯಾಣ ಬೆಳೆಸುವಾಗ ಅವರ ಸಕಲ ಕೃತಿಗಳನ್ನು ಪಲ್ಲಕ್ಕಿ, ಮೇಣೆ ಇಲ್ಲವೇ ಬಂಡಿಗಳಲ್ಲಿ ಒಯ್ಯಲಾಗುತ್ತಿತ್ತು. ಇಂಥ ಸಂದರ್ಭಗಳಲ್ಲಿ ಅವು ಮಳೆ, ಬೆಂಕಿ, ಕಳ್ಳರ ಹಾವಳಿಗೆ ಈಡಾಗುವದು ಸಾಮಾನ್ಯವಾಗಿತ್ತು. ಬರೆಹಗಾರರು, ಅನೇಕ ಕಾರಣಗಳಿಂದ ತಮ್ಮ ಕೃತಿಗಳನ್ನು ಒತ್ತೆ ಇಡುತ್ತಿದ್ದರಿಂದ, ಧನಿಕರಿಗೆ ಮಾರುತ್ತಿದ್ದರಿಂದ, ಅಥವಾ ದೇಶತ್ಯಾಗ ಮಾಡಿ ಹೋಗುವ ಪ್ರಸಂಗದಿಂದ ಅವು ಶಾಶ್ವತವಾಗಿ ನಷ್ಟವಾಗುತ್ತಿದ್ದವು.[೬] ಆದ್ದರಿಂದ ಅವುಗಳ ಪ್ರತಿಮಾಡಿ ಚಲಾವಣೆಯಲ್ಲಿಡುವದು ಅತ್ಯವಶ್ಯವಾಗಿತ್ತು. ಹೀಗಾಗಿ ವೃತ್ತಿ-ಪ್ರತಿಕಾರರಿಗೆ ಬೇಡಿಕೆ ಬೆಳೆಯಿತು. ಧರ್ಮಿಷ್ಠರು, ರಾಜ-ರಾಣಿಯರು ಧರ್ಮಗ್ರಂಥಗಳ ನೂರಾರು ಪ್ರತಿಗಳನ್ನು ಮಾಡಿಸಿ ತಮ್ಮ ರಾಜ್ಯದಲ್ಲಿ ವಿತರಣೆ ಮಾಡಿಸುತ್ತಿದ್ದರು. ಪುಸ್ತಕ ವಿತರಣೆ, ವಿದ್ಯಾದಾನದ ಅತಿ ಮಹತ್ವದ ಘಟಕವೆಂದು ಮನಗಂಡ ಸ್ಮೃತಿ ಪುರಾಣಗಳು, ಅದಕ್ಕೆ ಮೋಕ್ಷ ಪ್ರಾಪ್ತಿಯ ಸಾಧನದ ಸ್ಥಾನ ನೀಡಿದವು.[೭] ವಿಶ್ವವಿದ್ಯಾಲಯಗಳಲ್ಲಿ ಗ್ರಂಥಗಳಿಗಾಗಿಯೇ ಗ್ರಾಮದಾನ ಮಾಡುತ್ತಿದ್ದರು. ರಾಮಾಯಣ, ಮಹಾಭಾರತ, ಪುರಾಣಗಳ ಪ್ರತಿಗಳ ದಾನ ಮಾಡುವ ಪದ್ಧತಿಯಂತೆ, ಅನಕ್ಷರಸ್ಥರೂ ಇನ್ನಿತರರಿಗೆ ಗ್ರಂಥಗಳ ದಾನ ಮಾಡಿ ಆ ಮೂಲಕ ಪುಣ್ಯ ಸಂಪಾದನೆಗೆ ಅವಕಾಶವಿತ್ತು.

ಅತ್ತಿಮಬ್ಬೆ, ಪೊನ್ನನ ಶಾಂತಿ ಪುರಾಣದ ಸಹಸ್ರ ಪ್ರತಿಗಳನ್ನು ಮಾಡಿಸಿ ದಾನ ಮಾಡಿ ಚಿರಸ್ಮರಣೀಯಳಾಗಿದ್ದಾಳೆ. ಜೈನರಲ್ಲಿ ಇತರ ದಾನಗಳೊಂದಿಗೆ ಗ್ರಂಥದಾನವೂ ಗೃಹಸ್ಥ ಧರ್ಮದ ಕರ್ತವ್ಯವೆನಿಸಿಕೊಂಡು, ಹಲವಾರು ಶಾಸನಗಳು ಆಹಾರ, ಆಶ್ರಯ, ಭೈಷಜ್ಯ(ಔಷಧ) ದಾನದೊಂದಿಗೆ ಗ್ರಂಥದಾನ ಮಾಡಿದವರನ್ನು ಹೆಸರಿಸುತ್ತವೆ. ವೀರಶೈವರಲ್ಲಿಯೂ ಗ್ರಂಥದಾನದ ಪದ್ಧತಿಯಿದ್ದು, ಭಂಡಾರಿ ಜಕ್ಕಪ್ಪ, ಕಲ್ಲೆಹದ ಕೇತಿ ಸೆಟ್ಟಿ, ಮತ್ತು ಲಕ್ಕಣ್ಣ ದಂಡೇಶರು, ವಚನ ಸಂಗ್ರಹಗಳನ್ನು ಪ್ರತಿಮಾಡಿಸಿ, ದಾನ ಮಾಡಿ ಅವು ಉಸಿರು ಹಿಡಿದು ಜೀವಿಸುವಂತೆ ಮಾಡಿದರು. ಬಿದನೂರಿನ ಇಮ್ಮಡಿ ಬಸವಪ್ಪನಾಯಕನು (ಕ್ರಿ.ಶ.೧೭೩೪-೫೯) ಲಕ್ಷ ಪ್ರತಿಗಳಲ್ಲಿ 'ಆಗಮ ಶಿವಶಾಸ್ತ್ರ'ಗಳ ಪುಸ್ತಕಗಳನ್ನು ಇತರ ದಾನಗಳೊಂದಿಗೆ ಜಂಗಮರಿಗೆ ಕೊಡಿಸಿದನು.[೮] ಧರ್ಮಿಷ್ಠರು ಓದಲು, ಓದಿಸಲೆಂದು ಗ್ರಂಥಗಳ ಪ್ರತಿ ಮಾಡಿಸುತ್ತಿದ್ದರು. ತಳಕಾಡು ನಾಯಕಶಾನಿ ಕೆಂಪಿ, ತನ್ನ ಮಗಳಿಗೆ ಓದಿಸುವದಕ್ಕಾಗಿ ಪುಸ್ತಕದ ಪ್ರತಿ ಬರೆದು ಕೊಟ್ಟಿದ್ದಳು. ಅಕ್ಕನೂರ ಸಿರಿಗಪನೆಂಬವನು ಮುಂಡಿಗೆಯ ಪಾಯಣನ ಮಗಳು ಪದುಮಾಯಿಗೆ 'ಸುಕುಮಾರ ಚರಿತೆ'ಯನ್ನು ನಕಲು ಮಾಡಿಕೊಟ್ಟಿದ್ದ. ಜಿನಚಂದ್ರನು ತನ್ನ ಮೂವರು

ಹೆಣ್ಣುಮಕ್ಕಳಿಗೆ ಓದಿಸಲೆಂದೇ(ಪ್ರತಿ) ಬರೆದಿದ್ದ. ಅದರಂತೆ ಲಿಂಗಮ್ಮ, ಭೈರಾಜಿ ಎಂಬವರೂ ಪುಸ್ತಕಗಳ ಪ್ರತಿ ಬರೆದು ಇನ್ನಿತರರಿಗೆ ಓದಲು ಅನುಕೂಲ ಮಾಡಿಕೊಟ್ಟಿದ್ದಾರೆ.[೧೦] ಹೀಗೆ ಅನೇ ಮಹಿಳೆಯರು, ಗ್ರಂಥಗಳ ಪ್ರತಿ ಮಾಡಿ ಸ್ವತಃ ಅಭ್ಯಸಿಸುತ್ತಿದ್ದರು, ಇನ್ನಿತರರಿಂದಲೂ ಓದಿಸಿ ಸ್ತ್ರೀಶಿಕ್ಷಣ ಪ್ರಸಾರವಾಗಲು ಸಹಾಯಮಾಡಿದರು.

ಲಿಪಿಕಾರರನ್ನು ನಿಯುಕ್ತ, ವೃತ್ತಿ ಮತ್ತು ಹವ್ಯಾಸಿ ಲಿಪಿಕಾರರೆಂದು ಗುರುತಿಸಬಹುದು.[೧೧] ಮೊದಲನೆಯವರನ್ನು ಅರಸರು, ಅಡಳಿತಗಾರರು ನೇಮಿಸಿದರೆ, ಎರಡನೆಯವರನ್ನು ಸ್ವಾವಲಂಬಿಯಾಗಿ ವೃತ್ತಿಯಲ್ಲಿ ಪಳಗಿದವರೆಂದೂ, ಮೂರನೆಯವರನ್ನು ಮನೆಗಳಲ್ಲಿ, ಮಠಗಳಲ್ಲಿ ಇಲ್ಲವೇ ಶಿಕ್ಷಣ ಕೇಂದ್ರಗಳಲ್ಲಿ ಕಾಣಬಹುದಾಗಿತ್ತು. ಈ ವರ್ಗದಲ್ಲಿ ಹೆಂಗಳೆಯರೂ ಇರುತ್ತಿದ್ದರು. ಸಂಸ್ಕೃತ ಹಸ್ತಪ್ರತಿಗಳನ್ನು ದೇವನಾಗರಿಯಲ್ಲಿ ಮತ್ತು ಕನ್ನಡದಲ್ಲಿ, ಕನ್ನಡಗ್ರಂಥಗಳನ್ನು ಅದೇ ಲಿಪಿಯಲ್ಲಿ ಪ್ರತಿ ಮಾಡುವದು ವಾಡಿಕೆಯಾದರೂ ಕೆಲವು ಕನ್ನಡ ಗ್ರಂಥಗಳಿಗೆ ದೇವನಾಗರಿ ಲಿಪಿಯನ್ನು ಬಳಸಲಾಗಿದೆ! ಲಿಪಿಕಾರರ ಶಿಕ್ಷಣವು ಲೇಖಕ ಮತ್ತು ಕವಿಗಳಿಗಷ್ಟೇ ಇರುತ್ತಿರಲಿಲ್ಲವಾದ್ದರಿಂದ ಅಲ್ಲದೇ ಅವರು ಕೇವಲ ಅಕ್ಷರಗಳತ್ತ ಹೆಚ್ಚು ಲಕ್ಷ್ಯ ಪೂರೈಸುತ್ತಿದ್ದರಿಂದ, ಅಲ್ಲಿ, ಇಲ್ಲಿ ಭಾಷಾದೋಷ, ವ್ಯಾಕರಣ ದೋಷಗಳು ನುಸುಳಿಕೊಳ್ಳುವದು ಸಾಮಾನ್ಯವಾಗಿತ್ತು. ಆದ್ದರಿಂದ ಪ್ರತಿಗಳನ್ನು ಮೂಲಗ್ರಂಥಗಳೊಡನೆ ಹೋಲಿಸಿ ನೋಡುವ ಪರಿಪಾಠವೂ ಇತ್ತು. ಗ್ರಂಥದ ಕೊನೆಯಲ್ಲಿ ತಾವು ಬಹುಕಷ್ಟದಿಂದ ಪ್ರತಿಮಾಡಿದ ಗ್ರಂಥವನ್ನು ಅಷ್ಟೇ ಯತ್ನದಿಂದ ಸಂರಕ್ಷಿಸಬೇಕೆಂಬ ವಿನಂತಿ ಇರುತ್ತಿತ್ತು.[೧೨]

ವಿಜಯನಗರವನ್ನು ಸಂದರ್ಶಿಸಿದ ಅನೇಕ ವಿದೇಶೀಯರು, ತಾಳೆಗರಿಯ ಬಳಕೆಯ ಬಗ್ಗೆ ವಿವರ ಮಾಹಿತಿ ಬರೆದಿಟ್ಟಿದ್ದಾರೆ. ಪರ್ಶಿಯದ ಪ್ರವಾಸಿ ಅಬ್ದುಲ್ ರಝಾಕನು (ಕ್ರಿ.ಶ. ೧೪೪೨) ಅರಮನೆಯ ಕಾರ್ಯಾಗಾರದಲ್ಲಿ (ದಫ್ತರಖಾನೆಯಲ್ಲಿ) ಗುಮಾಸ್ತರು ಕಂಟದಿಂದ ತಾಳೆಗರಿಗಳ ಮೇಲೆ ಲೆಕ್ಕಾಚಾರ ಬರೆಯುತ್ತಿದ್ದುದನ್ನು ನೋಡಿದ್ದ. ಪೋರ್ಚುಗೀಸ್ ಪ್ರವಾಸಿ ದುಆರ್ಟೆ ಬಾರ್ಬೋಸಾ, ಪಶ್ಚಿಮ ಕರಾವಳಿಯಲ್ಲಿ ಉದ್ದವಾಗಿ ಒರಟಾದ ತಾಳೆಗರಿಗಳ ಮೆಲೆ ಕಂಟದಿಂದ ಬರೆಯುವವರನ್ನು ವಿಸ್ಮಯದಿಂದ ಬಣ್ಣಿಸಿದ್ದಾನೆ. ಅರಸರ ಗುಮಾಸ್ತರ ಹತ್ತಿರ ರಾಜಮುದ್ರೆಗಳಿದ್ದ ತಾಳೆಗರಿಗಳು ಇರುತ್ತಿದ್ದವು.

## ಸಂದರ್ಭ ಸೂಚಿ

೧. ದತ್: ಪು.೨೩೬.
೨. ಓಲೆಗರಿಗಳನ್ನು ಸೂಡುಗಳಲ್ಲಿ ಕಟ್ಟಿ ಹೇರುಗಳಲ್ಲಿ, ಸಂತೆಯಲ್ಲಿ ಮಾರುತ್ತಿದ್ದರು. ಶಾಸನ ಸಾಹಿತ್ಯ ಸಂಚಯ, ಪು.೧೫೨.
೩. ಶಿವತತ್ವ ಚಿಂತಾಮಣಿ ಅಧ್ಯಾಯ ೩೮, ಪದ್ಯ ೭೮ 'ಓಲೆಯ ಕಾಯಕದ ವೀರಣ'.
೪. ಎಸ್.ಐ.ಐ. XI (II) ನಂ.೧೨೭.
೫. ಹಂಡಿಕಿ ಕೆ.ಕೆ. ಯಶಸ್ತಿಲಕ ಎಂಡ್ ಇಂಡಿಯನ್ ಕಲ್ಚರ್ ಪು.೧.

೭. ಕಾವ್ಯ ಮೀಮಾಂಸಾ, ಪು. ೧೯೮.

೭. ಮಣಿಹ, ಪು. ೨೨೪.

೮. "ಪುರಾಣಂ ಭಾರತಂ ವಾಪಿ ರಾಮಾಯಣಮಪಿಚ ಲಿಖಿತ್ವಾ ಪುಸ್ತಕಂ ದತ್ವಾ ಮುಕ್ತಿಭುಕ್ತಿಂ ಅವಾಪ್ನುಯಾತ್" ಅಗ್ನಿಪುರಾಣ: ಅಧ್ಯಾಯ ೨೧೧, ಪದ್ಯ ೫೩-೫೪.

೯. ದೇವೀರಪ್ಪ ಎಚ್. ಲೇಖನಾಭಿವೃದ್ಧಿ ಕರ್ನಾಟಕ ಭಾರತಿ, ೧೯೮೩, ಪು.೪೧.

೧೦. ಕಲಬುರ್ಗಿ ಎಂ.ಎಂ., ಕನ್ನಡ ಗ್ರಂಥ ಸಂಪಾದನಾಶಾಸ್ತ್ರ, ಪು.೪೩-೪೫.

೧೧. ಅದೇ.

೧೨. "ಭಗ್ನಪೃಷ್ಠಕಟಿಗ್ರೀವಾ। ಬದ್ಧದೃಷ್ಟಿರಧೋಮುಖಂ ಕಷ್ಟೇನ ಲಿಖಿತಂ ಶಾಸ್ತ್ರಂ। ಯತ್ನೇನ ಪರಿಪಾಲಯ" ನರಸಿಂಹಾಚಾರ್ ಡಿ.ಎಲ್; ಕನ್ನಡ ಗ್ರಂಥ ಸಂಪಾದನೆ, ಪು.೫೧.

# ೪. ಶೈಕ್ಷಣಿಕ ಸಾಧನಗಳು

ಮೌಖಿಕ ಶಿಕ್ಷಣವೇ ಪ್ರಧಾನವಾಗಿದ್ದ ಯುಗದ ಕರ್ನಾಟಕದಲ್ಲಿ, ಕ್ರಿ.ಶ. ಪೂರ್ವದಲ್ಲಿಯೇ ಅಶೋಕ ಚಕ್ರವರ್ತಿ, ಬಂಡೆಗಳಲ್ಲಿ ಶಾಸನಗಳನ್ನು ಬರೆಸಿದ್ದು ಗಮನಾರ್ಹ. ಸಾರ್ವಜನಿಕರಿಗೆಲ್ಲರಿಗೂ ನಿಲುಕುವ ಸ್ಥಳಗಳಲ್ಲಿ ಇವುಗಳನ್ನು ನಿಲ್ಲಿಸಿದ್ದ. ಶತಕಗಳಲ್ಲಿ, ಉಳಿದ ಅರಸರೂ ಪ್ರಜೆಗಳಿಗೆ ರಾಜಕೀಯ ಮತ್ತು ಧಾರ್ಮಿಕ ಪ್ರಸಂಗಗಳನ್ನು ತಿಳಿಪಡಿಸಲು ಶಿಲಾಲೇಖಗಳನ್ನು ಬಳಸಿದರು. ದಾನ ವಿಷಯ, ಇವುಗಳಲ್ಲಿ ಮುಖ್ಯವಾದರೂ ಹೆಚ್ಚಿನ ಅರಿವು ಇಲ್ಲದವರಿಗೆ ಅವು ರಾಜಾಜ್ಞೆಯಂತೆಯೂ ಇದ್ದವು. ರಾಜರು ಬದಲಾದರು. ರಾಜ್ಯಗಳು ಉರುಳಿದವು. ಭಾಷೆಗಳೂ ಬದಲಾದವು. ಹೊಸ ಹೊಸ ತಲೆಮಾರುಗಳು ಉದಯವಾದವು. ಶಾಸನಗಳು ಮಾತ್ರ ಅಚ್ಚಳಿಯದೇ ಉಳಿದುಕೊಂಡವು. ಒಂದು ಹಂತದಲ್ಲಿ ಅವನ್ನು ಓದಿ ಅರ್ಥ ಮಾಡಿಕೊಳ್ಳುವವರ ಅಭಾವವೆನಿಸತೊಡಗಿತು. ಅಂತೆಯೇ ಇವು ಬ್ರಹ್ಮಲಿಪಿ, ದೇವಲಿಪಿ, ಗುಪ್ತಲಿಪಿಗಳೆಂಬ ಅನ್ವರ್ಥಕ ನಾಮಗಳನ್ನು ಪಡೆದವು. ಅವುಗಳ ಬಗೆಗಿನ ಅಜ್ಞಾನ, ಭಯ, ಭೀತಿಗಳಿಂದಲೇ ಅವು ಹೆಚ್ಚಿನ ಸಂಖ್ಯೆಯಲ್ಲಿ ಇಂದಿಗೂ ತಲೆಯೆತ್ತಿಕೊಂಡು ನಿಲ್ಲುವಂತಾಗಿದೆ! ವರ್ಷಕ್ಕೊಮ್ಮೆ ಹಣ್ಣು-ಕಾಯಿ ಇಟ್ಟು ಶಾಸನಗಳಿಗೆ ಪೂಜೆ ಮಾಡುವವರಿದ್ದಾರೆ. ಕುರಿ-ಕೋಣಗಳ ಬಲಿಯೂ ನಡೆಯುತ್ತದೆ. ಅನೇಕ ಶಾಸನಗಳು ಮಣ್ಣಿನಲ್ಲಿ ಹೂತು ಹೋಗಿ ಸಾರ್ವಜನಿಕರ ದೃಷ್ಟಿಯಿಂದ ದೂರವಾಗಿವೆ.

ಬೇಕಾದ ಬಂಡೆಗಳು ಎಲ್ಲೆಡೆ ಇಲ್ಲದ್ದರಿಂದ ಶಾಸನಗಳನ್ನು ಶಿಲಾಫಲಕದ ಮೇಲೆ ಬರೆಯಿಸಿ, ಎಲ್ಲರ ಕಣ್ಣಿಗೆ ಬೀಳುವಂತೆ ನಿಲ್ಲಿಸುವ ಪರಿಪಾಠ ಬೆಳೆಯಿತು. ರಾಜರು, ಊರ ಪ್ರಮುಖರು, ದಾನಿಗಳು ತಮ್ಮ ಜೀವನದ ಮಹತ್ವದ ದಾನ-ಪ್ರಸಂಗಗಳನ್ನು, ಬೇರೆ ಬೇರೆ ತಜ್ಞರೊಡನೆ ಚರ್ಚಿಸಿ ಅವನ್ನು ಬರವಣಿಗೆಗೆ ಇಳಿಸಲು ವಿನಂತಿಸಿಕೊಳ್ಳುತ್ತಿದ್ದರು. ಶಾಸನದಲ್ಲಿ ಸೇರಿಸಬೇಕಾಗಿದ್ದ ಭಾಷೆಯನ್ನು ತಿದ್ದಿ, ಅಕ್ಷರಗಳನ್ನು ತೀಡಿ, ಪರಿಷ್ಕೃತ ಪಾಠ ಸಿದ್ಧವಾದಾಗ ಅದನ್ನು ಲಿಪಿಕಾರನು ಬಳಪದಿಂದ ಶಿಲಾಫಲಕದ ಮೇಲೆ ಬರೆಯುತ್ತಿದ್ದ. ನಂತರ ಶಿಲ್ಪಿಯು, ಎಚ್ಚರಿಕೆಯಿಂದ ಆಯ್ದ ಶಿಲಾಫಲಕದ ಮೇಲೆ ಅಕ್ಷರಗಳನ್ನು ಒಂದೊಂದಾಗಿ ಕೊರೆಯುತ್ತಿದ್ದ. ಶ್ರವಣಬೆಳ್ಗೊಳದ ಚಂದ್ರಗಿರಿಯಲ್ಲಿ ಜೈನಯತಿ ಮಲ್ಲಿಷೇಣನ ಗೌರವಾರ್ಥವಾಗಿ ನಿಲ್ಲಿಸಿದ ಶಾಸನವನ್ನು ಮಲಧಾರಿ ದೇವರ ಶಿಷ್ಯ, ಮದನ ಮಹೇಶ್ವರ ಎಂಬ ಬಿರುದು ಇದ್ದ ಮಲ್ಲಿನಾಥನು ಬರೆದಿದ್ದಾನೆ. ಅದನ್ನು ಶಾಸನವಾಗಿ ರೂಪಿಸಿದವನು "ಬಿರುದು ರೂವಾರಿ

ಮುಖ ತಿಳಕ"ನೆಂದು ಬಿರುದು ಪಡೆದ ಗಂಗಾಚಾರಿ.[೧] ಗದಗ ತಾಲೂಕಿನ ಕುರ್ತಕೋಟಿಯ ಶಾಸನ ರಚಿಸಿದವನು ಹೊಂಬಳದ ನಾಗದೇವ. ಶಿಲೆಗೆ ವರ್ಗಾಯಿಸಿದವನು ಕುಲಕರ್ಣಿ ಮಾಬಲಾರ್ಯ. ಅಕ್ಷರಗಳನ್ನು ಕಂಡರಿಸಿದವನು ಅಯ್ಯಣ.[೨] ಅಯ್ಯಣನು ಮರಗೆಲಸ, ಇಟ್ಟಿಗೆಯ ಕೆಲಸ, ದಂತದ ಕೆಲಸ, ಚಿತ್ರದ ಕೆಲಸಗಳನ್ನೆಲ್ಲ ಶಾಸ್ತ್ರಯುಕ್ತವಾಗಿ ಮಾಡುತ್ತಿದ್ದ. ಆದರೆ ಅವನ ಹೆಸರು ಅಮರವಾದದ್ದು ಈ ಕಲ್ಬರಹದಿಂದಲೇ! ಚಿತ್ರದುರ್ಗದ ಶಾಸನವೊಂದನ್ನು ರೂಪಿಸಿದ ರುದ್ರರೂವಾರಿ ಮಹಾಕಾಳನು ಅಕ್ಷರಗಳಲ್ಲಿ ಆನೆ, ಸಿಂಹ, ಗಿಳಿ ಮುಂತಾದವನ್ನು ಸೇರಿಸುವದರಲ್ಲಿ ಅತ್ಯಂತ ನಿಪುಣನಾಗಿದ್ದನಂತೆ.[೩] ಕೆಲವು ಕವಿ, ಲೇಖಕರ ಹಸ್ತಾಕ್ಷರಗಳನ್ನು ಶಿಲೆಗಳಲ್ಲಿ ಗುರುತಿಸಬಹುದು. ಶ್ರವಣಬೆಳ್ಗೊಳದ ಬಂಡೆಯೊಂದರ ಮೇಲೆ 'ಶ್ರೀ ಕವಿರತ್ನ' ಎಂದು ರನ್ನನು ತನ್ನ ಹಸ್ತಾಕ್ಷರಗಳನ್ನು ಮೂಡಿಸಿದ್ದಾನೆ.

ಸರ್ವಸಾಧಾರಣವಾಗಿ ಶಾಸನದ ಮೇಲೆ ರಾಜಮುದ್ರೆ ಇರುತ್ತಿತ್ತು. ಬರವಣಿಗೆ ಅಜರಾಮರವಾಗಿರಬೇಕೆಂದು ಸಾಂಕೇತಿಕವಾಗಿ ಸೂರ್ಯ-ಚಂದ್ರರ ಚಿತ್ರಗಳನ್ನು ರಚಿಸುತ್ತಿದ್ದರು. ಮಧ್ಯಭಾಗದಲ್ಲಿ ದಾನದ ವಿವರಣೆಯಿರುತ್ತಿತ್ತು. ನಂತರ, ದಾನ-ದತ್ತಿಗಳನ್ನು ಕಾಪಾಡಿಕೊಂಡು ಹೋಗಲು ವಿನಂತಿ ಮತ್ತು ಅದನ್ನು ಅಪಹರಿಸಿದವರಿಗೆ ಬರುವ ಮಹಾಪಾಪದ ಪ್ರಸ್ತಾಪ ಬರುತ್ತಿತ್ತು. "ತಾನೇ ಅಥವಾ ಬೇರೆಯವರೇ ಕೊಟ್ಟ ದತ್ತಿ-ದಾನಗಳನ್ನು ಅಪಹರಿಸುವವನು ನರಕದಲ್ಲಿ ಅರವತ್ತು ಸಾವಿರ ವರ್ಷಗಳ ಕಾಲ, ಕ್ರಿಮಿಯಾಗಿ ಜೀವಿಸುತ್ತಾನೆ" ಎಂದೂ, "ವಿಷವು ವಿಷವೇ ಅಲ್ಲ. ಏಕೆಂದರೆ ಅದನ್ನು ಸೇವಿಸಿದವನು ಮಾತ್ರ ಸಾಯುತ್ತಾನೆ. ದೇವರಿಗೆ ಬಿಟ್ಟ ದತ್ತಿ ಅದಕ್ಕಿಂತ ಅಪಾಯಕಾರಿ. ಏಕೆಂದರೆ ಅದು ಅಪಹರಿಸಿದವನನ್ನೂ ಅವನ ಸಂತತಿಯನ್ನೂ ಹಾಳು ಮಾಡುತ್ತದೆ" ಎಂದೂ ಬೆದರಿಕೆಯ ವಾಕ್ಯಗಳನ್ನು ಸೇರಿಸಲಾಗುತ್ತಿತ್ತು. ಕೆಲವಕ್ಕೆ ಶಾಸನವನ್ನು ಹಾಳು ಮಾಡಿದವನು ತನ್ನ ಪತ್ನಿಯನ್ನು ಕತ್ತೆಗೆ ಒಪ್ಪಿಸಿದ ಪಾಪಕ್ಕೆ ಭಾಜನನಾಗುತ್ತಾನೆ, ಎಂದು ಸೂಚಿಸುವ ಕಿರುಚಿತ್ರ(27)ವನ್ನು ಕೊನೆಯಲ್ಲಿ ಸೇರಿಸುತ್ತಿದ್ದರು.

ಕಾಲಕ್ರಮೇಣ, ಬಂಡೆಗಲ್ಲು, ಶಿಲಾಫಲಕ, ಮೃದುವಾದ ಕಲ್ಲುಗಳ ಮೇಲೆ ಹಾವಸೆ, ಬೂಳಸು ಬೆಳೆದು ಬರವಣಿಗೆಯನ್ನು ಓದುವದು ಕಷ್ಟಕ್ಕೆ ಇಟ್ಟುಕೊಳ್ಳುತ್ತದೆ. ಅಲ್ಲದೇ ಮಳೆ-ಗಾಳಿ ಬಿಸಿಲುಗಳಿಗೆ ಆಹುತಿಯಾಗಿ ಬಿರುಕು ಬಿಡುವದು, ಸವೆದು ಹೋಗುವದು ಸಾಮಾನ್ಯ. ಅಂಥವುಗಳನ್ನು ಓದಿ ಅರ್ಥಮಾಡಿಕೊಳ್ಳಲು ಮಸಿಯಚ್ಚು(ಎಸ್ಟೆಂಪೇಜ್) ತೆಗೆದು ಇಡುವದು ಅನಿವಾರ್ಯವಾಗುತ್ತದೆ. ಬರೆಹದ ಮೇಲೆ ಕಾಗದ ಅಂಟಿಸಿ ಅದರ ಮೇಲೆ ಕರಿಮಸಿಯನ್ನು ಬಳಿಯಲಾಗುತ್ತದೆ. ಇದರಿಂದ ಕರೇ ಹಿನ್ನೆಲೆಯಲ್ಲಿ ಬಿಳಿ ಬಣ್ಣದ ಅಕ್ಷರಗಳು, ಎದ್ದು ಕಾಣುತ್ತವೆ(28). ಇವುಗಳಿಂದ ಛಾಯಾಚಿತ್ರಗಳನ್ನು ಪಡೆಯಲೂ ಸುಲಭವಾಗುತ್ತದೆ.

ಸಮಾಜದಲ್ಲಿ ಅನಕ್ಷರಸ್ಥರ ಸಂಖ್ಯೆಯೇ ಹೆಚ್ಚಾಗಿದ್ದರಿಂದ, ಕೇವಲ ಶಾಸನಗಳನ್ನು ಬರೆಸಿದರೆ ಅದರ ಲಾಭ ಪಡೆಯುವವರು ತೀರ ಕಡಿಮೆ ಜನವೆಂದು, ಶಿಲಾಶಾಸನಗಳಲ್ಲಿ ಉಬ್ಬು ಚಿತ್ರಗಳನ್ನು ಸೇರಿಸಲಾರಂಭಿಸಿದರು. ಇದರಿಂದ ಅರಿಯದವರು, ಓದುಬಲ್ಲವರಿಂದ ಚಿತ್ರದ ವಿವರಗಳನ್ನು ಕೇಳಿ ತಿಳಿದುಕೊಳ್ಳುವಂತಾಯಿತು. ಅಂತೆಯೇ ಶಾಸನಗಳಲ್ಲಿ ಚಿತ್ರಗಳಿಗೆ

ಪ್ರಾಮುಖ್ಯತೆ ಹೆಚ್ಚಾಗಿ, ಬರವಣಿಗೆ ಕಡಿಮೆಯಾದದ್ದೂ ಇದೆ. ಇದನ್ನು ಹೆಚ್ಚಾಗಿ ವೀರಗಲ್ಲು, ನಿಸಿದಿಗಲ್ಲುಗ್ಗಳಲ್ಲಿ ಕಾಣಬಹುದು. ಶಿಲಾಫಲಕವನ್ನೆಲ್ಲ ಉಬ್ಬು ಚಿತ್ರಕ್ಕಾಗಿ ಬಳಸಿ ಕೆಲವೇ ಸಾಲಿನ ಬರವಣಿಗೆಯನ್ನು ಯಾವುದೋ ಮೂಲೆಯಲ್ಲಿ ಸೇರಿಸಲಾರಂಭಿಸಿದರು. ಕಾಲಕ್ರಮೇಣ ಈ ಅತ್ಯಲ್ಪ ಬರವಣಿಗೆಗೂ ತಿಲಾಂಜಲಿ ಕೊಟ್ಟು ಕೇವಲ ಚಿತ್ರಗಳನ್ನು ರೂಪಿಸಲಾರಂಭಿಸಿದ್ದರಿಂದ ಅವುಗಳು ಏನನ್ನು ಪ್ರತಿನಿಧಿಸುತ್ತವೆ? ಎಂಬುದನ್ನು ಊಹಿಸಬೇಕಾದ ಪ್ರಸಂಗ ಬಂದಿದೆ.

ಸಂಸ್ಥೆಗಳಿಗೆ, ವ್ಯಕ್ತಿಗಳಿಗೆ ಕೊಡುವ ದಾನ-ದತ್ತಿ, ಆಜ್ಞೆಗ್ಗಳನ್ನು ಸುಲಭವಾಗಿ ಸ್ಥಳಾಂತರಿಸುವಂತೆ, ಮತ್ತು ಸುರಕ್ಷಿತವಾಗಿ ಇಡಲು ಸಾಧ್ಯವಾಗುವಂತೆ ಬರೆಯುವದು ಅವಶ್ಯವಾಗಿತ್ತು. ಇದಕ್ಕಾಗಿ ಕಬ್ಬಿಣ, ಹಿತ್ತಾಳೆ, ತಾಮ್ರ, ಬೆಳ್ಳಿ, ಬಂಗಾರ, ಚರ್ಮ, ಕಟ್ಟಿಗೆ, ಇಟ್ಟಿಗೆಗಳನ್ನು ಪ್ರಾಯೋಗಿಕವಾಗಿ ಬಳಸಲು ಯತ್ನಿಸಿದರೂ ಖರ್ಚು ಮತ್ತು ತಾಳಿಕೆಯ ದೃಷ್ಟಿಯಿಂದ, ತಾಮ್ರವೇ ಗೆದ್ದಿತು. ತಾಳೆಗರಿಗಳನ್ನು ಹೋಲುವ ತಾಮ್ರಪಟಗಳನ್ನು ಎಡಗಡೆಗೆ ಪೋಣಿಸಲು ಬರುವಂತೆ ರಂಧ್ರ ಮಾಡಿ ಅವುಗಳ ಮೇಲೆ ಪರಿಣತರಿಂದ ಶಾಸನ ಬರೆಯಿಸಲಾರಂಭಿಸಿದರು. ಕೆಲ ತಾಮ್ರಶಾಸನಗಳು ಚಚ್ಚೌಕಾಕಾರ ಇಲ್ಲವೆ ಕಾಟಕೋನಾಕಾರ ಗಳಲ್ಲಿವೆ. ಹಲವು ಶಾಸನಗಳನ್ನು ಒಂದೇ ಬದಿಗೆ ಬರೆಯಲಾಗಿದೆ. ಕೆಲವರು ಎರಡೂ ಬದಿಗಳನ್ನು ಬಳಸಿದ್ದಾರೆ. ಶಾಸನ ಸಿದ್ಧವಾದ ನಂತರ ಬರೆಯಿಸಿದವರು ಇನ್ನೊಮ್ಮೆ ಓದಿಸಿ, ಎಲ್ಲವೂ ಸರಿಯಾಗಿದೆ ಎಂದು ಖಚಿತಪಡಿಸಿಕೊಂಡು, ನಂತರ ಅವುಗಳನ್ನು ಕ್ರಮಾಂಕದಂತೆ ಉಕ್ಕಿನ ಬಳೆಗೆ ಪೋಣಿಸಿ, ರಾಜಮುದ್ರೆ ಒತ್ತಿಸುತ್ತಿದ್ದರು. ಕೊರೆದ ಅಕ್ಷರಗಳ ಮೇಲೆ, ಇದ್ದಿಲು ಪುಡಿ ತಿಕ್ಕಿದರೆ, ಯಾವ ಅಡೆ-ತಡೆಗಳಿಲ್ಲದೇ ಸುಲಭವಾಗಿ ಓದಬಹುದಾಗಿತ್ತು. ಆದರೆ ಟ್ರಂಕ್, ಪೆಟ್ಟಿಗೆಗಳಲ್ಲಿ ಇಟ್ಟ ಅನೇಕ ತಾಮ್ರಶಾಸನಗಳು ರಾಸಾಯನಿಕ ಕ್ರಿಯೆಯಿಂದಾಗಿ ಹಸಿರು, ನೀಲಿವರ್ಣಕ್ಕೆ ಪರಿವರ್ತನೆಗೊಂಡವು. ಅನೇಕರು ರಾಜಮೊಹರುಗಳನ್ನು ಒಡೆದು, ತಮಗೆ ಅನುಕೂಲವಾದ ತಾಮ್ರ ಬರೆಹಗಳನ್ನು ಸೇರಿಸಿದರು. ನಕಲಿ ಶಾಸನಗಳು, ಅಲ್ಲಲ್ಲಿ ಕಾಣಿಸಿಕೊಂಡವು. ತಾಮ್ರದ ಬೆಲೆ ಗಗನಕ್ಕೇರಿದಾಗ ಅವುಗಳನ್ನು ಕರಗಿಸಿದ ಕದೀಮರೂ ಇರದಿರಲಿಲ್ಲ. ಅಂತೆಯೇ ತಾಮ್ರಶಾಸನಗಳು, ಶಿಕ್ಷಣ ಪ್ರಸಾರದ ಮಾಧ್ಯಮವಾಗಿ ಅಷ್ಟೊಂದು ಯಶಸ್ವಿಯಾಗಲಿಲ್ಲ.

ಕಂಚಿನ, ಪಂಚಲೋಹದ ವಿಗ್ರಹಗಳ ಪೀಠಗಳ ಮೇಲೆ, ಕೆಲವೊಮ್ಮೆ ಬೆನ್ನಭಾಗ ಗಳಲ್ಲಿಯೂ ಶಾಸನಗಳನ್ನು ಬರೆಯಲಾಗಿದೆ. ಈ ಪದ್ಧತಿ ಜೈನ ವಿಗ್ರಹಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಕೊಡಗಿನ ಒಂದು ಬೆಳ್ಳಿಯ ಆನೆಯ ವಿಗ್ರಹದ ಥಡಿಯ ಮೇಲೆ ಶಾಸನ ಕೊರೆಯಲಾಗಿದೆ. ಕೆಲವೊಮ್ಮೆ ಬೆಳ್ಳಿ ಬಂಗಾರದ ಪಾತ್ರೆಗಳ ಮೇಲೆಯೂ ಶಾಸನಗಳು ಕಂಡುಬರುತ್ತವೆ. ಕೆಲವೊಮ್ಮೆ ಅರಸು ವಂಶದವರು ಧರಿಸುವ ಆಭರಣಗಳ ಮೇಲೆಯೂ ವಿವಿಧ ಸಂದೇಶಗಳನ್ನು ಕೊರೆಯಲಾಗುತ್ತದೆ. ಇಂಥ ಬರವಣಿಗೆ, ಅವುಗಳ ಒಡೆಯನ ಹೆಸರಲ್ಲಿರುತ್ತದೆ ಎಂಬುದು ಮುಖ್ಯ.

ಎಲ್ಲರಿಂದಲೂ ಶಿಲಾಶಾಸನ, ತಾಮ್ರಶಾಸನ ಬರೆಯಿಸುವದು ಸಾಧ್ಯವಿರಲಿಲ್ಲ, ಅದು ಬೇಕೂ ಇರಲಿಲ್ಲ. ಅಂತೆಯೇ ತಾತ್ಕಾಲಿಕ ಬಳಕೆಗಾಗಿ ಕಡತಗಳು ಅಸ್ತಿತ್ವದಲ್ಲಿ ಬಂದವು.

ಕ್ಯಾನವಾಸದಂತಹ ದಪ್ಪ ಒರಟಾದ ಬಟ್ಟೆಗೆ, ಹುಣಿಸೆ ಬೀಜ, ಅಕ್ಕಿ, ಗೋದಿಗಳ ಗಂಜಿಯಲ್ಲಿ ದೀಪದ ಮಸಿ ಇಲ್ಲವೇ ಇದ್ದಿಲುಪುಡಿ ಬೆರೆಸಿ, ಉಂಕಿ ಮಾಡುತ್ತಿದ್ದರು. ಅದನ್ನು ಬಿಸಿಲಲ್ಲಿ ಚೆನ್ನಾಗಿ ಒಣಗಿಸಿ, ಗಾರೆಗಲ್ಲಿನಿಂದ ಉಜ್ಜಿ, ನುಣುಪು ಮಾಡುತ್ತಿದ್ದರು. ಈ ಬಟ್ಟೆಯನ್ನು ಚಿಕ್ಕ ಹಗುರಾದ ಹಲಗೆಗೆ ಅಂಟಿಸಿ ಬಳಪದಿಂದ ಬರೆಯುತ್ತಿದ್ದರು. ಅಂತೆಯೇ ಅವು ಪಾಟಿ, ಕಡ್ಡಿಗಳನ್ನು ಬಹಳವಾಗಿ ಹೋಲುತ್ತಿದ್ದವು. ಆ ಕಾಲದ ವಿದ್ಯಾರ್ಥಿಗಳು ಹೇಗೆ ಶಾಲೆಗೆ(ಮಠಕ್ಕೆ) ಹೋಗುತ್ತಿದ್ದರು, ಎಂಬುದು ಜ್ಞಾನಚಂದ್ರ ಚರಿತೆಯಲ್ಲಿ ಚಿತ್ರಿತವಾಗಿದೆ. ಕಡತ, ಹಲಗೆ, ಬಳಪ, ವೋಲೆ, ಕಂಟವ ಹಿಡಿದು ಸಡಗರದಿಂದ ಮಕ್ಕಳವೃಂದ ಮಠಕ್ಕೆ ಹೋಗುತ್ತಿತ್ತು.[೪] ಕಡತಗಳನ್ನು ವ್ಯಾಪಾರಿಗಳು, ಅರಮನೆಯವರು ಲೆಕ್ಕಪತ್ರಗಳನ್ನು ಬರೆದಿಡುವದಕ್ಕೂ ಬಳಸುತ್ತಿದ್ದರು. ಅಲ್ಲದೇ ಕವಿ, ಲೇಖಕರು ತಮ್ಮ ಕಚ್ಚಾ ಪ್ರತಿಗಳನ್ನು ಕಡತದ ಮೇಲೆಯೇ ಬರೆಯುತ್ತಿದ್ದರು.[೫] ಇಂಥ ಕಡತಗಳು ಉದ್ದವಾಗಿರುತ್ತಿದ್ದುದರಿಂದ ಅವನ್ನು ಹಲಗೆಗೆ ಅಂಟಿಸುವದರ ಬದಲಾಗಿ ಬೀಸಣಿಗೆಯಂತೆ ಮಡಸುವಂತೆ ಸಿದ್ಧ ಮಾಡಲಾಗುತ್ತಿತ್ತು. ಇದರ ಮೇಲೆ ಇದ್ದ ಬರವಣಿಗೆ ತಾತ್ಪೂರ್ತಿಕವಾಗಿದ್ದರಿಂದ, ಅವನ್ನು ಕಾದಿಡುವ ಯತ್ನವನ್ನು ಯಾರೂ ಮಾಡದ್ದರಿಂದ, ಹೆಚ್ಚಿನವು ನಶಿಸಿ ಹೋಗಿವೆ. ಆಗೊಮ್ಮೆ ಈಗೊಮ್ಮೆ ಧಾರ್ಮಿಕ ಮಠಗಳಲ್ಲಿ ಇಂಥ ಕಡತಗಳು ಕಂಡುಬರುತ್ತವೆ. ಅವುಗಳಲ್ಲಿ ಕೆಲವಕ್ಕೆ ಹೊದಿಕೆಗಳನ್ನು ಜೋಡಿಸಿ ಚಿತ್ರಗಳನ್ನು ಬಿಡಿಸಲಾಗಿದೆ.

ಹದಿಮೂರನೆಯ ಶತಕದಲ್ಲಿ ಭಾರತಕ್ಕೆ ಬಂದ ಕಾಗದವು, ಹದಿನೇಳನೆ ಶತಮಾನದಲ್ಲಿ ಬರೆಹದ ಸಾಧನವಾಗಿ ಕರ್ನಾಟಕದಲ್ಲಿ ಲಭ್ಯವಿದ್ದ ವರ್ಗದ ಶಿಕ್ಷಣ ಕ್ಷೇತ್ರದಲ್ಲಿ ಮಹತ್ವದ ಬದಲಾವಣೆ ತಂದಿತು. ಆಗಿನ್ನೂ ಕಾಗದವನ್ನು ಕೈಯಿಂದಲೇ ತಯಾರಿಸಿ 'ಕೋರಿ ಕಾಗದ'ವೆಂದು ಪೂರೈಸುತ್ತಿದ್ದರು. ಮೊದಮೊದಲು ತಾಳೆಗರಿಗಳ ಆಕಾರದಲ್ಲಿಯೇ ಕತ್ತರಿಸಿ ಬರೆಯಲು ಬಳಸುತ್ತಿದ್ದರು. ಇವುಗಳ ಹೊರಕವಚಗಳ ಮೇಲೂ ತಾಳೆಗರಿಗಳ ಗ್ರಂಥಗಳ ಮೇಲೆ ಇರುವಂಥ ಹೂಗಳ ಚಿತ್ರ ಮತ್ತು ಕೃತಿಯ ಹೆಸರು ಬರೆಯುವದೂ ರೂಢಿಯಲ್ಲಿತ್ತು(29). ಹರಡೆಕಾಯಿ, ಕೇರಬೀಜ, ಕಡಲ ಸೇಪಿಯಾ ಪ್ರಾಣಿಗಳಿಂದ ಕರಿಮಸಿ ಸಂಗ್ರಹಿಸಿ, ಗರಿ, ಬಿದುರು ಇಲ್ಲವೇ ತಾಳೆ ಟೊಂಗೆಯಿಂದ ಲೆಕ್ಕಣಿಕೆಯನ್ನು ತಯಾರಿಸಿ ಬರೆಯುತ್ತಿದ್ದರು. ಸಮವಾದ ಅಳತೆಯ ಹುಣಿಸೆಮರದ ಕಡ್ಡಿಗಳನ್ನು ಕಬ್ಬಿಣದ ಕವಚಕ್ಕೆ ಸೇರಿಸಿ, ಹಿತಮಿತವಾಗಿ ಸುಟ್ಟು ಕರೇ ಖಡುವನ್ನು ತಯಾರಿಸಿ ಅವನ್ನು ಚಿತ್ರ ಬಿಡಿಸಲು ಬಳಸುತ್ತಿದ್ದರು.

ಕೋರಿ ಕಾಗದದ ಗ್ರಂಥಗಳನ್ನು ಬಿಲ್ವ, ತೇಗು, ಹೊನ್ನೆಗಳಂತಹ ಮರದ ಹೊದಿಕೆಗಳಲ್ಲಿ ಇಟ್ಟು ರೇಶಿಮೆ ದಾರದಿಂದ ಕಟ್ಟಿಡುತ್ತಿದ್ದರು. ನಂತರ ಕೆಂಪು ಇಲ್ಲವೇ ಹಳದಿ ರೇಶ್ಮೆ ಬಟ್ಟೆಗಳಿಂದ ಸುತ್ತಿ ಇಡುತ್ತಿದ್ದರು. ಹತ್ತಾರು ಹಸ್ತಪ್ರತಿಗಳನ್ನು ಹಳದಿ ಬಟ್ಟೆಯ ಚೀಲಕ್ಕೆ ಸೇರಿಸಿ ಭದ್ರವಾಗಿ ಇಡುತ್ತಿದ್ದರು. ಇಂತ ಕಂತೆಗಳಿಗೆ 'ಪೊತ್ತಿಗೆ' (ಪೋತಿ)ಗಳೆಂದು ಕರೆಯುತ್ತಿದ್ದರು. ಹಲವಾರು ದೇವಾಲಯ, ಮಠಗಳಲ್ಲಿ ಇಂಥ ಪೊತ್ತಿಗೆಗಳನ್ನು ಪೆಟ್ಟಿಗೆ, ಕಪಾಟುಗಳಲ್ಲಿ ಶೇಖರಿಸುತ್ತಿದ್ದರು. ಬರಬರುತ್ತ ಕಾಗದದ ಹಸ್ತಪ್ರತಿಗಳ ಉದ್ದ ಕಡಿಮೆಯಾಗಿ, ಅಗಲದಲ್ಲಿ ಹಿಗ್ಗಹತ್ತಿದವು. ಇದರಿಂದ ಚಿತ್ರಕಾರರಿಗೂ ಹೆಚ್ಚು ಅನುಕೂಲವಾಯಿತು. ಮುಖಪುಟಗಳ ಮೇಲೆ ಅಂದವಾದ ಕುಸುರಿನ ಕೆಲಸ ಮಾಡಿ, ಗ್ರಂಥದ ಹೆಸರನ್ನು ಸ್ಫುಟವಾಗಿ(30) ಬರೆಯುವದರಿಂದ ಕೃತಿಗಳ

ಆಯ್ಕೆ ಸುಲಭವಾಗುತ್ತಿತ್ತು. ಹಸ್ತಪ್ರತಿಯ ಪತ್ಯದಲ್ಲಿಯೂ ಹಲವಾರು ಚಿತ್ರಗಳು ಸೇರಿಕೊಳ್ಳಲಾರಂಭಿಸಿದವು. ಹದಿನೆಂಟನೆಯ ಶತಕದ 'ವೃಷಭೇಂದ್ರ ವಿಜಯ'ದ ಹಸ್ತಪ್ರತಿಯಲ್ಲಿ ಹಡಪದ ಅಪ್ಪಣ್ಣ, ಸಿದ್ಧರಾಮ, ಅಕ್ಕ ನಾಗಮ್ಮ ಮುಂತಾದವರ ಭಾವಚಿತ್ರಗಳನ್ನು ಸೇರಿಸಲಾಗಿದೆ. ಕೆಲವು ಜೈನ ಹಸ್ತಪ್ರತಿಗಳಲ್ಲಿ ಕೇವಲ ಗೀರು, ವರ್ತುಲ, ಅರೆವರ್ತುಲಗಳಿಂದ ನಕ್ಷೆಗಳನ್ನು (31) ಮೂಡಿಸಲಾಗಿದೆ. ಇಂಥ ನಕ್ಷೆಗಳು ಅಧ್ಯಾಯಗಳ ನಡುವೆ ಬರುವದು ವಾಡಿಕೆ. ಕೆಲವು ಜನಪ್ರಿಯ ಕೃತಿಗಳನ್ನು ತಾಳೆಗರಿಯಿಂದ ಕಾಗದದ ಮೇಲೆ ಪ್ರತಿ ಮಾಡಲಾಯಿತು. ಇಂಥವುಗಳಲ್ಲಿ ಕೆಲವು ಕಲಾಕಾರರು ಬಟ್ಟೆಗೆ ಕಾಗದ ಅಂಟಿಸಿ, ಚಿತ್ರಗಳ ಸುರುಳಿಯನ್ನೇ ತಯಾರಿಸುತ್ತಿದ್ದರು.

ಕಾಗದದ ಉತ್ಪಾದನೆ ಹೆಚ್ಚಿದಂತೆ ಲಿಪಿಕಾರರಿಗೆ ಬೇಡಿಕೆ ಕಡಿಮೆಯಾಗಿ ಸುಲಭ ಬೆಲೆಯಲ್ಲಿ ಪ್ರತಿ ಮಾಡುವ ವಿಧಾನದ ಹುಡುಕಾಟ ಪ್ರಾರಂಭವಾಯಿತು. ಇದರ ಪರಿಣಾಮವಾಗಿ ಕಲ್ಲಚ್ಚಿನ ಮುದ್ರಣ ಪ್ರಾರಂಭವಾಯಿತು. ಮೇಣ(ಗ್ರೀಸ್) ಮತ್ತು ನೀರು ಮಿಶ್ರಣಗೊಳ್ಳದೇ ಬೇರೆ ಬೇರೆಯಾಗಿಯೇ ಇರುತ್ತವೆ. ಈ ತತ್ವವನ್ನು ಬಳಸಿಕೊಂಡು, ಮುದ್ರಿಸಬೇಕೆಂದಿರುವ ವಿಷಯ ಮತ್ತು ಚಿತ್ರಗಳನ್ನು ಮೇಣದಿಂದ ಕಲ್ಲಿನ ಮೇಲೆ ಬರೆದುಕೊಳ್ಳುತ್ತಿದ್ದರು. ಅದರ ಮೇಲೆ ಮಸಿ ಹರಡಿದಾಗ ಮೇಣವಿದ್ದ ಭಾಗ ಅದನ್ನು ಹೀರಿಕೊಳ್ಳುತ್ತಿತ್ತು. ಅನಂತರ ಅದರ ಮೇಲೆ ಮುದ್ರಣದ ಕಾಗದ ಹರವಿ ಒತ್ತಿದಾಗ, ಮಸಿ ಅದನ್ನು ಅಂಟಿಕೊಂಡು ಮುದ್ರಿತ ರೂಪ ತಯಾರಾಗುತ್ತಿತ್ತು. ಈ ಹಾಳೆಗಳನ್ನು ಒಣಗಿಸಿ ಪುಸ್ತಕ ರೂಪದಲ್ಲಿ ಜೋಡಿಸಲಾಗುತ್ತಿತ್ತು. 'ಕಿಷ್ಕಿಂಧಾಕಾಂಡ', 'ಸೌಗಂಧಿಕಾ ಪರಿಣಯ' ಇಂಥ ಕೃತಿಗಳು. ಇದರಂತೆ ಇಟ್ಟಂಗಿ, ಅಚ್ಚಿನ ಮುದ್ರಣವೂ ಕೆಲಕಾಲ ಬಳಕೆಯಲ್ಲಿ ಇತ್ತು. ಆದರೆ ಈ ರೀತಿ ಮುದ್ರಿತ ಪುಸ್ತಕಗಳಲ್ಲಿ, ಅಲ್ಲಲ್ಲಿ ಮಸಿಯ ಗೊಣ್ಣೆಗಳು ಬಿದ್ದು, ಕೆಲಕಡೆ ಮಸಿಯೇ ಮೂಡದೇ ಈ ಕಲೆ ಹಿಂದೆ ಬಿತ್ತು. ಹೊಸ ಬಗೆಯ ಮುದ್ರಣ ಕಲೆಗೆ ದಾರಿ ಮಾಡಿಕೊಟ್ಟಿತು. ಕಲ್ಲಚ್ಚಿನ ಗ್ರಂಥಗಳು ಕೆಲವೇ ಸಂಖ್ಯೆಯಲ್ಲಿ ಲಭ್ಯವಿದ್ದುದರಿಂದ ಅಂದಿನ ಶಿಕ್ಷಣ ಕ್ರಮದಲ್ಲಿ ಅವು ಎಷ್ಟು ಸಹಾಯಕಾರಿಯಾಗಿದ್ದವು, ಎಂದು ನಿರ್ಧರಿಸುವದು ಸುಲಭ ಸಾಧ್ಯವಲ್ಲ.

## ಸಂದರ್ಭ ಸೂಚಿ

೧. ಎ.ಕ. II ಶ್ರವಣಬೆಳ್ಗೊಳ ೭೭(೬೭) ಪು.೪೯.

೨. ಎಸ್.ಐ.ಐ. XI (ii) ಕುರ್ತಕೋಟಿ ನಂ.೧೨೭.

೩. ಎ.ಕ. XI ಚಿತ್ರದುರ್ಗ ನಂ.೪೭.

೪. ಜ್ಞಾ.ಚ. ಸಂಧಿ ೨, ಪದ್ಯ ೪೯.

೫. ಕಾವ್ಯ ಮೀಮಾಂಸಾ, ಪು.೫೫.
ಕನಕದಾಸರು, ಬ್ರಹ್ಮನು ತನ್ನ ಹಣೆಯಲ್ಲಿ ಬರೆಹವನ್ನು ಬರೆಯಲಿಲ್ಲವಾದ್ದರಿಂದ, ಮೋಹನ ತರಂಗಿಣಿ ಕಾವ್ಯವು, ತಾನು "ಪದವಿಟ್ಟು ಕಡಿತದೊಳ್ ಬರೆದು ಮಾಡಿದ ಕೃತಿಯಲ್ಲ" ಎಂದು ಉದ್ಗರಿಸಿ, ತಾನು ಸಹಜ ಕವಿ ಎಂಬುದನ್ನು ನಮ್ರತೆಯಿಂದ ಪೀಠಿಕೆಯಲ್ಲಿ ಹೇಳಿಕೊಂಡಿದ್ದಾರೆ. ಮೋಹನ ತರಂಗಿಣಿ ಪೀಠಿಕಾಸಂಧಿ, ಪದ್ಯ ೨೧, ಪು.೫.

# ೫. ಘಟಿಕಾಸ್ಥಾನಗಳು

ಪ್ರಾಚೀನ ಮತ್ತು ಮಧ್ಯಯುಗಗಳಲ್ಲಿ ಉಚ್ಚ ಶಿಕ್ಷಣಕ್ಕಾಗಿಯೇ ಮೀಸಲಾದ ವಿದ್ಯಾಲಯಗಳನ್ನು 'ಘಳಿಗೆ' ಅಥವಾ 'ಘಟಿಕಾಸ್ಥಾನ'ಗಳೆಂದು ಗುರುತಿಸಲಾಗುತ್ತಿತ್ತು. ಈ ಶಬ್ದವು ಸಂಸ್ಕೃತ 'ಘಟ್' (ಘಟಿಸು, ಸಂಭವಿಸು) ಧಾತುವಿನಿಂದ ಉತ್ಪನ್ನವಾಗಿದೆ. ವಾತ್ಸ್ಯಾಯನನು 'ಘಟಾ'ವನ್ನು ಧರ್ಮಸಭೆ ಎಂದು ಗುರುತಿಸಿದರೆ, ಜರ್ಮನ್ ವಿದ್ವಾಂಸ ಕೀಲ್‌ಹಾರ್ನ್‌ರು, ಅದನ್ನು ಬ್ರಾಹ್ಮಣರ ಸಭೆ ಎಂದು ಅರ್ಥಮಾಡಿ ಬ್ರಹ್ಮಪುರಿಗೆ ಅನ್ವಯಿಸಿದರು.[೧] ಇಂಗ್ಲಿಷ್ ಪ್ರಾಧ್ಯಾಪಕ ಬಾರ್ನೆಟ್ ಅವರು ಅದೊಂದು ವಿದ್ವಾಂಸರ ಸಭೆಯೆಂದರು.[೨] ಕೆ.ಬಿ. ಪಾಠಕರು ಅದೊಂದು ಧಾರ್ಮಿಕ ಸಂಘಟನೆ ಇರಬಹುದೆಂದರು.[೩] ಸಿ. ಮೀನಾಕ್ಷಿ ಮಾತ್ರ ಘಟಿಕಾಸ್ಥಾನವು ವಿದ್ಯಾರ್ಥಿಗಳೊಂದಿಗೆ ವಿದ್ವಾಂಸರೂ ಜ್ಞಾನಾರ್ಜನೆಗೆ ಹೋಗುತ್ತಿದ್ದ ಉಚ್ಚ ಶಿಕ್ಷಣ ಸಂಸ್ಥೆಯಾಗಿತ್ತೆಂದು ದೃಢಪಡಿಸಿದರು.[೪] ತಮಿಳುನಾಡಿನಲ್ಲಿ ಕ್ರಿ.ಶ. ಮೊದಲ ಶತಕಗಳಲ್ಲಿ ಇದ್ದ ಘಟಿಕಾಸ್ಥಾನದಂತಹವು ನಂತರ ಕರ್ನಾಟಕದಲ್ಲೂ ಕಂಡುಬಂದವು.

ಈ ಸಂಸ್ಥೆಯ ಪ್ರಥಮ ಉಲ್ಲೇಖ, ಕದಂಬ ಕಾಕುತ್ಸ್ಥವರ್ಮನ ಕ್ರಿ.ಶ. ನಾಲ್ಕನೇ ಶತಕದ ತಾಳಗುಂದ ಶಾಸನದಲ್ಲಿ ಸಿಗುತ್ತದೆ.[೫] ಕದಂಬ ಕುಲದ ಸ್ಥಾಪಕನಾದ ಬನವಾಸಿಯ ಮಯೂರಶರ್ಮನು[೬] ತನ್ನ ಗುರು ವೀರಶರ್ಮನೊಂದಿಗೆ 'ನಿಖಿಲಂ ಪ್ರವಚನಂ' ಅಭ್ಯಸಿಸಲು ಕಾಂಚಿಯ ಘಟಿಕೆಗೆ ತೆರಳುತ್ತಾನೆ. ಪ್ರವಚನವೆಂದರೆ ವೇದಗಳಿಗೆ ಸಂಬಂಧಿಸಿದ ಸಕಲ ಸೂತ್ರಗಳೆಂದು ಅರ್ಥೈಸಲಾಗಿದೆ. ವಾರಣಾಸಿಯಂತೆ ಕಾಂಚಿಯೂ ಕ್ರಿಸ್ತಶಕ ಪೂರ್ವದಿಂದಲೇ ಬೌದ್ಧ, ಜೈನ, ವೈದಿಕ ವಿದ್ಯಾಕೇಂದ್ರಗಳಿಗೆ ಹೆಸರುವಾಸಿಯಾಗಿತ್ತು. ಅಂತೆಯೇ ಅಂದು ಕನ್ನಡನಾಡಿನಲ್ಲಿ ಲಭ್ಯವಿದ್ದ ವಿದ್ಯಾಭ್ಯಾಸವನ್ನೆಲ್ಲ ಮುಗಿಸಿ ತರುಣರು ಹೆಚ್ಚಿನ ಪರಿಣತಿ ಸಾಧಿಸಲು, ಕಾಂಚಿಗೆ ಹೋಗುತ್ತಿದ್ದಿರಬೇಕು. ಅಲ್ಲಿಯ ವಿದ್ವತ್ ಸಭೆಗಳಲ್ಲಿ ವಾದಮಂಡನೆಯಲ್ಲಿ ಪಾಲುಗೊಂಡು ಜಯಶೀಲರಾದಾಗಲೇ ಅವರಿಗೆ ರಾಷ್ಟ್ರೀಯ ಮಟ್ಟದ ವಿದ್ವಾಂಸರ ಖ್ಯಾತಿ ಪ್ರಾಪ್ತವಾಗುತ್ತಿತ್ತು. ಮಯೂರಶರ್ಮನ ಉದ್ದೇಶ ಇದಾಗಿರಬೇಕು. ಹತ್ತನೆಯ ಶತಮಾನಕ್ಕೂ ಮೊದಲು ಕರ್ನಾಟಕದಲ್ಲಿ ಘಟಿಕಾಸ್ಥಾನಗಳಿದ್ದ ದಾಖಲೆ ಸಿಕ್ಕಿಲ್ಲ. ಆದರೆ ಅದಕ್ಕೂ ಪೂರ್ವದಲ್ಲಿ ಅಸ್ತಿತ್ವದಲ್ಲಿರುವ ಸಾಧ್ಯತೆಗಳಿವೆ.

ಕರ್ನಾಟಕದಲ್ಲಿ ದೊರೆತ ಯಾವತ್ತೂ ಘಟಿಕಾಸ್ಥಾನಗಳು ಚಾಲುಕ್ಯರ ಕಾಲದವೇ ಆಗಿವೆ. ಅವುಗಳಲ್ಲಿ ಧಾರವಾಡ ಜಿಲ್ಲೆಯ ಕಾಡಿಯೂರು ಕಳಸ (ಕ್ರಿ.ಶ. ೯೨೯) ಬಳ್ಳಾರಿ ಜಿಲ್ಲೆಯ

ಮೋರಿಗೆರೆ(೧೦೪೫)[೭] ಗುಲಬರ್ಗಾ ಜಿಲ್ಲೆಯ ನಾಗಾಯಿ(೧೦೫೮)[೮] ಧಾರವಾಡ ಜಿಲ್ಲೆಯ ಸೂಡಿ(೧೦೬೦)[೯] ಹೊಟ್ಟೂರು(೧೦೬೪)[೧೦] ಮತ್ತು ತುಂಬಳ(೧೦೬೮)[೧೧], ಬೆಳಗಾಂವ ಜಿಲ್ಲೆಯ ರಾಯಬಾಗ[೧೨] ಪುಲಿಗೆರೆ(೧೧೨೯)[೧೩] ಮಹಾರಾಷ್ಟ್ರದ ನಾಂದೇಡ ಜಿಲ್ಲೆಯ ಏರಿಗೆ[೧೪] ಮತ್ತು ತುಮಕೂರು ಜಿಲ್ಲೆಯ ಹೆಂಜೇರು (೧೧೬೨)[೧೫] ಘಟಿಕಾಸ್ಥಾನಗಳಾಗಿದ್ದವೆಂದು ಶಾಸನಗಳು ಸಾರುತ್ತವೆ. ಬನವಾಸಿಯ ಮಧುಕೇಶ್ವರ ದೇವಸ್ಥಾನದಲ್ಲಿ ಘಟಿಕೆಯಿತ್ತು.[೧೬] ಪೊಟ್ಟಿಯೂರು (ಇಂದಿನ ಹೊಟ್ಟೂರು) ಅಖಿಳ ಘಟಿಕಾಸ್ಥಾನವೆಂದೂ, ರಾಯಬಾಗ, ಹೆಂಜೇರುಗಳನ್ನು ಮಹಾ ಘಟಿಕಾಸ್ಥಾನಗಳೆಂದೂ, ಇನ್ನಿತರವುಗಳನ್ನು 'ಘಟಿಕಾಸ್ಥಾನ' ಇಲ್ಲವೆ 'ಘಳಿಗೆ' ಎಂದೂ ಶಾಸನಗಳಲ್ಲಿ ಗುರುತಿಸಲಾಗಿದೆ. ಇವುಗಳ ಬಗ್ಗೆ ನಾಗಾಯಿಯ ಮೂರು ಶಾಸನಗಳು ಮಾತ್ರ ಹೆಚ್ಚಿನ ಮಾಹಿತಿ ಪೂರೈಸುತ್ತವೆ.

ಇಂಗ್ಲೆಂಡ, ಅಮೆರಿಕಗಳಲ್ಲಿ ಉಚ್ಚಶಿಕ್ಷಣ ಕೇಂದ್ರಗಳು 'ಸ್ಕೂಲ್' ಎನಿಸಿಕೊಳ್ಳುವಂತೆ ಕರ್ನಾಟಕದಲ್ಲೂ ಶತಮಾನಗಳ ಹಿಂದೆಯೇ ಪ್ರಾಥಮಿಕ, ಉಚ್ಚವೆಂದು ಭೇದಮಾಡದೇ ವಿದ್ಯಾಸಂಸ್ಥೆಗಳನ್ನು 'ಶಾಲಾ' ಅಥವಾ 'ಶಾಲೆ'ಯೆಂದು ಕರೆಯಲಾಗುತ್ತಿತ್ತು. ಹಲವಾರು ಶಿಕ್ಷಣ ಕೇಂದ್ರಗಳಲ್ಲಿ ಎಲ್ಲ ಬಗೆಯ ಶಿಕ್ಷಣ ಲಭ್ಯವಿದ್ದದ್ದೇ ಇದಕ್ಕೆ ಮುಖ್ಯ ಕಾರಣವಿದ್ದಿರಬೇಕು. ಅಂತೆಯೇ ಘಟಿಕಾಸ್ಥಾನಗಳಿಗೆ ಶಾಸನವೊಂದರಲ್ಲಿ 'ಶಾಲೆ' ಎಂದು ಪರಿಗಣಿಸಿದರೂ ಅವು ಉಚ್ಚಶಿಕ್ಷಣದ ಕೇಂದ್ರವಾಗಿದ್ದವೆಂದು ಅವುಗಳ ಆಡಳಿತ, ಅಲ್ಲಿ ನೀಡುತ್ತಿದ್ದ ಸೌಕರ್ಯಗಳು, ಶಿಕ್ಷಕವರ್ಗ, ವಿದ್ಯಾರ್ಥಿಗಳ ಸಂಖ್ಯೆ ಪರಿಗಣಿಸಿದಾಗ ಅರಿವಾಗುವದು. ಅಳರಸರು, ಸಾಮಂತರು, ಮಾಂಡಲಿಕರು ಘಟಿಕಾಸ್ಥಾನಗಳನ್ನು ಸ್ಥಾಪಿಸಿ ಅವುಗಳ ನಿರ್ವಹಣೆಗೆ ದತ್ತಿ ಕೊಡುತ್ತಿದ್ದರು. ಆದರೆ ಪ್ರತಿದಿನದ ಆಗುಹೋಗುಗಳಲ್ಲಿ ಎಂದೂ ಹಸ್ತಕ್ಷೇಪ ಮಾಡುತ್ತಿರಲಿಲ್ಲ. ಸುಸೂತ್ರ ಆಡಳಿತಕ್ಕಾಗಿ ಮಹಾಜನರ ಮಂಡಳಿ ನೇಮಕಗೊಂಡು ಅವರ ಮೇಲ್ವಿಚಾರಣೆಯಲ್ಲಿ ಈ ಸಂಸ್ಥೆಗಳು ನಡೆಯುತ್ತಿದ್ದವು. ದೇವಾಲಯಗಳ ಪ್ರಶಸ್ತ ಪರಿಸರದಲ್ಲಿ ಭವ್ಯವಾದ ಕಟ್ಟಡಗಳಲ್ಲಿ ಉಚ್ಚ ವಿದ್ಯಾಭ್ಯಾಸಕ್ಕೆ ಸಕಲ ಅನುಕೂಲತೆಗಳನ್ನು ಮಾಡಿಕೊಡುತ್ತಿದ್ದರು. ಅಧ್ಯಯನಕ್ಕೆ ಹಲವಾರು ಗ್ರಂಥಗಳಿದ್ದ ವಾಚನಾಲಯಗಳು ಸರಸ್ವತಿ ಭಂಡಾರಿಗರ ಮೇಲ್ವಿಚಾರಣೆಯಲ್ಲಿ ಕೆಲಸ ಮಾಡುತ್ತಿದ್ದವು. ವೇದ, ಶಾಸ್ತ್ರ, ವ್ಯಾಕರಣಗಳಲ್ಲಿ ಪರಿಣತರಾದವರು, ಪ್ರಾಧ್ಯಾಪಕರೆಂದು ನೇಮಕಗೊಳ್ಳುತ್ತಿದ್ದರು. ಅವರು ಲಭ್ಯವಿದ್ದ ತಾಳೆಗರಿಯ ಗ್ರಂಥಗಳನ್ನು ಅಭ್ಯಸಿಸಿ ಬೋಧನೆ ಕೈಕೊಳ್ಳುತ್ತಿದ್ದರು(32). ಖ್ಯಾತ ಘಟಿಕಾಸ್ಥಾನಗಳಿಗೆ ಕನ್ನಡನಾಡಿನ ಮೂಲೆ ಮೂಲೆಗಳಿಂದ ವಿದ್ಯಾರ್ಥಿಗಳು ಬರುತ್ತಿದ್ದಂತೆ, ಪರರಾಜ್ಯಗಳಿಂದ ಕೆಲವರಾದರೂ ಬರುತ್ತಿದ್ದಿರಬೇಕು. ದತ್ತಿಕೊಟ್ಟ ಉತ್ಪನ್ನದಿಂದ ಎಲ್ಲ ಖರ್ಚು ತೂಗಿಸಿಕೊಂಡು ಹೋಗುತ್ತಿದ್ದುದರಿಂದ ವಿದ್ಯಾರ್ಜನೆಯಲ್ಲಿ ತೊಡಗಿರುತ್ತಿದ್ದವರಿಗೆ ಹಣದ ಅವಶ್ಯಕತೆ ಇದ್ದಿರಲಿಲ್ಲ. ವಿಶೇಷ ಸಂದರ್ಭಗಳಲ್ಲಿ ಊರವರು ಉದಾರವಾಗಿ ಧನಸಹಾಯ ಮಾಡುತ್ತಿದ್ದರು.

ವಿವಿಧ ವಿನೋದಾವಳಿಗಳನ್ನು ನೀಡಲು ದೇವಸ್ಥಾನಕ್ಕೆ ಹೊಂದಿ ನಾಟ್ಯಶಾಲೆಯ ವ್ಯವಸ್ಥೆ ಇರುತ್ತಿತ್ತಲ್ಲದೇ ಹಾಡುವವರನ್ನೂ ಮದ್ದಳೆ ನುಡಿಸುವವರನ್ನೂ ನೇಮಿಸಲಾಗುತ್ತಿತ್ತು. ಕಟ್ಟಡಗಳ

ಸಂರಕ್ಷಣೆಗೆ, ಕಲ್ಲುಕುಟಿಗರು, ಶಿಲ್ಪಿಗಳು ಇರುತ್ತಿದ್ದರು. ಸಂರಕ್ಷಣೆಗೆ ಕಾಪಿನ ಘಟಿಯಾರ[೩೧]ರಿದ್ದರೆ, ಘಟಿಕಾಪ್ರಹಾರಿ[೩೨] ಎಂಬ ಪ್ರಾಧ್ಯಾಪಕರಷ್ಟೇ ಸಂಬಳ ಪಡೆಯುತ್ತಿದ್ದ ಅಧಿಕಾರಿ, ಸಮಯಾನುಸಾರವಾಗಿ ಎಲ್ಲ ಕೆಲಸಗಳು ಸುಸೂತ್ರವಾಗಿ ನಡೆಯುವಂತೆ ನೋಡಿಕೊಳ್ಳುತ್ತಿದ್ದ. ವೇಳೆಯ ನಿಯಂತ್ರಣವಲ್ಲದೇ ವಿಕ್ರಮಶಿಲೆಯ ದ್ವಾರ ಪಂಡಿತರಂತೆ ಇವನು ಬೋಧನೆ, ಪರೀಕ್ಷೆಗಳಲ್ಲಿ ಭಾಗವಹಿಸುತ್ತಿದ್ದ. ಸಮಯವನ್ನು ಗೊತ್ತುಪಡಿಸಲು ಪುರಾತನ ಕಾಲದಿಂದ ಬಳಕೆಯಲ್ಲಿದ್ದ ಗಳಿಗೆ ಬಟ್ಟಲು(ಜಲಯಂತ್ರ)ಗಳನ್ನು ಈ ಸಂಸ್ಥೆಗಳಲ್ಲಿ ಬಳಸಲಾಗುತ್ತಿತ್ತು. ದೊಡ್ಡ ಪಾತ್ರೆಯೊಂದರಲ್ಲಿ ಬಣ್ಣದ ನೀರನ್ನು ತುಂಬಿ ಅದರಲ್ಲಿ ಕಿರಿದಾದ ತೂತು ಇರುವ ಚಿಕ್ಕ ಹಿತ್ತಾಳೆ ಪಾತ್ರೆಯನ್ನು ತೇಲಿಬಿಡುತ್ತಾರೆ. ಹನಿಹನಿಯಾಗಿ ನೀರು ಒಳಸೇರಿ ಈ ಪಾತ್ರೆ ತುಂಬಿ ತಳ ಸೇರಿದಾಗ, ಒಂದು ಗಳಿಗೆ (=ಗಂಟೆ; ೨೪ ನಿಮಿಷ) ಯಾಯಿತು, ಎಂದು ತಿಳಿಯಲಾಗುತ್ತದೆ. ಈ ಜಲಘಟಿ ಅಥವಾ ಗಡಿಯಾರದ ಮೇಲೆ ಸದಾ ಕಣ್ಣಿಟ್ಟು ಕಾಲಕಾಲಕ್ಕೆ ಸರಿಯಾದ ವೇಳೆಯನ್ನು ಜಾಗಟೆ ಬಾರಿಸುವದರ ಮೂಲಕ ತಿಳಿಯಪಡಿಸುವದು ಘಟಿಕಾಪ್ರಹಾರಿಯ ಆದ್ಯ ಕರ್ತವ್ಯವಾಗಿತ್ತು. ವೇಳೆಗೆ ಅನುಗುಣವಾಗಿ ಘಟಿಕಾಸ್ಥಾನದ ಎಲ್ಲ ಚಟುವಟಿಕೆಗಳನ್ನು ಆತ ನಿಯಂತ್ರಿಸುತ್ತಿದ್ದ. ಅಂತೆಯೇ ಅವನಿಗೆ ಪ್ರಾಧ್ಯಾಪಕನಷ್ಟೇ ಸಂಬಳವಿರುತ್ತಿತ್ತು. ಕೆಲವೊಮ್ಮೆ ಭೇರಿ ಅಥವಾ ನಗಾರಿ ಬಾರಿಸಿ ವೇಳೆಯನ್ನು ತಿಳಿಯಪಡಿಸುತ್ತಿದ್ದರು. ದೊಡ್ಡ ಸಂಸ್ಥೆಗಳಲ್ಲಿ ಗಂಟೆ ಬಾರಿಸುವದಕ್ಕಾಗಿಯೇ 'ಘಳಿಗೆಯ ಮಾಣಿಯರು'(33) ಇರುತ್ತಿದ್ದರು. ರಾಜಮಹಾರಾಜರು ದತ್ತಿಗಳ ಜೊತೆಗೆ ಈ ಮಾಣಿಯರನ್ನೂ ಸರಕಾರಿ ಖರ್ಚಿನಿಂದ ನೇಮಿಸುತ್ತಿದ್ದರು.[೩೪] ಇಂದಿಗೂ ಗಳಿಗೆ ಬಟ್ಟಲನ್ನು ಬಳಸುವದು ಧಾರ್ಮಿಕ ಚಟುವಟಿಕೆಯಾಗಿ ಉಳಿದುಕೊಂಡಿದೆ. ಮದುವೆಯ ಮುಹೂರ್ತ 'ದಿವಾಘಟಿಯ ಹೊತ್ತಿಗೆ ಜರುಗಲಿದೆ', ಎಂದು ಆಮಂತ್ರಣ ಪತ್ರಿಕೆಯಲ್ಲಿ ಸೂಚಿಸಲಾಗುತ್ತದೆ. ಅಲ್ಲದೇ ದೇವತಾ ವಿಗ್ರಹದ ಸಾನ್ನಿಧ್ಯದಲ್ಲಿ ರಂಗೋಲಿ ಹಾಕಿ ಈ ಘಳಿಗೆ ಬಟ್ಟಲನ್ನು ಸ್ಥಾಪಿಸಲಾಗುತ್ತದೆ. ಇಷ್ಟಾದರೂ ಈಗಿನ ಭಟ್ಟರು ತಮ್ಮ ಕೈಗಡಿಯಾರ ನೋಡಿಯೇ "ಸುಮೂಹೂರ್ತೆ ಸಾವಧಾನ" ಮಂತ್ರ ಪಠಿಸುವದು ವಾಡಿಕೆಯಾಗಿಬಿಟ್ಟಿದೆ!

ಚಾಲುಕ್ಯದೊರೆ ತ್ರೈಲೋಕ್ಯಮಲ್ಲದೇವನ ಅಧಿಕಾರಿಯಾಗಿದ್ದ ಮಧುವರಸನು ಕ್ರಿ.ಶ.೧೦೫೮ರಲ್ಲಿ ನಾಗಾಯಿಯಲ್ಲಿ ತ್ರೈಪುರುಷ ದೇವರ ದೇವಸ್ಥಾನಕ್ಕೆ ಹೊಂದಿ "ಘಟಿಕಾಸ್ಥಾನ ಮೆನಿಪ್ಪಶಾಲೆ"ಯನ್ನು ಸ್ಥಾಪಿಸಿದನು. ಇದರಲ್ಲಿ ವೇದವನ್ನು ಅಭ್ಯಸಿಸಲು ಇನ್ನೂರು ಜನ, ಶಾಸ್ತ್ರ ಓದಲು ಐವತ್ತೆರಡು ವಿದ್ಯಾರ್ಥಿಗಳು ಇದ್ದರು. ಆಯಾ ವಿಷಯದಲ್ಲಿ ಪರಿಣತರನ್ನು ಶಿಕ್ಷಕರನ್ನಾಗಿ ನೇಮಕ ಮಾಡಲಾಗುತ್ತಿತ್ತು. ವೇದವನ್ನು ಮೂವರು ಬೋಧಿಸಿದರೆ, ಶಾಸ್ತ್ರ ವಿಭಾಗದಲ್ಲಿ ಭಟ್ಟದರ್ಶನ, ನ್ಯಾಸವ್ಯಾಕರಣ ಮತ್ತು ಪ್ರಭಾಕರ ದರ್ಶನ ಕಲಿಸಲು ಮೂವರು ಪ್ರಾಧ್ಯಾಪಕರಿದ್ದರು. ಗ್ರಂಥ ಭಾಂಡಾರದ ಮೇಲ್ವಿಚಾರಣೆ ನೋಡಿಕೊಳ್ಳಲು ಆರು ಸರಸ್ವತಿ ಭಂಡಾರಿಗರು ಇದ್ದರು. ದತ್ತಿಯಾಗಿ ಕೊಟ್ಟ ಭೂಮಿಯಲ್ಲಿ ಪ್ರತಿಯೊಬ್ಬ ಶಿಕ್ಷಕ, ಗ್ರಂಥ ಭಂಡಾರಿ ಮತ್ತು ಘಟಿಕಾಪ್ರಹಾರಿಗೆ ತಲಾ ಮೂವತ್ತು ಮತ್ತರು ಭೂಮಿಯಿಂದ ಬರುವ ಉತ್ಪನ್ನ ಮೀಸಲಾಗಿದ್ದರೆ, ಪ್ರಭಾಕರ ದರ್ಶನದ ಪ್ರಾಧ್ಯಾಪಕರಿಗೆ ಮಾತ್ರ ನಲವತ್ತೈದು ಮತ್ತರು

ಭೂಮಿಯ ಆದಾಯವೆಂದು ಶಾಸನದಲ್ಲಿ ನಮೂದಿಸಲಾಗಿದೆ. ಇದರಿಂದ ಈ ವಿಷಯದಲ್ಲಿ ಪರಿಶ್ರಮ ಇರುವ ವಿದ್ವಾಂಸರು ದುರ್ಲಭವಿದ್ದಿರಬೇಕು ಅನಿಸುತ್ತದೆ. ಉಳಿದ ಒಂದು ಸಾವಿರ ಮತ್ತರು ಭೂಮಿಯ ಉತ್ಪನ್ನವನ್ನು ವಿದ್ಯಾರ್ಥಿಗಳಿಗೇ ಬಳಸಲಾಗುತ್ತಿತ್ತು.[೧೯]

ಮಧುಸೂದನ ದೇವಾಲಯದ ಘಟಿಕೆ, ಮೂರು ಅಂತಸ್ತಿನ ಕಟ್ಟಡದಲ್ಲಿ ಹಬ್ಬಿಕೊಂಡಿತ್ತು. ಅಲ್ಲದೇ ಅಲ್ಲಿ ನಾಟಕಶಾಲೆ, ಪಠನಮಠಗಳೂ ಈ ಪ್ರಾಂಗಣದಲ್ಲಿದ್ದವು. ಏಕದಂಡಿ, ತ್ರಿದಂಡಿ, ಸ್ನಾತಕ, ಬ್ರಹ್ಮಚಾರಿ, ಹಂಸ, ಪರಮಹಂಸರೆಂಬ ವಿದ್ಯಾರ್ಥಿಗಳು ಮತ್ತು ಛಾತ್ರ ಸನ್ಯಾಸಿಗಳು ಅಲ್ಲಿದ್ದರು.[೨೦] ಅಧ್ಯಯನದ ಅವಧಿಯನ್ನು ಅವಲಂಬಿಸಿ, ವಿದ್ಯಾರ್ಥಿಗಳಲ್ಲಿ ಈ ಭೇದ ಮಾಡಲಾಗುತ್ತಿತ್ತು. ಅಲ್ಲಿದ್ದ ಭಟ್ಟೋಪಾಧ್ಯಾಯ, ಬ್ರಹ್ಮಪುರಿಭಟ್ಟ, ಋಕ್, ಯಜುಸ್ ಮತ್ತು ಅಥರ್ವವೇದಗಳ ಅಸಂಖ್ಯಾತ ಶಾಖೆಗಳನ್ನೂ ವೇದಾಂಗಗಳನ್ನೂ ಬೋಧಿಸುತ್ತಿದ್ದರು. ಪುರಾಣಭಟ್ಟರು, ಸಂಜೆ ಮಠದಲ್ಲಿ ಪುರಾಣವನ್ನು ವಾಚಿಸುತ್ತಿದ್ದರು. ಮೂವರು ಕಾಪಿನ ಘಟಿಯಾರರೂ, ನಾಲ್ವರು ಘಳಿಗೆಯ ಮಾಣಿಯರೂ ಇದ್ದರು. ಇದಲ್ಲದೆ ಕಲ್ಲುಕುಟಿಗರು, ಶಿಲ್ಪಿಗಳು, ಮದ್ದಳೆಕಾರರು, ಹಾಡುವ ಸಮುದಾಯ, ಪಾತ್ರದವರು, ಕಂಭದ ಸೂಳೆಯರು ಇತ್ಯಾದಿ ದೇವಾಲಯಕ್ಕೆ ಸಂಬಂಧಿಸಿದ ಸಿಬ್ಬಂದಿ ಅದೇ ಆವಾರದಲ್ಲಿ ವಾಸಿಸುತ್ತಿದ್ದರು.[೨೧]

ರಾಮೇಶ್ವರ ದೇವಾಲಯದ ಘಟಿಕಾಸ್ಥಾನವನ್ನು ಮಹಾದೇವರಸನು ಕಟ್ಟಿಸಿದನು. ಅಲ್ಲಿದ್ದ ನಾನೂರು ವಿದ್ಯಾರ್ಥಿಗಳಲ್ಲಿ ನೂರು ಜನ ಶುಕ್ರ(ನೀತಿ)ಯನ್ನು, ಇನ್ನೂ ನೂರು ಜನ ವ್ಯಾಸ(ಮಹಾಭಾರತ?)ವನ್ನು ಮತ್ತೂ ನೂರು ಜನ 'ಮನು'(ಧರ್ಮಶಾಸ್ತ್ರ)ವನ್ನು ಅಭ್ಯಸಿಸುತ್ತಿದ್ದರು.[೨೨] ಇನ್ನುಳಿದ ನೂರು ಜನ ಏನು ಓದುತ್ತಿದ್ದರೆಂದು, ಶಾಸನದ ಭಾಗ ನಶಿಸಿ ಹೋದದ್ದರಿಂದ ತಿಳಿಯದಾಗಿದೆ. ಇಷ್ಟಿದ್ದರೂ ಪಕ್ಕದ ತ್ರೈಪುರುಷದೇವರ ಘಟಿಕೆ ಮತ್ತು ಮಧುಸೂದನ ಘಟಿಕೆಯಲ್ಲಿದ್ದ ಸವಲತ್ತುಗಳು ಇಲ್ಲಿಯೂ ಇದ್ದಿರಬೇಕೆಂದು ಊಹಿಸಬಹುದಾಗಿದೆ.

ಘಟಿಕಾಸ್ಥಾನಗಳೆಲ್ಲ ವಸತಿ-ವಿದ್ಯಾಲಯಗಳಾಗಿದ್ದವು. ಒಂದೇ ಪರಿಸರದಲ್ಲಿ(ಕ್ಯಾಂಪಸ್‌ದಲ್ಲಿ) ಪ್ರಾಥಮಿಕ ಶಿಕ್ಷಣದಿಂದ ಉಚ್ಚಶಿಕ್ಷಣ ಒದಗಿಸುವ ವ್ಯವಸ್ಥೆಯಿರುತ್ತಿತ್ತು. ಈ ಸಂಸ್ಥೆಗಳ ಆವಾರದಲ್ಲಿಯೇ ಇದ್ದ ಬ್ರಹ್ಮಪುರಿ, ಅಗ್ರಹಾರಗಳಲ್ಲಿ ಲಭ್ಯವಿದ್ದ ಶಿಕ್ಷಣ ಮುಗಿಸಿದಾಗ, ಪ್ರತಿಭಾವಂತರಿಗೆ ಮಾತ್ರ ಘಟಿಕಾಸ್ಥಾನಗಳಲ್ಲಿ ಪ್ರವೇಶ ಸಿಗುತ್ತಿತ್ತು. ಈ ಪ್ರವೇಶವನ್ನು ಘಟಿಕಾ ಪ್ರಹಾರಿ ನಿಯಂತ್ರಿಸುತ್ತಿದ್ದಿರಬಹುದೆಂಬುದು ಗಮನಾರ್ಹ. ಅಲ್ಲಿಯ ಪರೀಕ್ಷಾಕ್ರಮ ಅತ್ಯಾಕರ್ಷಕ. ಕಲಿಸಿದ ವಿವಿಧ ವಿಷಯಗಳ ಕುರಿತು ಪ್ರಶ್ನೆಗಳನ್ನು ತಾಳೆಗರಿಯೊಂದರ ಮೇಲೆ ಒಂದೊಂದಾಗಿ ಬರೆದು ಒಂದು ಘಟ(ಗಡಿಗೆ)ದಲ್ಲಿ ಹಾಕುತ್ತಿದ್ದರು. ವಿದ್ಯಾರ್ಥಿಯಾದವನು, ಆರಿಸಿದ ಗರಿಯ ಮೇಲೆ ನಮೂದಿಸಿದ ವಿಷಯದ ಮೇಲೆ ತನ್ನ ವಾದವನ್ನು ಪ್ರತಿಪಾದಿಸಬೇಕಾಗಿತ್ತು. ಇಲ್ಲವೇ ವೇದಭಾಗವನ್ನು ಪಠಿಸಬೇಕಾಗಿತ್ತು.[೨೩] ನಂತರ ಚರ್ಚೆಗೆ ಅವಕಾಶ ಕಲ್ಪಿಸಲಾಗುತ್ತಿತ್ತು. ಅಂತೆಯೇ ಅಂದಿನ ಪರೀಕ್ಷಾ ಪದ್ಧತಿಯಲ್ಲಿ ಪಹರೆಯವರ ಅಥವಾ ಇನ್‌ವಿಜಿಲೇಟರುಗಳ ಅವಶ್ಯಕತೆಯೇ ಇರಲಿಲ್ಲ! ಹಲವಾರು ಘಟಿಕೆಗಳಲ್ಲಿ ಗೆದ್ದವ ಘಟಿಕಾ ಸಾಹಸಿ, ('ಘಯಿ'ಯ ಸಾಹಸಿ)[೨೪] ಘಟಿಕಾವಾದದಲ್ಲಿ ಕೆಲಮಟ್ಟಿಗೆ ಪ್ರಾವೀಣ್ಯತೆ ತೋರಿಸಿದವನು ಘಟಿಕಾ ಸಾಮಾನ್ಯನು

ಎಂದು ಗುರುತಿಸಲ್ಪಡುತ್ತಿದ್ದರು. ಅಂದಿನ ಘಟಿಕಾಸ್ಥಾನಗಳು ಧಾರ್ಮಿಕ, ಸಾಮಾಜಿಕ ಜೀವನದ ಮೇಲೆ ಪ್ರಭಾವ ಬೀರುತ್ತಿದ್ದವು[೨೫]. ೬೪ ಘಟಿಕಾ ಸ್ಥಾನಗಳನ್ನು ಸ್ಥಾಪಿಸಿದ ಶ್ರೇಯಸ್ಸನ್ನು ಶ್ರೇಣಿಗಳು, ಆಳರಸರು ಸಾರಿಕೊಳ್ಳಲು ಯತ್ನಿಸಿದ್ದಾರೆ. ವಿದ್ಯಾದಾನದ ಮೂಲಕ ಧನಾರ್ಜನೆಗೆ ಮತ್ತು ಆ ಮೂಲಕ ಧರ್ಮಪಾಲನೆಗೆ ಅವಕಾಶ ಮಾಡಿಕೊಡುತ್ತಿದ್ದರಿಂದಲೋ ಏನೋ, "ಧರ್ಮಕ್ಕೆ ನೆರ್ಮಮುಂ, ಭೋಗಕ್ಕಾಗರಮುಂ ಆದ ಘಟಿಕಾಸ್ಥಾನಮುಂ" ಎಂದು ಶಾಸನಗಳು ಹೊಗಳುತ್ತವೆ.[೨೬]

ಶತಮಾನಗಳಲ್ಲಿ ಎಲ್ಲ ಘಟಿಕಾಸ್ಥಾನಗಳು ನೆಲಸಮವಾಗಿವೆ. ಇಂದು ಅವುಗಳ ಬಗ್ಗೆ ಶಾಸನಗಳಲ್ಲಿ ಸಿಗುವ ಅಷ್ಟಿಷ್ಟು ಮಾಹಿತಿ ಬಿಟ್ಟರೆ, ಬೇರೆ ಯಾವ ಕುರುಹೂ ದೊರೆಯುತ್ತಿಲ್ಲ. ಆದರೆ ಅದರ ಕೆಲ ಸಂಪ್ರದಾಯಗಳು ಉಳಿದುಕೊಂಡಿವೆ. ಸಾಹಸಿಗನಿಗೆ 'ಘಟ್ಟಿಗ', ವಿಪುಲ ಬುದ್ಧಿಮತ್ತೆ ಇರುವವನಿಗೆ 'ಘಟಾನುಘಟಿ' ಎಂದು ಕರೆಯುತ್ತಾರೆ. ವಿಶ್ವವಿದ್ಯಾಲಯದ ಪದವಿದಾನ ಸಮಾರಂಭಕ್ಕೆ 'ಘಟಿಕೋತ್ಸವ' ಎಂದು ಕರೆಯುವದು, ಘಟಿಕಾಸ್ಥಾನದ ಕೊಡುಗೆ. ಅಂದಹಾಗೆ ಮಹಾರಾಷ್ಟ್ರದಲ್ಲಿ ತುಂಬ ಪ್ರಚಲಿತವಿರುವ 'ಘೈಸಾಸ್' ಎಂಬ ಅಡ್ಡ ಹೆಸರು ಘಯಿತು ಸಾಹಸಿ ಅಥವಾ 'ಘಟಿಕಾ ಸಾಹಸಿ' ಎಂಬುದರ ಅಪಭ್ರಂಶವಿರಬಹುದೇ?

## ಅಭ್ಯಾಸ ಸೂಚಿ


೧. ಎ.ಇ.VIII, ಪು.೨೬.

೨. ಅದೇ XIII, ಪು.೩೩೬ ಮತ್ತು XVI ಪು.೮೭

೩. ಐ.ಎ. XIV, ಪು.೨೫.

೪. ಮೀನಾಕ್ಷಿ ಸಿ: "ಅಡ್ಮಿನಿಸ್ಟ್ರೇಶನ್ ಅಂಡ್ ಸೋಶಿಯಲ್ ಲೈಫ್ ಅಂಡರ್ ದಿ ಪಲ್ಲವಾಸ್", ಪು.೧೮೬.

೫. ಎ.ಐ.VIII, ೫ ಪು.೨೪.

೬. ಹೀಗೆ ಶಾಸನದಲ್ಲಿ ಹೇಳಿದರೂ ಕದಂಬ ರವಿವರ್ಮನ ಗುಡ್ನಾಪುರ ಶಾಸನದಿಂದ ಕದಂಬಕುಲದ ಇತಿಹಾಸ ಇನ್ನೆರಡು ತಲೆಮಾರು ಹಿಂದಕ್ಕೆ ಹೋಗುತ್ತದೆ. ನೋಡಿ: ಡಾ। ಬಿ.ಆರ್. ಗೋಪಾಲ್ ಅವರ ಗುಡ್ನಾಪುರ ಶಾಸನ ಕುರಿತಾದ ಲೇಖ; ಶ್ರೀಕಂಠಿಕಾ (ಡಾ। ಎಸ್. ಶ್ರೀಕಂಠ ಶಾಸ್ತ್ರಿ) ಗೌರವ ಗ್ರಂಥ ಮೈಸೂರು, ೧೯೭೩, ಪು.೬೧-೭೨.

೭. ಎಸ್.ಐ.ಐ.IX(ಉ) ಪು.೭೩ ಮೋರಿಗೆರೆ.

೮. ಎಚ್.ಎ.ಎಸ್. VIII, ಪು.೧೫-೨೩.

೯. ಎ.ಇ.XV, 6 ಪು.೮೯.

೧೦. ಅದೇ XVI ೧೫ ಪು.೮೪.

೧೧. ಎಸ್.ಐ.ಐ. XX(I) ನ ೧೩೩ ಪು.೧೧೬.

೧೨. ಕುಂದಣಗಾರ ಕೆ.ಜಿ. ಇನ್ಸ್‌ಕ್ರಿಪ್ಶನ್ಸ್ ಇನ್ ನಾರ್ತ್ ಕರ್ನಾಟಕ್ ಅಂಡ್ ದಿ ಕೊಲ್ಹಾಪುರ ಸ್ಟೇಟ್, ಪು.೭೫.

೧೩. ಎಸ್.ಐ.ಐ. XX೯೯ ಲಕ್ಷ್ಮೇಶ್ವರ; ಅದೇ ಜಿಲ್ಲೆ(ಧಾರವಾಡ)ಯ ಕಡಲೆವಾಡದಲ್ಲೂ ಘಟಿಕಾಸ್ಥಾನವಿತ್ತು, ನಂ.೧೫೪.

೧೪. ರಿತ್ತಿ ಎಸ್.ಎಚ್. ಮತ್ತು ಶೇಳ್ಕೆ ಜಿ.ಸಿ.: 'ಇನ್ಸ್‌ಕ್ರಿಪ್ಶನ್ಸ್ ಫ್ರಾಮ್ ನಾಂದೇಡ್ ಡಿಸ್ಟ್ರಿಕ್ಟ್', ನಂ.೩೧.

೧೫. ಎ.ಕ. XI ಸಿರಾ ೨೩.

೧೬. ಪ್ರಭುಲಿಂಗಲೀಲೆ-೩, ಪು.೪೫.
ಜೈನ ಘಟಿಕಾಸ್ಥಾನಗಳೂ ಇದ್ದವು. ಕ್ರಿ.ಶ. ೧೩೯೩ರ ಮಳಖೇಡದ (ಗುಲಬರ್ಗಾ ಜಿಲ್ಲೆ) ಗುರುಪಟ್ಟಾವಳಿಯ ಪೀಠಿಕೆಯಲ್ಲಿ 'ನಿಜಘಟಿಕಾ ಸ್ಥಾನ ದಿಲ್ಲಿ-ಮಲಯಾದ್ರಿ-ವಿಜಯನಗರ- ವರಾಂಗ-ಪಟ್ಟಿ- ಪೊಂಬುಚ್ಚ ಚತುರ್ವಿಧ. ಸಿದ್ಧ-ಸಿಂಹಾಸನಾಧೀಶ್ವರ' ಎಂದು ಹೇಳಲಾಗಿದೆ. ಅಂದರೆ ವಿಜಯನಗರ, ವರಾಂಗ (ಕಾರ್ಕಳ ತಾಲೂಕು, ದ.ಕ.ಜಿಲ್ಲೆ) ಹುಂಚ (ಶಿವಮೊಗ್ಗ ಜಿಲ್ಲೆ)ಗಳಲ್ಲಿ ಘಟಿಕಾಸ್ಥಾನಗಳಿದ್ದವು. ಇವು ಜೈನ ಉಚ್ಚಶಿಕ್ಷಣದ ಕೇಂದ್ರಗಳಾಗಿದ್ದವು. (ಪೊಂಬುಚ್ಚ ಅಥವಾ ಹುಂಚದಲ್ಲಿ ಈಗಲೂ ಜೈನ ವಿದ್ಯಾಲಯವಿದ್ದು ಕರ್ನಾಟಕದ ಬೇರೆ ಬೇರೆ ಭಾಗಗಳಿಂದ ವಿದ್ಯಾರ್ಥಿಗಳನ್ನು ಆಕರ್ಷಿಸುತ್ತದೆ.) ಗುರುರಾಜ ಭಟ್ಟ ಪಿ. "ಸ್ಟಡೀಸ್ ಇನ್ ತುಳುವ ಹಿಸ್ಟರಿ", ಪು.೪೨೯.

೧೭. ಎಚ್.ಎ.ಎಸ್.: VIII C ಪು ೩೮.

೧೮. ಚೀನೀ ಪ್ರವಾಸಿ ಇತ್ಸಿಂಗನು ನಾಲಂದದಲ್ಲಿ ಹಿಂದಿನ ಕಾಲದಿಂದಲೂ ಗಡಿಯಾರ ಅಥವಾ ಘಟೀಯಂತ್ರ (ಗಳಿಗೆ ಬಟ್ಟಲು) ನೋಡಿ ಗಂಟೆಯೊಡೆಯಲು ಘಟೀಯಂತ್ರದೊಂದಿಗೆ ಗಂಟೆ ಹೊಡೆಯುವ ಹುಡುಗರನ್ನೂ ಅರಸರು ನೇಮಿಸುತ್ತಿದ್ದರೆಂದು ಹೇಳಿದ್ದಾನೆ. (ಇತ್ಸಿಂಗ್ ಪು.೮೪ ಮತ್ತು ದತ್ ೩೩೫); ಚಾಲುಕ್ಯ ವಿಕ್ರಮಾದಿತ್ಯನ ದಂಡನಾಯಕ ಮಹದೇವಯ್ಯನು ಗಡಿಯಾರ ಮತ್ತು ಮಾಣಿಯರ ವ್ಯವಸ್ಥೆಯನ್ನು ಇಟ್ಟಿಗೆಯ ಮಹಾದೇವ ದೇವಸ್ಥಾನದಲ್ಲಿ ಮಾಡಿದ್ದ. ಎ.ಇ.VIII, ಪು ೪೧-೫೩.

೧೯. ಎಚ್.ಎ.ಎಸ್. VIII 'ಬಿ', ಪು.೨೫.

೨೦. ಅದೇ, ಪು.೩೮.

೨೧. ಅದೇ, ಪು.೩೩.

೨೨. ಅದೇ, ಪು.೩೯.

೨೩. ಕಾಂಚಿ ಕಾಮಕೋಟಿ ಪೀಠದ ಜಗದ್ಗುರು ಶಂಕರಾಚಾರ್ಯರ ತಮಿಳುನಾಡಿನ ಘಟಿಕಾಸ್ಥಾನಗಳ ಕುರಿತಾದ ಲೇಖ. ದಿ ಇಲ್ಲಸ್ಟ್ರೇಟೆಡ್ ವೀಕ್ಲಿ ಆಫ್ ಇಂಡಿಯ, ಮೇ ೯, ೧೯೬೫, ಪು.೮-೯.

೨೪. ಎ.ಕ. VII ನ ೧೯೭, ಪು.೨೧೪.

೨೫. ಸುಮಾರು ಐವತ್ತು ವರ್ಷಗಳ ಹಿಂದಿನ ಈ ಬರಹವನ್ನು ಇತ್ತೀಚೆಗೆ ಕಂಡುಹಿಡಿದ ಕೊಪ್ಪಳ ಹಾಗೂ ರಾಯಚೂರ ಜಿಲ್ಲೆಗಳಲ್ಲಿಯ ಶಿಲಾಶಾಸನ ವಿವರಗಳು ಸಮರ್ಥಿಸುತ್ತವೆ. ಆ ಪ್ರದೇಶದಲ್ಲಿ ಹಲವಾರು ಘಟಿಕಾಸ್ಥಾನಗಳಿದ್ದು, ಘೈಸಾಸರೆಂಬ (ಘಟಿಕಾ ಸಾಹಸದ ತದ್ಭವ ರೂಪ) ಪದವಿಯುಳ್ಳ ಹಲವು ವಿದ್ವಾಂಸರಿಗೆ ಭೂಮಿಯ ರೂಪದಲ್ಲಿ ವೃತ್ತಿಯನ್ನು ಕಲ್ಪಿಸಲಾಗಿತ್ತು. 'ಘಳಿಗೆಯ ಮಾಣಿ'ಯರೂ ಅಲ್ಲಿದ್ದರು. ವಿದ್ಯಾರ್ಥಿಗಳಿಗೆ, ಸಿಬ್ಬಂದಿಯವರಿಗೆ ಛತ್ರ, ಆಹಾರ ಮತ್ತಿತರ ಸೌಕರ್ಯಗಳ ವ್ಯವಸ್ಥೆಯನ್ನು ಆಯಾ ದೇವಾಲಯದ ಸ್ಥಾನಪತಿ ನೋಡಿಕೊಳ್ಳುತ್ತಿದ್ದ.
ಅ) ಕೊಪ್ಪಳ ಜಿಲ್ಲೆಯ ಶಾಸನೋಕ್ತ ಘೈಸಾಸರು: ಇತಿಹಾಸ ದರ್ಶನ ಸಂಪುಟ ೧೭. ಡಾ. ಎಸ್.ಕೆ. ಮೇಲಕಾರ : ಪು. ೧೦೦.೧೦೩
ಬ) ಅದೇ ಸಂಪುಟ ೨೩. ರಾಯಚೂರು ಜಿಲ್ಲಾ ಮಲ್ಲಟ ಗ್ರಾಮದ ಅಪ್ರಕಟಿತ ಶಾಸನಗಳು. ಡಾ. ಬಿ. ಚನ್ನಬಸಪ್ಪ. ಪು. ೪೩-೪೬

೨೬. ಮೇಲಿನ (ಅ) ದಿಂದ ಈ ವಿಷಯ ದೃಢಪಟ್ಟಿದೆ.

# ೬. ಅರಸು ಮಕ್ಕಳ ಶಿಕ್ಷಣ

ಪ್ರಜಾಸತ್ತಾತ್ಮಕ ರಾಷ್ಟ್ರಗಳಲ್ಲಿ ಯಾರು ರಾಷ್ಟ್ರದ ಮುಖಂಡರಾಗುತ್ತಾರೆಂದು ಊಹಿಸುವದು ಕಷ್ಟ. ಕಡಲೆಕಾಯಿ ಕೃಷಿಕ, ನಟರು ಒಂದು ದೇಶದ ಅಧ್ಯಕ್ಷರಾದರೆ, ಒಬ್ಬ ಗೃಹಿಣಿ, ಇನ್ನೊಂದು ದೇಶದ ನಾಯಕಿಯಾಗಿ ಬಿಡುತ್ತಾಳೆ. ಈ ಪದ್ಧತಿಯಲ್ಲಿ ದೊಡ್ಡ ಕೊರತೆ ಏನೆಂದರೆ, ಈ ಮುಖಂಡರಿಗೆ ಬೇಕಾಗುವ ಸರ್ವತೋಮುಖ ಶಿಕ್ಷಣ, ಬಾಲ್ಯದಿಂದಲೇ ಸಿಗದೇ ಇರುವದು. ವಂಶಪರಂಪರೆಯಿಂದ ಪಟ್ಟಕ್ಕೇರುವ ಪದ್ಧತಿಯಲ್ಲಿ ಭವಿಷ್ಯದ ರಾಜನು ಯಾರು? ಎಂದು ಹುಟ್ಟಿನಿಂದಲೇ ತಿಳಿದಿರುವದರಿಂದ, ವ್ಯವಸ್ಥಿತವಾಗಿ ರಾಜ್ಯವಾಳಲು ಬೇಕಾದ ಶಿಕ್ಷಣವನ್ನು ಕ್ರಮವಾಗಿ ಕೊಡುತ್ತಿದ್ದರು. ಪ್ರತಿ ಅರಮನೆಯಲ್ಲಿ ಇದಕ್ಕಾಗಿ ಮೀಸಲಿಟ್ಟ ಕೋಣೆಗಳು ಇರುತ್ತಿದ್ದವು. ಕನ್ಯಾಮಾಡ, ಚಿತ್ರಶಾಲಾ, ಸಂಗೀತಸದನ, ಅಕ್ಷರಾಭ್ಯಾಸದ ಶಾಲಾ, ನೆಲಮಾಳಿಗೆಯ ಗರಡಿ ಮನೆಗಳು ಇತ್ಯಾದಿ. ಇವುಗಳೆಲ್ಲ ಸುಸಜ್ಜಿತವಾಗಿದ್ದು ಮೇಲ್ವಿಚಾರಕರ ನಿಯಂತ್ರಣದಲ್ಲಿರುತ್ತಿದ್ದವು. ವಿವಿಧ ವಿಷಯಗಳಲ್ಲಿ ಪರಿಣತರನ್ನೆ ರಾಜವಂಶದವರಿಗೆ ಶಿಕ್ಷಣ ಕೊಡಲು ನೇಮಿಸಲಾಗುತ್ತಿತ್ತು. ಚಿಕ್ಕಮಗುವಿದ್ದಾಗ ದಾದಿಗಳು ನೋಡಿಕೊಳ್ಳುತ್ತಿದ್ದರು. ಅವರು ಬೆಳ್ಳಿ, ಬಂಗಾರದ ಆಟಿಗೆಗಳಿಂದ ಅವರನ್ನು ಆಡಿಸುತ್ತಿದ್ದರು. ಹೀಗೆ ಮಾಡುವದರಲ್ಲಿ ಐಶ್ವರ್ಯ ಪ್ರದರ್ಶನಕ್ಕಿಂತ, ಮಗುವಿನಲ್ಲಿ ಸಮಾಜದಲ್ಲಿ ತನ್ನ ಸ್ಥಾನಮಾನ ಯಾವುದು? ಎಂದು ಬಿಂಬಿಸುವದು ಮುಖ್ಯ ಉದ್ದೇಶವಿದ್ದಿರಬೇಕು, ಎಂದು ಅನಿಸುತ್ತದೆ.

ಸುಖದ ಸುಪ್ಪತ್ತಿಗೆಯಲ್ಲಿ ಬೆಳೆಯುತ್ತಿದ್ದರೂ, ಭವಿಷ್ಯದಲ್ಲಿ ಜನಸಾಮಾನ್ಯರನ್ನು ಆಳಬೇಕಾಗಿದ್ದರಿಂದ, ಇತರ ಮಕ್ಕಳೊಂದಿಗೆ ಆಡಲು ಪ್ರೇರೇಪಿಸುತ್ತಿದ್ದರು. ಇದರಿಂದ ಅರೆನಗ್ನ ಮಕ್ಕಳನ್ನು ಕಂಡು ರಾಜಕುಮಾರನು ಮೂಗು ಮುರಿಯದಂತೆ, ಧನ ದೌಲತ್ತಿಗೆ ಬಡಬಗ್ಗರು ಅಸೂಯೆಪಡದಂತೆ, ವಾತಾವರಣ ನಿರ್ಮಿತವಾಗುತ್ತಿತ್ತು. ಸಂರಕ್ಷಣೆಯ ನೆಪದಲ್ಲಿ, (ಗುಪ್ತ)ಚಾರರು ಸದಾ ಅರಸುಕುಮಾರರನ್ನು ನೆರಳಿನಂತೆ ಹಿಂಬಾಲಿಸಿ, ಅವರು ದುಷ್ಟರ ಸಹವಾಸ, ಕೆಟ್ಟ ಚಟಗಳಿಗೆ ಬಲಿಯಾಗದಂತೆ ಮುನ್ನೆಚ್ಚರಿಕೆ ವಹಿಸುತ್ತಿದ್ದರು.[೧] ರಬ್ಬರ್ ಬಳಕೆಗೆ ಬಾರದ ದಿನಗಳಲ್ಲಿ, ಹತ್ತಿ, ಅರಳೆ, ಉಣ್ಣೆಯ ಚೆಂಡುಕಟ್ಟಿ ದಾರದಿಂದ ಬಿಗಿದ ಚೆಂಡಾಟವಾಡುತ್ತಿದ್ದರು(34). ಗೋಲಿಯಾಟ ತುಂಬ ಹಿಂದಿನಿಂದ ಪ್ರಚಲಿತವಿದೆ. ಇಂದು ಗಾಜಿನವನ್ನು ಬಳಸಿದರೆ ಹಿಂದೆ ಕಲ್ಲಿನವನ್ನು ಬಳಸುತ್ತಿದ್ದರು. ಬಡಹುಡುಗನೂ ರಾಜಕುಮಾರನಿಗೆ ಗೋಲಿಯಾಟದಲ್ಲಿ ಮೋಸ ಮಾಡಕೂಡದು(35), ಎಂದು ಎಚ್ಚರಿಸುವ ಸ್ವಾತಂತ್ರ್ಯವನ್ನು ಸದಾಕಾಲ ಪಡೆದಿರುತ್ತಿದ್ದನು.

ನಡುವೆ ಮೊಳೆಹೊಡೆದ ಕೊರಡಿನ ಬಗರಿಯನ್ನು ದಾರ ಸುತ್ತಿ ತಿರುಗಿಸುವದೆಂದರೆ ಮಕ್ಕಳಿಗೆಲ್ಲ ಪಂಚಪ್ರಾಣ(36). ಅರಸುಮಗನು ಇದಕ್ಕೆ ಹೇಗೆ ಅಪವಾದವಾದಾನು? ನೆಲದ ಮೇಲೆ ತಿರುಗುವ ಬಗರಿಯನ್ನು ದಾರದಿಂದ ಕೈಗೆ ವರ್ಗಾಯಿಸಿಕೊಂಡವನು ಜಾಣನೆನಿಸಿಕೊಳ್ಳುತ್ತಿದ್ದ. ತಿರುಗು ಗಾಲಿಗಳಿದ್ದ ಕಟ್ಟಿಗೆಯ ಕುದುರೆಯನ್ನು ತೇರಿನಂತೆ ಎಳೆಯುವದು(37), ಅಂದಿನ ಬಾಲಕರ ಇನ್ನೊಂದು ಆಟವಾಗಿತ್ತು.

ರಾಜಪುತ್ರನಿಗೆ ಐದು ಅಥವಾ ಎಂಟು ವರ್ಷ ತುಂಬಿತೆಂದರೆ, ಅರಸು, ಮಂತ್ರಿಗಳೊಂದಿಗೆ ಸಮಾಲೋಚಿಸಿ, ರಾಜಪುರೋಹಿತರ ಸಲಹೆ ಪಡೆದು, ಶುಭಮುಹೂರ್ತದಲ್ಲಿ ಉಪನಯನ ಮಾಡಿ ವಿದ್ಯಾಭ್ಯಾಸದ ಪ್ರಾರಂಭವನ್ನು ಇಡಿಸುತ್ತಿದ್ದ. ವಿಘ್ನೇಶ್ವರ, ಕುಲದೇವತೆಗಳ ಪೂಜೆ ಪೂರೈಸಿಕೊಂಡು, ಬೆಲೆಬಾಳುವ ಉಡುಪು ಧರಿಸಿದ ಬಾಲಕನನ್ನು ತೊಡೆಯ ಮೇಲೆ ಕೂಡ್ರಿಸಿಕೊಂಡು, ಓಂ ಗಣೇಶಾಯ ನಮಃ ಎನ್ನಲು ತಂದೆಯೇ ಹೇಳಿಕೊಡುತ್ತಿದ್ದ. ನಂತರ ನೆರೆದವರಿಗೆ ತಿಂಡಿ, ತೀರ್ಥದ ಸಮಾರಾಧನೆ. ಮರುದಿನದಿಂದ ರಾಜಗುರುವು ಅಕ್ಷರಾಭ್ಯಾಸವನ್ನು ಮುಂದುವರಿಸುವನು. ಎತ್ತರವಾದ ಮಣೆಯ ಮೇಲೆ ಕುಳ್ಳಿರಿಸಿ ಹಲಗೆಯ ಮೇಲೆ ಬರೆಸಿ, ಬರೆದದ್ದನ್ನು ತಿದ್ದಲು ಹೇಳುವನು(38). ಅರಸುಮಗನಿಗೆ ಬೈಯುವಂತಿಲ್ಲ, ಹೊಡೆಯುವಂತಿಲ್ಲ, ಗದರಿಸುವಂತೆಯೂ ಇಲ್ಲ! ಆದರೂ ಇನ್ನಿತರ ವಿದ್ಯಾರ್ಥಿಗಳಿಗಿಂತ ಆತನನ್ನು ಜಾಣನನ್ನಾಗಿ ಮಾಡುವ ಕೆಲಸ ಅಷ್ಟೇನೂ ಸುಲಭವಾಗಿರಲಿಲ್ಲ. ಈ ವಿದ್ಯಾಭ್ಯಾಸ ತನಗೆ ರಾಜನಾಗಲು ಸಹಾಯ ಮಾಡುತ್ತದೆ, ಎಂದು ಅರಿತವನು ಮಾತ್ರ ಶಿಕ್ಷಕನಿಗೆ ಗೌರವ ತರುವಷ್ಟು ಶರವೇಗದಿಂದ ಪ್ರಗತಿ ಸಾಧಿಸುತ್ತಿದ್ದ. ಪ್ರಾಥಮಿಕ ಪಾಠಗಳು ಮುಗಿದನಂತರ ಪಂಡಿತನಿಂದ ವಿವಿಧ ತಾಳೆಗರಿ ಗ್ರಂಥಗಳ ಶಾಸ್ತ್ರ ಪರಿಚಯದ ಪಾಠಗಳು ಪ್ರಾರಂಭವಾಗುತ್ತಿದ್ದವು(39). ರತ್ನಖಚಿತ ಆಭರಣಗಳನ್ನು ತೊಟ್ಟು, ರತ್ನಗಂಬಳಿಯ ಮೇಲೆ ಆರೂಢನಾಗಿ, ವಂಶಪರಂಪರೆಯ ಚಿಹ್ನವಾದ ರುಮಾಲನ್ನೋ, ಕುಲಾವಿಯನ್ನೋ ಧರಿಸಿ ರಾಜಕುಮಾರನು ಸತತವಾಗಿ ನಾಲ್ಕು ಐದು ತಾಸುಗಳ ಅಧ್ಯಯನ ಮಾಡಲೇಬೇಕಾಗುತ್ತಿತ್ತು. ಮಹಮ್ಮದೀಯ ಅರಸರು ರಾಜ್ಯದ ಖಾಜಿ ಮೌಲ್ವಿಗಳಿಂದ ಯುವರಾಜರಿಗೆ ಫಾರಸಿ ಗ್ರಂಥಗಳ ಪರಿಚಯ ಮಾಡಿಸುತ್ತಿದ್ದರು. ವಿರಾಮದ ವೇಳೆಯಲ್ಲಿ ಅರಸು ಮಕ್ಕಳು ಅಂದಿನ ಪಾಠದ ಉಜಳಣೆ ಮಾಡಿಕೊಳ್ಳಬೇಕಾಗುತ್ತಿತ್ತು. ಉದ್ಯಾನದಲ್ಲಿ ತಂಗಾಳಿ ಸೇವಿಸುತ್ತ, ಹಕ್ಕಿಗಳ ಕೂಜನ ಆಲಿಸುತ್ತ ಪಠಣ ನಡೆಸಿದರೆ(40), ಗ್ರಹಣ ಸುಲಭವಾಗುತ್ತಿತ್ತು.

ಕ್ಷಾತ್ರಧರ್ಮ ಪರಿಪಾಲಕನಿಗೆ ಯುದ್ಧಕಲೆಯಲ್ಲಿ ಪರಿಣತನನ್ನಾಗಿ ಮಾಡುವದು ಶಿಕ್ಷಕನ ಆದ್ಯ ಕರ್ತವ್ಯವಾಗಿತ್ತು. ಅಂತೆಯೇ ಸ್ನಾಯುಗಳು, ಶಕ್ತಿ, ಸಮಾರ್ಥ್ಯಗಳು ಬೆಳೆಯುವ ಆಹಾರವನ್ನು ಪೂರೈಸಲಾಗುತ್ತಿತ್ತು. ಅಂಗಾಂಗಗಳಲ್ಲಿ ಬೇಕಾದ್ದಕ್ಕಿಂತ ಒಂದು ಗುಂಜಿಯೂ ಕೊಬ್ಬು ಹೆಚ್ಚಾಗದಂತೆ ಜಾಗ್ರತೆ ವಹಿಸಲಾಗುತ್ತಿತ್ತು. ಪ್ರತಿಸ್ಪರ್ಧಿಯೊಂದಿಗೆ ಕೈಯಲ್ಲಿ ಚೂರಿ (ಕ್ಷುರಿಕಾ) ಹಿಡಿದು ದ್ವಂದ್ವ ಮಾಡಬೇಕಾಗುತ್ತಿತ್ತು(41). ರಾಜಕುಮಾರನು ಗೆದ್ದರೆ ಶಿಕ್ಷಕನಿಗೆ ಆಗುವ ಸಂತೋಷಕ್ಕೆ ಮೇರೆಯಿರುತ್ತಿರಲಿಲ್ಲ. ಅದೇ, ಅವನು ಸೋಲುವ ಲಕ್ಷಣ

ಕಂಡುಬಂದಾಗ, ಪ್ರತಿಸ್ಪರ್ಧಿಗೆ ಕಣ್ಣು ಮಿಟುಕಿಸಿ ಸೋಲುವಂತೆ ಸಂಜ್ಞೆಯನ್ನೂ ಶಿಕ್ಷಕನು ಮಾಡುವ ಪದ್ಧತಿ ಇದ್ದಿರಬೇಕು! ಜೋಡಿಗದೆಗಳನ್ನು ತಿರುವುತ್ತ(42) ರಾಜಕುಮಾರನತ್ತ ತೂರಿದ ಆಯುಧಗಳಿಂದ ರಕ್ಷಿಸಿಕೊಳ್ಳುವದು ಇನ್ನೊಂದು ಯುದ್ಧಕಲೆ. ಇದರಂತೆ ಒಂದು ಕೈಯಲ್ಲಿ ಖಡ್ಗ, ಇನ್ನೊಂದರಲ್ಲಿ ಕಠಾರಿ ಹಿಡಿದು, ಶಿಕ್ಷಕನು ತನ್ನತ್ತ ತೂರಿದ ಸಣ್ಣ ಚೆಂಡನ್ನು ಗುರಿ ಇಟ್ಟು ಕೆಡಹುವದು(43), ಇನ್ನೊಂದು ಚಮತ್ಕಾರ. ತಿರುಗುತ್ತಿರುವ ಚಂಡಿಗೆ ಗುರಿ ಇಟ್ಟು, ಕುದುರೆಯನ್ನು ನಾಗಾಲೋಟದಿಂದ ಓಡಿಸಿ, ಭರ್ಚಿಯಿಂದ ಸೀಳಲು(44) ಹೆಚ್ಚಿನ ಶ್ರಮ, ಗುರಿ ಬೇಕಾಗಿದ್ದವು. ಇದರಂತೆ ಬಿಲ್ಲು ಬಾಣ ಬಳಸಿ, ಶಿಕ್ಷಕನು ಸೂಚಿಸಿದಷ್ಟೆ ಸುತ್ತಿಗೆ, ತಿರುಗುವ ಚೆಂಡನ್ನು ತುಂಡರಿಸಬೇಕಾಗಿತ್ತು(45). ಇದನ್ನು ಸಾಧಿಸಬೇಕಾದರೆ ರಾಜಕುಮಾರನು ಅನೇಕ ವರ್ಷಗಳ ಅಭ್ಯಾಸದಿಂದ ಕರಗತ ಮಾಡಿಕೊಳ್ಳಬೇಕಾಗಿತ್ತು(46).

ಅರಸನಿಗೆ ಪ್ರಜೆಗಳೊಂದಿಗೆ ಸಂಪರ್ಕ ಅತಿ ಮುಖ್ಯವಾಗಿದ್ದರಿಂದ ಆತನ ಮಾತುಗಾರಿಕೆಯನ್ನು ತಿದ್ದಲು ವಿಶೇಷ ಎಚ್ಚರಿಕೆ ವಹಿಸಲಾಗುತ್ತಿತ್ತು. ಉಸಿರನ್ನು ಸರಿಯಾಗಿ ನಿಯಂತ್ರಿಸಿ ನಾದ, ಘೋಷ, ಅಘೋಷ, ಅಲ್ಪಪ್ರಾಣ, ಮಹಾಪ್ರಾಣಗಳಿಗೆ ಸರಿಯಾದ ಒತ್ತು ಕೊಟ್ಟು ಉಚ್ಚರಿಸಲು ಕಲಿಸುತ್ತಿದ್ದರು. ಸಾಮಾನ್ಯ ದೋಷಗಳಾದ, ಅಕ್ಷರಗಳನ್ನು ನುಂಗುವದು, ಬೆರೆಸುವದು, ಬೇಗ ಬೇಗ ಓದುವದು, ತಡೆ ತಡೆದು ಓದುವದು, ಬಲುನಿಧಾನ ಮುಂದರಿಯುವದು, ಅವಶ್ಯವಾಗಿ ಹೇಳಬೇಕಾದ್ದನ್ನೇ ಮರೆತು, ಹರಿಕಥೆಯಂತೆ ಅಡ್ಡಕತೆಯತ್ತ ಹೊರಳುವದು, ಬಳಸು ಬಳಸಾಗಿ ಹೇಳುವದು ಮುಂತಾದವನ್ನು ತಪ್ಪಿಸುವಂತೆ ನೋಡಿಕೊಳ್ಳುತ್ತಿದ್ದರು.[೨] ಸೂಚಿಸಿದ ವಿಷಯದ ಮೇಲೆ ವಿದ್ಯಾರ್ಥಿಯಾದವನು ಮಾಹಿತಿ ಸಂಗ್ರಹಿಸಿ, ಟಿಪ್ಪಣಿ ಮಾಡಿಕೊಂಡು ಭಾಷಣವನ್ನು ಬರೆದು ಶಿಕ್ಷಕನಿಂದ ತಿದ್ದಿಸಬೇಕಾಗಿತ್ತು. ನಂತರ ತೋಟದಲ್ಲೋ ಏಕಾಂತ ಸ್ಥಳದಲ್ಲೋ ಭಾಷಣ ಮಾಡುವ ರೂಢಿ ಮಾಡಿಕೊಳ್ಳಬೇಕಾಗಿತ್ತು. ಹೆಚ್ಚಿನವರು ಸಮವಯಸ್ಕರು, ಮಂತ್ರಿಗಳ ಮಕ್ಕಳು ಇತ್ಯಾದಿಯಿದ್ದು ವಾದ-ಪ್ರತಿವಾದದ ರೂಢಿಯನ್ನು ಮಾಡುತ್ತಿದ್ದರು. ಅರಸನಾದವನು, ಕಾವ್ಯಗೋಷ್ಠಿ, ಶಾಸ್ತ್ರವಿನೋದ, ವಿದ್ವತ್ ಸಭೆಗಳನ್ನು ಏರ್ಪಡಿಸಿ,[೩] ಹಲವು ಬಾರಿ ನಿರ್ಣಾಯಕನಾಗಿ ಮಾತನಾಡಬೇಕಾಗಿ ಬರುತ್ತಿದ್ದುದರಿಂದ ಈ ತರಬೇತಿ ಅತ್ಯವಶ್ಯವಿತ್ತು. ಅರಸುಕುಮಾರನು ಇತರರು ಹೇಳುವದನ್ನು ತಾಳ್ಮೆಯಿಂದ ಕೇಳುವಂತೆ ಪ್ರೋತ್ಸಾಹಿಸಲಾಗುತ್ತಿತ್ತು. ಚರ್ಚೆಯಲ್ಲಿಯೂ ಭಾಗವಹಿಸಬೇಕಾಗಿತ್ತು.

ತಾರುಣ್ಯದ ಹೊಸ್ತಿಲು ತಲುಪಿದ ರಾಜಕುಮಾರನಿಗೆ ಯುದ್ಧಶಾಸ್ತ್ರದ ನಿಕಟ ಪರಿಚಯ ಮಾಡಿಕೊಡಲಾಗುತ್ತಿತ್ತು. ಯುದ್ಧದ ಮಂತ್ರಾಲೋಚನೆ ರಹಸ್ಯವಾಗಿ, ಕಿಡಕಿ, ಬಾಗಿಲುಗಳು ಇಲ್ಲದ ಕೋಣೆಯಲ್ಲಿ, ಪುನರುಚ್ಚರಿಸುವ ಸಣ್ಣಪುಟ್ಟ ನಿರ್ಣಯಗಳನ್ನು ಅವನಿಗೆ ಬಿಡಲಾಗುತ್ತಿತ್ತು. ನಂತರ ತಂತ್ರಗಳನ್ನು ಸೂಚಿಸಲು ಕೇಳಿಕೊಂಡು, ಅರಸನು ಅಲ್ಪಸ್ವಲ್ಪ ಬದಲಾವಣೆ ಮಾಡಿ ಕಾರ್ಯಗತ ಮಾಡಲು ಒಪ್ಪಿಗೆ ಕೊಡುತ್ತಿದ್ದ. ಕಾಲ್ದಳದ ಸ್ಥಾನಮಾನ, ಅಶ್ವಸೇನೆ, ಗಜಸೇನೆಗಳ ಕಾರ್ಯವಿಧಾನ, ಮುಂಗಡವಾಗಿ ನಿರ್ಣಯಿಸಬೇಕಾಗಿತ್ತು. ಭಾರವಾದ ತೋಪುಗಳನ್ನು

ಸಾಗಿಸುವ ವಿಧಾನ, ಮದ್ದುಗುಂಡುಗಳ ಸುರಕ್ಷಿತತೆಯ ಬಗ್ಗೆಯೂ ತಲೆಕೆಡಿಸಿಕೊಳ್ಳಬೇಕಾಗಿತ್ತು. ಅರಮನೆಯ ಹೆಂಗಳೆಯರಿಂದ ತಿಲಕ ಹಚ್ಚಿಸಿಕೊಂಡು ಆರತಿ ಎತ್ತಿಸಿಕೊಂಡು ಹಿರಿಯರಿಗೆ ನಮಸ್ಕರಿಸಿ, ಆಶೀರ್ವಾದ ಪಡೆದು ಆತ ದಂಡಯಾತ್ರೆಗೆ ಹೊರಡಬೇಕಿತ್ತು. ಬಂಡೆದ್ದ ಮಾಂಡಲಿಕರನ್ನು ಮಣಿಸುವದು, ಹೊಸ ಪ್ರದೇಶಗಳನ್ನು ಆಕ್ರಮಿಸುವದು ಆತನ ಉಮೇದುವಾರಿಕೆಯ ದಿನಗಳಲ್ಲೇ ಕೈಕೊಂಡು, ಮುಂದೆ ಅರಸನಾಗುವ ಯೋಗ್ಯತೆಯನ್ನು ಸ್ಥಾಪಿಸಬೇಕಿತ್ತು. ವಿಜಯಮಾಲೆ ಕೊರಳಿಗೆ ಬಿದ್ದರೆ ಮದವೇರುವಂತಿಲ್ಲ. ಸೋತ ಅರಸನನ್ನು ಗೌರವದಿಂದ ಕಾಣಬೇಕು. ಆದರೆ ಕಪ್ಪಕಾಣಿಕೆ ಪಡೆಯಬೇಕು. ಸೈನಿಕರು ಗೆದ್ದ ಸಂಭ್ರಮದಲ್ಲಿ ಸುರಾಪಾನದಿಂದ ಮತ್ತರಾಗಿ ಕೊಲೆ, ಸುಲಿಗೆ, ಲೂಟಿ, ಅತ್ಯಾಚಾರಗಳು ನಡೆಯದಂತೆ ಎಚ್ಚರ ವಹಿಸಬೇಕು. ಗೆದ್ದವರ ಅಂತಃಪುರದ ಹೆಂಗಳೆಯರನ್ನು ಬಯಸಬಾರದು. ಇಂಥ ವಿಚಾರಗಳತ್ತ ವಿಶೇಷ ಗಮನ ಕೊಡಲಾಗುತ್ತಿತ್ತು. ಅರಸುಮಗನ ವಿಜಯಗಳನ್ನು ಪ್ರಜೆಗಳು ಉತ್ಸಾಹದಿಂದ ಆಚರಿಸುವ ಪರಿಪಾಠವಿತ್ತು.

ಸಕಲ ಚರಾಚರ ವಿಶ್ವದ ಪರಿಚಯ ರಾಜಕುಮಾರನಿಗೆ ಇರಬೇಕಾಗಿತ್ತು. ಆ ತರ ಅರಿಯಬೇಕಾದ ವಿಷಯಗಳು ಮತ್ತು ಸಾಧಿಸಬೇಕಾದ ವಿದ್ಯೆಗಳನ್ನು ನೋಡಿದರೆ ಆತನ ವಿದ್ಯಾರ್ಥಿ ಜೀವನ ಅತ್ಯಂತ ಕಠಿಣವಾಗಿತ್ತೆಂದು ತೋರುತ್ತದೆ. ಕೆಲವೊಮ್ಮೆ ಬೇಟೆಗೆ ಕಳಿಸುತ್ತಿದ್ದರು. ಬಹುಶಃ ರಾಜಕುಮಾರರು, ಅತ್ಯಂತ ಆತುರತೆಯಿಂದ ಎದುರು ನೋಡುತ್ತಿರುವ ಸಂದರ್ಭಗಳು ಇದ್ದಿರಬೇಕು ಇವು. ಅವನಿಗೆ ಆಗಲೇ ಪ್ರಾಣಿ ಮತ್ತು ಸಸ್ಯಗಳ ಬಗ್ಗೆ ಪರಿಚಯ ಮಾಡಿಕೊಟ್ಟಿದ್ದರಿಂದ ಬೇಟೆಯಲ್ಲಿ ಅದರ ಒಳ್ಳೆಯ ಪ್ರಯೋಜನವಾಗುತ್ತಿತ್ತು. ಮೊಲಗಳು ಯಾವ ಪೊದೆಯಲ್ಲಿ ಅಡಗಿರುತ್ತವೆ? ಚಿಗರೆಗಳು ಎಂಥ ಎಲೆಗಳನ್ನು ಇಷ್ಟಪಡುತ್ತವೆ? ಚಿರತೆ ಎಂಥ ಮರವನ್ನು ಏರುತ್ತದೆ? ಹುಲಿಗೆ ಮಾನವನ ಸುಳಿವು ಸಿಗದಂತೆ ಏನು ಮಾಡಬೇಕು? ಕಾಡಾನೆಗಳು ಇರುವಲ್ಲಿ ಯಾವ ಮುನ್ನೆಚ್ಚರಿಕೆ ವಹಿಸಬೇಕು? ಕಾಡೆಮ್ಮೆಗಳ ಬೇಟೆ ಹೇಗೆ ಮಾಡಬೇಕು? ಹಕ್ಕಿಗಳಿಗೆ ನೋವಾಗದಂತೆ ಹೇಗೆ ಬಂಧಿಸಬೇಕು? ಎಂದೆಲ್ಲ ಆತ ಅರಿತಿರಬೇಕಾಗುತ್ತಿತ್ತು. ಹುಲಿ, ಚಿರ್ಚು, ಕಾಡುಹಂದಿ, ಕಾಡಾನೆಗಳಿಂದ ರಕ್ಷಣೆ ಪಡೆಯಬೇಕು. ತನ್ನ ಸಂಗಡಿಗರು ಪಶು-ಪಕ್ಷಿಗಳನ್ನು ಮನಸ್ವೀ ಕೊಲ್ಲದಂತೆ ಅವನು ಎಚ್ಚರಿಕೆ ವಹಿಸಬೇಕಾಗುತ್ತದೆ. ಸುರಕ್ಷಿತ ಸ್ಥಳದಲ್ಲಿ ಡೇರೆ ಹಾಕಿ, ಬೆಂಕಿ ಒಟ್ಟಿ, ಮಾಂಸದ ಭೋಜನ ಏರ್ಪಡಿಸಲಾಗುತ್ತದೆ. ರಾತ್ರಿ ಹರಟೆ, ಹಾಡುಗಾರಿಕೆ, ಕುಣಿತ, ಚದುರಂಗದಾಟಗಳು ಯಥೇಷ್ಟ ನಡೆಯುತ್ತವೆ. ಅರಸುಮಗನು ಹಿತಮಿತವಾಗಿ ಮದ್ಯ ಸೇವಿಸಿದರೆ ಯಾರೂ ಆಕ್ಷೇಪವೆತ್ತಲಾರರು! ಬೇಟೆಯ ಸಂದರ್ಭದಲ್ಲಿ ಕೆಲವೊಮ್ಮೆ ಅಂತಃಪುರದ ಮಹಿಳೆಯರೂ ಭಾಗವಹಿಸುತ್ತಿದ್ದರು. ಆಗ ಅವರ ಸಂರಕ್ಷಣೆಯ ಭಾರವೂ ರಾಜಕುಮಾರರ ಮೇಲಿರುತ್ತಿತ್ತು. ಬೇಟೆಯ ಶ್ರಮದಿಂದ ಸಂಪೂರ್ಣ ವಿಶ್ರಾಂತಿ ಪಡೆದು ರಾಜಕುಮಾರನು ಜಿಂಕೆಯ ಚರ್ಮ, ಕಾಡುಕೋಣದ ಕೋಡುಗಳು, ಹುಲಿಯ ಉಗುರು, ತೊಗಲು, ಪಂಜರದಲ್ಲಿ ಬಂಧಿಸಿದ ಹಕ್ಕಿಗಳೊಂದಿಗೆ ಅರಮನೆಗೆ ಹಿಂದಿರುಗುತ್ತಿದ್ದ.

ದೇಶ ಪರ್ಯಟನ, ಭಾವೀ ಅರಸನ ಶಿಕ್ಷಣಕ್ರಮದಲ್ಲಿ ಸೇರಿರುತ್ತಿತ್ತು. ಇದರಿಂದ ಅವನಿಗೆ ವಿವಿಧ ರಾಜ್ಯಗಳ ಪರಿಚಯವಾಗುತ್ತಿತ್ತಲ್ಲದೇ ಲೋಕಜ್ಞಾನವೂ ಹೆಚ್ಚುತ್ತಿತ್ತು. ಮಿತ್ರರಾಜ್ಯಗಳಿಗೆ ಅತಿಥಿಯಾಗಿ ಹೋಗಿ ಅಲ್ಲಿರುವ ಆಕರ್ಷಕ ಮತ್ತು ಯಾತ್ರಾಸ್ಥಳಗಳನ್ನು ಸಂದರ್ಶಿಸುತ್ತಿದ್ದ. ರಾಜರೊಂದಿಗೆ ಸಂಧಾನ ನಡೆಸುತ್ತಿದ್ದ. ತನ್ನ ತಂದೆಯ ರಾಯಭಾರಿಯಾಗಿ ಕೆಲಸ ಮಾಡುತ್ತಿದ್ದ. ವೈರಿರಾಜ್ಯದಲ್ಲಿ ಛದ್ಮವೇಷಧಾರಿಯಾಗಿ ಸಂಚರಿಸುವಾಗ ಅತಿ ಎಚ್ಚರಿಕೆಯಿಂದ ನಡೆದುಕೊಳ್ಳಬೇಕಾಗುತ್ತಿತ್ತು. ಸಾಧ್ಯವಿದ್ದರೆ ಗುಪ್ತ ಸಮಾಚಾರ ಸಂಗ್ರಹಿಸಬೇಕಾಗುತ್ತಿತ್ತು. ತನ್ನ ಇರವು ಸಂದೇಹಾಸ್ಪದವಾಗಿದೆ! ಅನಿಸಿದೊಡನೆ ಕಂಬಿ ಕೀಳಬೇಕಾಗುತ್ತಿತ್ತು. ಯಾತ್ರೆ, ಪ್ರವಾಸಗಳಿಂದ ರಾಜಕುಮಾರನಿಗೆ ಜೀವನದ ಕಷ್ಟ ಕಾರ್ಪಣ್ಯಗಳ ನಿಕಟವಾದ ಪರಿಚಯವಾಗುತ್ತಿತ್ತಲ್ಲದೇ, ತಾನು ಗೆದ್ದು ವಿಸ್ತರಿಸಬೇಕಾದ ಪ್ರದೇಶಗಳ ಕಲ್ಪನೆಯೂ ಬರುತ್ತಿತ್ತು.

ರಾಜಕುಮಾರರು ಪಡೆಯಬೇಕಾದ ಶಿಕ್ಷಣದ ವಿವರಗಳಿಂದ ಎಲ್ಲರೂ, ವಿಕ್ರಮಾದಿತ್ಯ, ಕೃಷ್ಣದೇವರಾಯ ಅಥವಾ ಟಿಪ್ಪುಸುಲ್ತಾನರು ಆಗುತ್ತಾರೆಂಬ ನಿಯಮವೇನೂ ಇಲ್ಲ. ಇಷ್ಟೆಲ್ಲ ಅವಕಾಶಗಳನ್ನು ಕಲ್ಪಿಸಿಕೊಟ್ಟರೂ ಕುಮಾರರು ಎಷ್ಟು ಅದರ ಲಾಭ ಪಡೆಯುತ್ತಿದ್ದರು? ಎನ್ನುವದು ಮುಖ್ಯ. ಶೂರ, ಧೀರ, ಪರಾಕ್ರಮಿ, ವಿನಯವಂತ, ಧಾರ್ಮಿಕ ಪ್ರವೃತ್ತಿಯ ಹುಡುಗರು ಪೂರ್ವಜನ್ಮದ ಪುಣ್ಯದಿಂದಲೇ ದೊರಕುತ್ತಾರೆ![೪] ಎಂಬುದು ಅನುಭವಿ ಅರಸನ ಮಾತು. ಸವಿ, ಸುಖ, ಸುಳ್ಳುಗಾರರಿಂದ ದೂರವಿರಲಾರದ ಯುವರಾಜನಿಗೆ ಸಕಲ ಸುಖ ಸೌಕರ್ಯಗಳನ್ನು ಪೂರೈಸಿ ಅರಮನೆಯೆಂಬ ಬಂಧನದಲ್ಲಿ ಸದಾಕಾಲ ಇರುವ ಏರ್ಪಾಡು ಮಾಡಲಾಗುತ್ತಿತ್ತು.[೫] ಎಲ್ಲ ಶಿಕ್ಷಣ ಕ್ರಮವನ್ನು ಚಾಚೂ ತಪ್ಪದೇ ಪಾಲಿಸಿದವರು ಉತ್ತಮ ಅರಸರಾಗುತ್ತಿದ್ದರಲ್ಲದೇ ತಮ್ಮ ಆಸಕ್ತಿಯ ಕ್ಷೇತ್ರದಲ್ಲೂ ಹೆಸರು ಗಳಿಸುತ್ತಿದ್ದರು. ಚಾಲುಕ್ಯ ವಿಕ್ರಮಾದಿತ್ಯನು ಹಲವಾರು ಲಿಪಿಗಳನ್ನು ಕರಗತ ಮಾಡಿಕೊಳ್ಳುವದರ ಜೊತೆಗೆ ರಾಣಿಯರನ್ನೆಲ್ಲ ಆಡಳಿತಗಾರ್ತಿಯರನ್ನಾಗಿ ನೇಮಿಸಿದ್ದ. ನಾರೀಶಕ್ತಿಯನ್ನು ಮನಗಂಡವನಾಗಿದ್ದ. ಸತ್ಯವಾಕ್ಯ ಗಂಗನು ವಿವಿಧ ವಾದ್ಯಗಳನ್ನು ನುಡಿಸಿ, ನೃತ್ಯ ಸಂಗೀತ ನಿರ್ದೇಶಿಸುವದರಲ್ಲಿ ಆಸಕ್ತನಾಗಿದ್ದ. ಚಾಲುಕ್ಯ ಭೂಲೋಕ ಮಲ್ಲನು ಸಂಗೀತ ಸಾರ್ವಭೌಮನೆನಿಸಿಕೊಳ್ಳುವದರಲ್ಲಿ ಅಲ್ಲದೇ ಮಾನಸೋಲ್ಲಾಸವೆಂಬ ಅತ್ಯಂತ ಉಪಯುಕ್ತ ವಿಶ್ವಕೋಶದ ನಿರ್ಮಾಣಕ್ಕೆ ಕಾರಣನಾಗಿ ಚಿರಸ್ಮರಣೀಯನಾಗಿದ್ದಾನೆ. ಶಿಲಾಹಾರ ದೊರೆ ಅಪರಾರ್ಕನು ಯಾಜ್ಞ್ಯವಲ್ಕ್ಯಸ್ಮೃತಿಗೆ ಟೀಕಾಕಾರನೆನಿಸಿಕೊಳ್ಳುತ್ತಾನೆ. ಕೃಷ್ಣದೇವರಾಯ, "ಆಮುಕ್ತ ಮಾಲ್ಯದ" ಕಾವ್ಯ ರಚಿಸಿದ. ಬಸವಪ್ಪ ನಾಯಕನ ಆಸಕ್ತಿಯಿಂದ 'ಶಿವತತ್ವ ರತ್ನಾಕರ' ಸಿದ್ಧವಾಯಿತು. ಚಿಕ್ಕದೇವರಾಯನ ಸಂಗೀತಾಸಕ್ತಿ ಶ್ರೇಷ್ಠ ತರಗತಿಯದಾಗಿತ್ತಲ್ಲದೇ ಆತನ ವೀಣೆ "ಕಲಾವತಿ"ಯ ವಾದನ ಎಂಥವರನ್ನೂ ಮಂತ್ರಮುಗ್ಧ ಮಾಡಿಬಿಡುತ್ತಿತ್ತು.[೬] ಅನೇಕ ಕಾವ್ಯ, ಸಾಹಿತ್ಯ ಕೃತಿಗಳು ಆಳರಸರ ಸಂತುಷ್ಟಿಗಾಗಿಯೋ ಪ್ರೋತ್ಸಾಹದಿಂದಲೋ ರಚನೆಯಾಗಿವೆ. ಇವುಗಳಿಂದ ಮಾಹಿತಿ ಪಡೆಯುವಾಗ ಎಚ್ಚರಿಕೆ ವಹಿಸುವದು ಅವಶ್ಯ. ಶಾಸನಗಳಲ್ಲಿ ಅರಸರು ಎಡಗೈಯಿಂದ ತೆಂಗಿನ ಮರ ಉರುಳಿಸುವ, ಮತ್ತು ಮದವೇರಿದ ಆನೆಯನ್ನು ನಿಯಂತ್ರಿಸುವ ಘಟನೆಗಳೆಲ್ಲ ನಮೂದಿತವಾಗಿರುತ್ತವೆ.[೭]

ಪ್ರಾಚೀನ ಕಾಲದ ರಾಜಕುಮಾರರನ್ನು ತಕ್ಷಶಿಲೆ, ನಾಲಂದ, ಕಾಶಿ, ಪಾಟಲಿಪುತ್ರ, ಕಾಂಚಿಗಳಂತಹ ಸ್ಥಳಗಳಿಗೆ ವಿದ್ಯಾಭ್ಯಾಸಕ್ಕೆ ಕಳಿಸುತ್ತಿದ್ದರು. ದೂರ ಪ್ರಯಾಣ ಸುರಕ್ಷಿತವಾಗಿರಲಿಲ್ಲ. ಚಿಕ್ಕ, ಪುಟ್ಟ, ತುಂಡರಸರು ಅಲ್ಲಲ್ಲಿ ಕಾಣಿಸಿಕೊಂಡು, ಎಲ್ಲರೂ ಮಿತ್ರಭಾವನೆ ತಾಳಿರುತ್ತಿರಲಿಲ್ಲ. ಹೀಗಾಗಿ ಕಾಲಕ್ರಮೇಣ ರಾಜ್ಯದಲ್ಲಿಯೇ ರಾಜಕುಮಾರರ ಶಿಕ್ಷಣದ ಏರ್ಪಾಡು ಮಾಡಲಾಯಿತು. ಪಟ್ಟಕ್ಕೆ ಬಾಧ್ಯಸ್ಥರಾದ ಎಳೆಯರು ಅಧಿಕ ಪ್ರಮಾಣದಲ್ಲಿ ಇರುತ್ತಿರಲಿಲ್ಲ. ಹೀಗಾಗಿ ಜೊತೆಗಾಗಿ, ಸ್ಪರ್ಧೆಗಾಗಿ ಪ್ರಧಾನಮಂತ್ರಿ, ಸೇನಾಪತಿಗಳ ಮಕ್ಕಳನ್ನು ಈ ಶಾಲೆಗೆ ಕಳಿಸಲಾಗುತ್ತಿತ್ತು. ಇಂಥ ಶಿಕ್ಷಣ ದೊರೆತವರು ದಕ್ಷ ಆಡಳಿತಗಾರರಾಗುತ್ತಿದ್ದರು. ಆದರೆ ಇದಕ್ಕೂ ಅಪವಾದಗಳಿವೆ. ಬಾಹ್ಮನಿ ರಾಜ್ಯದ ಮಂತ್ರಿಯಾಗಿದ್ದ ಮಹಮ್ಮದ ಗವಾನನು ಸ್ವಪ್ರಯತ್ನದಿಂದಲೇ ವಿಶ್ವಖ್ಯಾತಿ ಪಡೆದಿದ್ದ. ಟಿಪ್ಪುಸುಲ್ತಾನನ ದಕ್ಷ ದಿವಾಣ ಪೂರ್ಣಯ್ಯನು ತೀರ ಬಡ ಕುಟುಂಬದಲ್ಲಿ ಜನಿಸಿದ್ದಲ್ಲದೇ ಚಿಕ್ಕಂದಿನಲ್ಲಿ ತಂದೆಯನ್ನು ಕಳೆದುಕೊಂಡಿದ್ದ. ತಾಯಿಯು ಊರ ಮಠದಲ್ಲಿ ವಿದ್ಯೆಗೆಂದು ಸೇರಿಸಿದಳು. ಅಲ್ಲಿ ಕಲಿತಾದ ಮೇಲೆ, ಆನಂದಶೆಟ್ಟಿಯೆಂಬ ವ್ಯಾಪಾರಿಯ ಬಳಿ ಉಮೇದುವಾರನಾಗಿ ಸೇರಿದ. ಆದರೆ ಆತನ ಜಾಣತನ, 'ಕಚೇರಿ' ಕೆಲಸಕ್ಕೆ ಹೇಳಿ ಮಾಡಿಸಿದಂತಹದು ಎಂದು ಮನಗಂಡ ಶೆಟ್ಟಿ ಸರಕಾರಿ ಸೇವೆಗೆ ಹಚ್ಚಿದ.[೮] ಪೂರ್ಣಯ್ಯನ ಸ್ವಾಮಿನಿಷ್ಠೆ, ಚರಿತ್ರೆಯಲ್ಲಿ ಪ್ರಸಿದ್ಧವಿದೆ.

## ಸಂದರ್ಭ ಸೂಚಿ

೧. "ಶರೀರ ರಕ್ಷಾ ವ್ಯಾಜೇನ ರಕ್ಷಿಣೋಸ್ಯ ನಿಯೋಜಯೇತ್" ಅಗ್ನಿಪುರಾಣ: ಅಧ್ಯಾಯ ೨೨೫, ಪದ್ಯ ೧-೨೩, ಪು.೩೨೮.

೨. ಚಿಕ್ಕದೇವರಾಯ ವಂಶಾವಳಿ: ಚಿಕ್ಕದೇವರಾಯನ ಅಭ್ಯಾಸ, ಪು.೧೦೧-೨.

೩. ಕಾವ್ಯ ಮೀಮಾಂಸಾ: ಪು.೫೪-೫೫, ಮಾನಸೋಲ್ಲಾಸ II ಶಾಸ್ತ್ರವಿದ್ಯಾ ವಿನೋದ ಪದ್ಯ ೧೯೯-೨೦೦, ಪು.೧೭೧.

೪. ವಿನೀತಾಃ ಶ್ರುತಸಂಪನ್ನಾಃ ಶಾಸ್ತ್ರೇಷುಚ ಕೃತಶ್ರಮಾಃ
ಗಜಾಶ್ವರೋಹಣೇ ದಕ್ಷಾಃ ಲಭ್ಯಂತೆ ಸುಕೃತೈಃ ಸುತಾಃ॥
ಮಾನಸೋಲ್ಲಾಸ II, ಪದ್ಯ ೧೨೯೮-೧೩೦೦, ಪು.೧೧೧.

೫. "ಅಶಕ್ಯಂ ತುಗುಣಾಧಾನಂ ಕರ್ತುಂ ತಂ ಬಂಧಯೇತ್ ಸುಖೈಃ" ಅಗ್ನಿಪುರಾಣ ಅಧ್ಯಾಯ ೨೨೫, ಪದ್ಯ ೨೩, ಪು.೩೩೮.

೬. ಚಿಕ್ಕದೇವರಾಯ ವಂಶಾವಳಿ, ಪು.೧೦೩-೬.

೭. ರಕ್ಕಸಗಂಗನು ತೆಂಗು, ಕೌಂಗು(ಅಡಿಕೆ ಮರಗಳನ್ನು) ಕಿತ್ತು ಬಿಸುಟು ಎಡಗೈಯಲ್ಲಿ ಮದವೇರಿದ ಆನೆಯು ಓಡಿಬರುತ್ತಿದ್ದಾಗ ಹಿಡಿದು ನಿಲ್ಲಿಸುತ್ತಿದ್ದ. "ಸಾಮಾನ್ಯ ನೃಪನೇ ರಕ್ಕಸಗಂಗಂ?" ಎಂದು ಶಾಸನವೊಂದು ಪ್ರಶ್ನಿಸುತ್ತದೆ. Ec VII ಶಿ ೪, ಪು.೧೩.

೮. ಎಚ್. ದೇವೀರಪ್ಪ "ಮ್ಯಾನುಸ್ಕ್ರಿಪ್ಟ್ಸ್ ಎಂಡ್ ರಿಕಾರ್ಡ್ಸ್ ಆಫ್ ಕರ್ನಾಟಕ" ಮ್ಯಾಕಂಝಿ ಕಲೆಕ್ಷನ್-ಲೇಖನ, ಗ್ರಂಥ-"ಎಜ್ಯುಕೇಶನ್ ಎಂಡ್ ಕಲ್ಚರ್"- ಧಾರವಾಡ, ೧೯೫೯, ಪು.೩೪೪.

# ೭. ಸಾಮೂಹಿಕ ಶಿಕ್ಷಣ

## (ತಪೋವನ, ಶಾಲೆ, ಅಗ್ರಹಾರ, ಬ್ರಹ್ಮಪುರಿ, ಮಠಗಳು)

ವೇದಕಾಲದಿಂದಲೂ ನಾಡಿನ ಶಿಕ್ಷಣ ಪದ್ಧತಿ, ವಿವಿಧ ಹಂತಗಳಲ್ಲಿ ಬೆಳೆಯುತ್ತ ವಿಕಾಸಗೊಂಡಿದೆ. ಆದರೆ ಅದು ತುಳಿದು ಬಂದ ದಾರಿ ಎಲ್ಲ ಕಡೆ ಸ್ಫುಟವಾಗಿಲ್ಲ. ಸಂಶೋಧನೆಯ ಆಧಾರಸ್ತಂಭಗಳಾದ ಪುರಾತನ ಅವಶೇಷಗಳು, ಶಾಸನಗಳು, ಪ್ರವಾಸಿಗರ ಬರವಣಿಗೆ, ಸಾಹಿತ್ಯಗಳು ಕೆಲವೆಡೆ ವಿಸ್ತೃತ ವಿವರಗಳನ್ನು ಪೂರೈಸಿದರೆ, ಕೆಲವೆಡೆಯಲ್ಲಿ ಸಂಪೂರ್ಣ ಮೌನವನ್ನು ಆಚರಿಸಿಬಿಡುತ್ತವೆ. ಆದರೆ ಆಧಾರ-ಸಾಕ್ಷಿಗಳು ದೊರೆತಿಲ್ಲ ಎಂದ ಮಾತ್ರಕ್ಕೆ ಆಗ ಶಿಕ್ಷಣವಿರಲಿಲ್ಲವೆಂದು ನಿರ್ಧರಿಸುವಂತಿಲ್ಲ. ಗಂಗಾನದಿಯಂತೆ ಮನುಷ್ಯನ ಚಿಕಿತ್ಸಕ ಬುದ್ಧಿಗೆ ಸವಾಲಾದ ಶಿಕ್ಷಣ-ಪದ್ಧತಿ ನಿತ್ಯನೂತನವಾಗಿ ಹರಿಯುತ್ತಿರುತ್ತದೆ. ವೇದಕಾಲದಲ್ಲಿ, ತಪೋವನ-ಗುರುಕುಲಗಳಲ್ಲಿ ಅದು ಕೆಲವರಿಗೇ ಲಭ್ಯವಿದ್ದು, ಬುದ್ಧಿವಿಕಾಸದ ಮೇಲೆ ಒತ್ತುಕೊಡುವಂತಹದಾಗಿತ್ತು. ಕ್ರಮೇಣ ಸಂಸ್ಥೆಗಳ ಮೂಲಕ ಸಂಘಟಿತ ಶಿಕ್ಷಣ ಲಭ್ಯವಾಯಿತು. ಅಗ್ರಹಾರಗಳಲ್ಲಿ ಪ್ರಾಥಮಿಕ ಶಿಕ್ಷಣದೊಂದಿಗೆ ಉಚ್ಚ ಶಿಕ್ಷಣದ ಏರ್ಪಾಡೂ ಮಾಡಲಾಯಿತು. ಸಂಸ್ಕೃತ ಭಾಷೆಯೊಂದಿಗೆ ಸ್ಥಳೀಯ ಭಾಷೆಯನ್ನೂ ಕಲಿಸಲಾರಂಭಿಸಲಾಯಿತು. ಗುರುಶಿಷ್ಯರ ವಾಸ-ಅಧ್ಯಯನಗಳಿಗೆ ಸೌಕರ್ಯವನ್ನು ಪೂರೈಸಲಾಯಿತು. ಮಠದಲ್ಲಿ ಒಂದೆಡೆಯಂತೂ ಶಿಕ್ಷಣಕ್ಕೆ ಸಂಬಂಧವಿಲ್ಲದ ಕುರುಡ, ಮೂಕ, ಅನಾಥರೂ ಆಶ್ರಯಪಡುವಂತೆ ಆಯಿತು. ಅಗ್ರಹಾರಗಳು, ಹಳ್ಳಿ ಗ್ರಾಮಗಳಲ್ಲಿ ಇದ್ದು ಸ್ಥಳೀಯ ಶಿಕ್ಷಣದ ಅವಶ್ಯಕತೆಗಳನ್ನು ನೋಡಿಕೊಂಡವು. ಊರುಗಳಲ್ಲಿ, ಬ್ರಹ್ಮಪುರಿಗಳು, ಕೇರಿ ಕೇರಿಗಳಲ್ಲಿ ಇದ್ದು ತಮ್ಮದೇ ವಿಧದಲ್ಲಿ ವಿದ್ಯೆಯ ಅನುಕೂಲ ಹೊಂದಿದ್ದವು. ಕಾಳಾಮುಖ ಗುರುಗಳು ಮಠ, ದೇವಸ್ಥಾನಗಳ ಮೂಲಕ ಉಚ್ಚಶಿಕ್ಷಣ ಪರಂಪರೆಯನ್ನು ಮುಂದುವರಿಸಿಕೊಂಡು ಹೋಗುವದರಲ್ಲಿ ತುಂಬ ಯಶಸ್ವಿಯಾದರು. ವೀರಶೈವ ಕ್ರಾಂತಿಯ ನಂತರ ಶಿಕ್ಷಣ ಪದ್ಧತಿಯಲ್ಲಿ ಕಾಯಕಕ್ಕೆ ಸ್ಥಾನವನ್ನು ಕಲ್ಪಿಸಿಕೊಟ್ಟು ಉದರ ನಿರ್ವಹಣೆಯ ವ್ಯವಸ್ಥೆಯಾಗುವಂತೆ ಮಾಡಿದ್ದರಿಂದ, ಓದು-ಬರಹಗಳು ಜನಸಾಮಾನ್ಯರಿಗೂ ಎಟುಕುವಂತಾಯಿತು. ಮಹಾತ್ಮಾ ಗಾಂಧಿಯವರು ಇಂಥ ವೃತ್ತಿಮೂಲ ಶಿಕ್ಷಣವನ್ನೇ ಭಾರತೀಯರಿಗೆಲ್ಲ ಕೊಡಮಾಡುವ ಕನಸು ಕಂಡಿದ್ದರು.

ಹಿಂದಿನಕಾಲದಲ್ಲಿ ಋಷಿ-ಮುನಿಗಳು ತಪಸ್ಸು ಮಾಡುವ ವನಕ್ಕೆ ತಪೋವನ ಎಂಬುದು ಅನ್ವರ್ಥಕನಾಮ. ಜನವಸತಿಯಿಂದ ದೂರವಿದ್ದು ಪ್ರಶಾಂತವಾದ ತಾಣವನ್ನು ಇದೇ

ಹೆಸರಿನಿಂದ ಗುರುತಿಸಲಾಗುತ್ತಿತ್ತು. ನಂತರದ ಶತಕಗಳಲ್ಲಿ ವೇದಗಳ ಜೊತೆಗೆ, ಧಾರ್ಮಿಕವಲ್ಲದೇ ಇತರ ಸಾಮಾಜಿಕ, ನೈತಿಕ ವಿಷಯಗಳ ಬೋಧೆ ಮತ್ತು ಅಧ್ಯಯನಗಳು ಸೇರ್ಪಡೆಯಾದ ಬೌದ್ಧಕಾಲದಲ್ಲಿ ಸುಸಂಘಟಿತ ವಿದ್ಯಾಸಂಸ್ಥೆಗಳು ಹೆಚ್ಚು ಹೆಚ್ಚಾಗಿ ಕಾಣಿಸಿಕೊಂಡು, ಅವುಗಳ ಪ್ರಭಾವ ವೈದಿಕ, ಜೈನ ವಿದ್ಯಾಪದ್ಧತಿಗಳ ಮೇಲೂ ಆಯಿತು. ಶಾಲೆ, ಅಗ್ರಹಾರ, ಮಠ, ಘಟಿಕಾಸ್ಥಾನಗಳು ಕಾಣಿಸಿಕೊಂಡವು. ಜೊತೆಗೆ ತಪೋವನಗಳೂ ಕೆಲವು, ಮಧ್ಯಯುಗದಲ್ಲಿ ಮುಂದುವರಿದವು.

ರಾಷ್ಟ್ರಕೂಟರ ಆಳ್ವಿಕೆಯಲ್ಲಿ (ಕ್ರಿ.ಶ.೯೭೬) ಪೂರ್ವ ಬಂಗಾಲದ ಭಟ್ಟತಲಾಗ್ರಾಮದ ನಿವಾಸಿ, ದಂಡಾಸನಿ ಎಂದು ಹೆಸರಾದ ಘನವಿದ್ವಾಂಸ, ಗದಾಧರಯತಿ ಎಂಬಾತ ಬಳ್ಳಾರಿಯ ಹತ್ತಿರದ ಕೊಳಗಲ್ಲಿನಲ್ಲಿ ಕಾರ್ತಿಕೇಯ ತಪೋವನವನ್ನು ಸ್ಥಾಪಿಸಿದ. ಕುಡತಿನಿ ಗ್ರಾಮವನ್ನು ಒಳಗೊಂಡ ಈ ತಪೋವನದಲ್ಲಿ ಬಾವಿ, ಕೆರೆ, ವಿದ್ಯಾದಾನದ ಛತ್ರ ಮತ್ತು ನಿವೇಶನಗಳಿದ್ದವು.[೧] ಚಾಲುಕ್ಯರ ಕಾಲದಲ್ಲಿ ಇನ್ನಷ್ಟು ದತ್ತಿಗಳು ದೊರೆತು ಒಂದು ಮಠವೂ ಸ್ಥಾಪಿತವಾಯಿತು. ಸ್ಥಳೀಯ ಅಧಿಕಾರಿಗಳು ನಿಯಮಿತವಾಗಿ ಇದಕ್ಕೆ ಧನಸಹಾಯ ಮಾಡುತ್ತಿದ್ದರಲ್ಲದೇ ಬಿಕ್ಕಟ್ಟಿನ ಪ್ರಸಂಗಗಳಲ್ಲಿ ತಪೋವನದ ಯತಿಗಳ ಸಲಹೆ-ಸೂಚನೆಗಳನ್ನು ಪಡೆಯುತ್ತಿದ್ದರು. ಗದಾಧರ ಯತಿಯನ್ನು ಲೋಹಾಸನಿ ಎಂದೂ ಕರೆಯಲಾಗಿದೆ.[೨] ಸತತವಾಗಿ ಎರಡೂವರೆ ಶತಕಗಳವರೆಗೆ ವಿದ್ಯಾದಾನ ಮಾಡಿದ ಕೀರ್ತಿ ಈ ತಪೋವನಕ್ಕೆ ಸಲ್ಲುತ್ತದೆ.

ಬೆಳಗಾವಿ ಜಿಲ್ಲೆಯ ಸೊಗಲದ ಸುವರ್ಣಾಕ್ಷಿ ತಪೋವನ ಅತ್ಯಂತ ರಮ್ಯವಾಗಿತ್ತು. ಅಲ್ಲಿ ಸತತವಾಗಿ ನಡೆಯುವ ಪಾಠ-ಪ್ರವಚನಗಳ ಪ್ರಭಾವ, ಪರಿಸರದ ಪಶು-ಪಕ್ಷಿಗಳ ಮೇಲೆ ಅಪಾರವಾಗಿತ್ತು. ಶಾಸನದ ಪ್ರಕಾರ ಅಲ್ಲಿಯ ಕೋಗಿಲೆಗಳು, ಕುಹೂ ಕೂಹೂ ಎಂದು ಪ್ರಿಯತಮೆಯನ್ನು ಕರೆಯುವ ಬದಲು ನಿಷ್ಠಾವಂತ ಜೀವನದ ಹಿರಿಮೆಯನ್ನು ಕುರಿತು ಹಳ್ಳಿಗರಿಗೆ ಎಚ್ಚರಿಕೆಯ 'ಪುಗಲ್' ಕೊಡಲಾರಂಭಿಸಿದವು. ಗಿಳಿಗಳು ಗಿಳಿಪಾಠದ ಬದಲು ವೇದಾಭ್ಯಾಸದಲ್ಲಿ ತೊಡಗಿದವಂತೆ. ಕೋತಿಗಳು ಕಪಿಚೇಷ್ಟೆಯನ್ನು ಮರೆತು ಗುರು-ಶಿಷ್ಯರಿಗೆ ನೀರು ತಂದುಕೊಡುತ್ತಿದ್ದವಂತೆ. ಧನಗರ ಕಂಚಿಯಬ್ಬೆಯೆಂಬಾಕೆ ಕ್ರಿ.ಶ.೯೮೪ರಲ್ಲಿ ಇಲ್ಲಿಯ ವಿದ್ಯಾರ್ಥಿಗಳ ಊಟ-ಉಪಚಾರಕ್ಕೆ ಐದುನೂರು ಕಮ್ಮ ಭೂಮಿಯನ್ನು ದಾನಮಾಡಿದಳು.[೩] ಒಂದೂಕಾಲು ಶತಮಾನದ ನಂತರವೂ ಈ ವಿದ್ಯಾಸಂಸ್ಥೆ ಊರ್ಜಿತಾವಸ್ಥೆಯಲ್ಲಿ ಇದ್ದುದರಿಂದ, ಅಲ್ಲಿಯ ನಿವಾಸಿಗಳ ಆಹಾರ, ಬಟ್ಟೆ-ಬರೆ, ಅಗಸರು, ಕ್ಷೌರಿಕರ ಸೇವೆಯನ್ನು ಕೊಡಮಾಡಿ, ಅದಕ್ಕಾಗಿ ಇನ್ನಷ್ಟು ಭೂಮಿಯನ್ನು ಕ್ರಿ.ಶ.೧೧೨೧ರಲ್ಲಿ ಕೊಡಮಾಡಲಾಯಿತು. ಹದಿಮೂರನೆಯ ಶತಕದವರೆಗೂ ತಪೋವನಗಳು ಕಾರ್ಯಾಚರಣೆಯಲ್ಲಿದ್ದವು.

ಪೂಜೆ, ಪುನಸ್ಕಾರಗಳು ಪ್ರಧಾನವಾಗಿದ್ದ ದೇವಾಲಯಗಳು ಬರುಬರುತ್ತ ಇತರ ಸಾಂಸ್ಕೃತಿಕ ಚಟುವಟಿಕೆಗಳನ್ನು, ಶಿಕ್ಷಣವನ್ನು ತಮ್ಮ ಕಾರ್ಯವಿಧಾನದಲ್ಲಿ ಸೇರಿಸಿಕೊಂಡವು. ಬೌದ್ಧ ಮತ್ತು ಜೈನ ಧಾರ್ಮಿಕ ಕೇಂದ್ರಗಳು ಯಶಸ್ವಿಯಾಗಿ ಮಾಡುತ್ತಿದ್ದ ವಿದ್ಯಾದಾನ ಈ ಬದಲಾವಣೆಗೆ ಪ್ರಚೋದನೆ ನೀಡಿರಬೇಕು. ದೇವಸ್ಥಾನದ ಶಾಲೆಗಳು ಹತ್ತಾರು ಹಳ್ಳಿಗಳ

ಮಧ್ಯವರ್ತಿ ಸ್ಥಳದಲ್ಲಿ ಎದ್ದಿರಬೇಕು. ಹೀಗಾಗಿ ಸಾಲಿಯೂರು, ಸಾಲಿಗಾವಿ ಸಾಲೆತೊರೆ ಮುಂತಾದ ಹೆಸರುಗಳು ಸಿಗುತ್ತವೆ. ಸಾಲೊಟಗಿಯು ಒಂದು ಪ್ರಸಿದ್ಧ ಶಾಲೆಯನ್ನು ಹೊಂದಿತ್ತು.

ಬಿಜಾಪುರ ಜಿಲ್ಲೆಯ ಸಾಲೊಟಗಿ, ಪಾವಿಟ್ಟಗೆ ಹಳ್ಳಿಯಲ್ಲಿರುವ ಸಾಲೆಯಿಂದಾಗಿ ಸಾಲೊಟಗಿ(ಶಾಲಾ+ಪಾವಿಟ್ಟಗೆ)ಯಾಯಿತು. ರಾಷ್ಟ್ರಕೂಟ ಮೂರನೇ ಕೃಷ್ಣನ ಮಂತ್ರಿ ನಾರಾಯಣನು ಕ್ರಿ.ಶ.೯೪೫ರಲ್ಲಿ ಒಂದು ಶಾಲೆ ಸ್ಥಾಪಿಸಿದ. ಈ ವಿದ್ಯಾಕೇಂದ್ರ ಬೇಗನೇ ಹೆಸರುವಾಸಿಯಾಗಿ ನಾನಾ ಜನಪದ(ಪ್ರದೇಶ)ಗಳಿಂದ ವಿದ್ಯಾರ್ಥಿಗಳನ್ನು ಆಕರ್ಷಿಸಿತ್ತು. ಅವರಿಗಾಗಿ ಇಪ್ಪತ್ತೇಳು ನಿವಾಸಗಳಿದ್ದು, ದಾನವು 'ಶಾಲಾ ವಿದ್ಯಾರ್ಥಿ ಸಂಘ'ಕ್ಕೆ ಕೊಡಲ್ಪಟ್ಟಿತ್ತು. ಅದು ಐದುನೂರು ನಿವರ್ತನಗಳಷ್ಟು ಇದ್ದು ಶಾಲೆಯ ದೀಪದ ವ್ಯವಸ್ಥೆಗೇ ಹನ್ನೆರಡು ನಿವರ್ತನ ಭೂಮಿಯನ್ನು ಬಿಡಲಾಗಿತ್ತು ಎಂದರೆ ಅದರ ಭವ್ಯತೆಯ ಕಲ್ಪನೆ ಬರುತ್ತದೆ. ಶಾಲೆಯ ಆಡಳಿತ ನೋಡಿಕೊಳ್ಳುತ್ತಿದ್ದ ವ್ಯಾಖ್ಯಾತೃ ಒಬ್ಬನಿಗೇ ಐವತ್ತು ನಿವರ್ತನ ಭೂಮಿಯ ಉತ್ಪನ್ನ, ಸಂಬಳವಾಗಿ ದೊರೆಯುತ್ತಿತ್ತು.[೪] ಈ ಶಾಲೆಯ ಆರ್ಥಿಕ ವ್ಯವಸ್ಥೆಯಲ್ಲಿ ಸ್ಥಳೀಯರನ್ನೂ ಸೇರಿಸಲಾಗಿತ್ತು. ಅಂತೆಯೇ ಊರಲ್ಲಿ ವಿಶೇಷ ಸಮಾರಾಧನೆಗಳು ನಡೆದಾಗ ಶಿಕ್ಷಣಕ್ಕಾಗಿ ಊರವರು ಕಾಣಿಕೆಗಳನ್ನು ಸಲ್ಲಿಸಬೇಕಾಗಿತ್ತು.

ಹರಿಹರದಲ್ಲಿಯ ಹರಿಹರ ದೇವಸ್ಥಾನದ ಶಾಲೆಯಲ್ಲಿ (ಕ್ರಿ.ಶ.೧೧೯೭) ಪ್ರಾಥಮಿಕ ಮತ್ತು ಉಚ್ಚ ಶಿಕ್ಷಣದ ಏರ್ಪಾಡು ಇದ್ದು ಅಲ್ಲಿ ಆರು ಜನ ಶಿಕ್ಷಕರಿದ್ದರು.[೫]

ಹಲವು ಶಾಲೆಗಳು ಒಂದೇ ವಿಷಯದಲ್ಲಿ ಪರಿಣತ ಬೋಧನೆ ನೀಡುತ್ತಿದ್ದವು. ಲೊಕ್ಕಿಗುಂಡಿ(ಲಕ್ಕುಂಡಿ, ಧಾರವಾಡ ಜಿಲ್ಲೆ)ಯ ಶಾಲೆ, ಮೀಮಾಂಸೆ ಮತ್ತು ರೋಣದ ಶಾಲೆ ತರ್ಕಶಾಸ್ತ್ರಗಳನ್ನು ಕಲಿಸುತ್ತಿದ್ದವು. ಕುಮಾರ ವ್ಯಾಕರಣ ಮತ್ತು ಋಗ್ವೇದಗಳನ್ನು ಕಲಿಸುವ ಶಾಲೆಗಳೂ ಇದ್ದವು. ಬಾಗುಲಿಯ ಲಕ್ಷ್ಮೀನಾರಾಯಣ, ತಾಳಗುಂದದ ಸಿದ್ಧೇಶ್ವರ, ಮತ್ತು ಕಲ್ಲೇರಿಯ ಸ್ವಯಂಭೂ ಸೋಮೇಶ್ವರ ದೇವಾಲಯಗಳೂ ಶಾಲೆಗಳನ್ನು ನಡೆಸುತ್ತಿದ್ದವು.[೬]

ದೇವಸ್ಥಾನಗಳಿದ್ದಲ್ಲಿ ಧಾರ್ಮಿಕ ಶಿಕ್ಷಣ ಕೊಡುತ್ತಿದ್ದ ವರ್ಗದ ವಸತಿ ಸೌಕರ್ಯ ನಿಧಾನವಾಗಿ ರೂಪಗೊಂಡು ಬೆಳೆಯಿತು. ಬಾದಾಮಿಯ ಚಾಲುಕ್ಯರ ಕಾಲದಲ್ಲಿ ಅಧಿಷ್ಠಾನ ಅಥವಾ ಚತುರ್ವೇದಿ ಸಮುದಾಯ ಅನಿಸಿಕೊಂಡಿದ್ದ ಬ್ರಾಹ್ಮಣರ ಸಮೂಹವು, ಅರಸರು ದಾನವಾಗಿತ್ತ ಭೂಮಿಯನ್ನು ಸಾಂಘಿಕ ರೂಪದಲ್ಲಿ ಪಡೆದು ಅದರ ಆಡಳಿತ ನೋಡಿಕೊಳ್ಳುತ್ತಿದ್ದಿತು. ಬಹುಶಃ ಅಗ್ರಹಾರಗಳ ಪ್ರಾರಂಭ (ಹಾಗೆಂದು ಆಗ ಕರೆಯದಿದ್ದರೂ) ಈ ಅಧಿಷ್ಠಾನಗಳಲ್ಲಿದೆ.[೭] ಕನ್ನಡ ನಾಡಿನ ಅತಿ ಪುರಾತನ ಅಗ್ರಹಾರ, ತಾಳಗುಂದ(ಸಂಸ್ಕೃತ- ಸ್ಥಾನಕುಂದೂರು)ದಲ್ಲಿ ನಾಲ್ಕನೆಯ ಶತಮಾನದಲ್ಲಿ ರೂಪಗೊಂಡಿತು. ಕದಂಬ ವಂಶದ ಮಯೂರಶರ್ಮನ ಪೂರ್ವಜ ಮುಕ್ಕಣ್ಣ ಕದಂಬನು ಉತ್ತರ ಪ್ರದೇಶದ ಅಹಿಚ್ಛತ್ರ (ಈಗಿನ ಬರೇಲಿ ಜಿಲ್ಲೆಯ ರಾಮನಗರ)ದಿಂದ ಮೂವತ್ತೆರಡು ಬ್ರಾಹ್ಮಣ ಕುಟುಂಬಗಳನ್ನು ಬರಮಾಡಿಕೊಂಡನು. ನಂತರ ಮಯೂರಶರ್ಮನು ಗಳಳ ಹಳ್ಳಿಗಳನ್ನು ದಾನಮಾಡಿ ಅಗ್ರಹಾರವನ್ನು ಪ್ರೋತ್ಸಾಹಿಸಿದನು. ದಾನ ಪಡೆದವರು ಚಂದನ, ಅಗರು, ತೆಂಗು, ಲವಂಗ, ಮಾತಳಂಗ, ಮಾವು, ಚಂಪಕ,

ಬಕುಳ, ಅಡಿಕೆ, ನಾಗ, ಪುನ್ನಾಗ ಮೊದಲಾದ ಲತಾವೃಕ್ಷಗಳಿಂದ ರಮಣೀಯವಾಗಿದ್ದ ತಾಳಗುಂದವನ್ನು[೮] ಕೇಂದ್ರವನ್ನಾಗಿ ಮಾಡಿಕೊಂಡು, ಯಜ್ಞಯಾಗಾದಿಗಳಲ್ಲದೇ, ವಿದ್ಯಾದಾನದ ಸಕಲ ಜವಾಬ್ದಾರಿಯನ್ನು ಹೊತ್ತುಕೊಂಡರು. ಬಹುಶಃ ಈ ಕ್ಷೇತ್ರದಲ್ಲಿಯ ಕೊರತೆಯೊಂದನ್ನು ತುಂಬಿತರುವದು ವಿದ್ಯಾದಾನದ ಉದ್ದೇಶವಾಗಿದ್ದಿರಬೇಕು. ಅಗ್ರಹಾರವು ಹಲವಾರು ಹಳ್ಳಿ ಅಥವಾ ದೊಡ್ಡ ಗ್ರಾಮಗಳನ್ನು ಒಳಗೊಂಡಿರುವದು ಸಾಮಾನ್ಯವಾಗಿತ್ತು. ಇದರಿಂದ ಬೇರೆ ಬೇರೆ ಗ್ರಾಮಗಳಿಂದ ವಿದ್ಯಾಭ್ಯಾಸಕ್ಕಾಗಿ ಎಳೆಯರು, ವಿದ್ವಾಂಸರಿದ್ದಲ್ಲಿ ಬರುವದು ವಾಡಿಕೆಯಾಯಿತು. ವೇದ- ವೇದಾಂಗ, ಮೀಮಾಂಸಾ, ತರ್ಕ, ಸ್ಮೃತಿ, ಪುರಾಣಗಳನ್ನು ಅಗ್ರಹಾರಗಳಲ್ಲಿ ಕಲಿಸುತ್ತಿದ್ದರು. ಶತಮಾನಗಳವರೆಗೆ ತಾಳಗುಂದವು ಪ್ರಸಿದ್ಧ ವಿದ್ಯಾಕೇಂದ್ರವಾಗಿ ಬೆಳಗಿರಬೇಕು. ಕ್ರಿ.ಶ.೧೧೫೦ರ ಶಾಸನ, ಅಲ್ಲಿ ವೇದ-ವೇದಾಂಗಗಳಲ್ಲದೇ, ಛಂದಸ್ಸು, ರೂಪಾವತಾರ ವ್ಯಾಕರಣ ಮತ್ತು ಪ್ರಭಾಕರನ ಮೀಮಾಂಸಾ ಮುಂತಾದವು ಅಧ್ಯಯನ ವಿಷಯಗಳಾಗಿದ್ದನ್ನು ಹೇಳುತ್ತದೆ.

ಮುಂದೆ ಆರನೆಯ ವಿಕ್ರಮಾದಿತ್ಯನು ತಮಿಳುನಾಡಿನಿಂದ ಬ್ರಾಹ್ಮಣರನ್ನು ಬರಮಾಡಿ ಕೊಂಡು, ಕೋಗಳಿ ಪ್ರಾಂತದ ನೀರಗುಂದ ಎಂಬ ಗ್ರಾಮವನ್ನು ಅಗ್ರಹಾರವನ್ನಾಗಿ ಮಾಡಿ(ಅಗ್ರಹಾರೀ ಕೃತ್ಯ) ಅವರಿಗೆ ದಾನವಾಗಿ ಕೊಡುತ್ತಾನೆ.[೯] ಅಗ್ರಹಾರವನ್ನು ದಾನವಾಗಿ ಕೊಡುವದಕ್ಕೆ ಕಾರಣ ಪುಣ್ಯ ಪ್ರಾಪ್ತಿಯ ಇಚ್ಛೆ. ಹಿರಿಯರ, ಪೂರ್ವಜರ ನೆನಪಿಗೆ, ಅರಸನಿಗೆ ಶುಭವನ್ನು ಹಾರೈಸಿ, ಇಲ್ಲವೇ ಪಾಪದಿಂದ ಪ್ರಾಯಶ್ಚಿತ್ತ ಪಡೆಯಲು ಅಗ್ರಹಾರಗಳನ್ನು ಸ್ಥಾಪಿಸಿದ್ದುಂಟು. ಕದಂಬ ದೊರೆ ಶಿವಚಿತ್ತ ಪೆರ್ಮಾಡಿಯ ಹೆಂಡತಿ ಕಮಲಾದೇವಿಗೆ, ಅಗ್ರಹಾರ ಸ್ಥಾಪಿಸುವ ಪ್ರೇರೇಪಣೆ ಉಂಟಾಗಿತ್ತು. ಕ್ರಿ.ಶ.೧೧೬೯ರ ಶಾಸನವೊಂದು ಅಗ್ರಹಾರ ಹೇಗೆ ಪ್ರಾರಂಭವಾಗುತ್ತಿತ್ತೆಂಬುದರ ಬಗ್ಗೆ ವಿವರಗಳನ್ನು ಕೊಡುತ್ತದೆ. ಕಮಲಾದೇವಿ, ತನ್ನ ಇಚ್ಛೆಯನ್ನು ಅರಸನೊಂದಿಗೆ ತೋಡಿಕೊಳ್ಳುತ್ತಾಳೆ. ಅರಸನು ಸಭೆಯಲ್ಲಿ ಈ ವಿಚಾರವನ್ನು ತನ್ನ ಮಂತ್ರಿಮಂಡಲದ ಎದುರು ಇಡುತ್ತಾನೆ. ಅವನು ವಿಚಾರ ವಿನಿಮಯ ಮಾಡಿ ಈಗ ಬೆಳಗಾಂವಿ ಜಿಲ್ಲೆಯಲ್ಲಿರುವ ದೇಗಾಂವೆಯಲ್ಲಿ ಅಗ್ರಹಾರ ಸ್ಥಾಪಿಸಲು ಅನುಮತಿ ಕೊಡುತ್ತಾನೆ. ರಾಣಿಯೇ ಸ್ವತಃ ಹಲವಾರು ನಾಡುಗಳಿಂದ ಬಂದ ವಿದ್ವಾಂಸರನ್ನು ಅವರ ಬೇರೆ ಬೇರೆ ವಿಷಯಗಳ ಪರಿಣತಿಯನ್ನು ಪರೀಕ್ಷಿಸಿ ಅವರಿಗೆ ದೇಗಾಂವೆ ಮತ್ತಿತರ ಹಳ್ಳಿಗಳನ್ನು ದಾನವಾಗಿ ಕೊಟ್ಟು ಅಗ್ರಹಾರದ ಸ್ಥಾಪನೆಗೆ ಕಾರಣಳಾಗುತ್ತಾಳೆ.[೧೦] ಅಲ್ಲಿ ವೇದವ್ಯಾಸಂಗವಲ್ಲದೇ ನ್ಯಾಯ, ಮೀಮಾಂಸಾ, ಸಾಂಖ್ಯ, ಯೋಗ, ವೇದಾಂತ, ಸ್ಮೃತಿ, ಇತಿಹಾಸ, ಪುರಾಣ-ಪಠಣಗಳಿಗೆ ಸಕಲ ಸವಲತ್ತುಗಳು ಇದ್ದವು. ಸ್ಥಳದ ಸಂಪ್ರದಾಯ, ನಂಬಿಕೆ, ದಾನಿಗಳ ಮನೋಧರ್ಮ ಮತ್ತು ಸೌಲಭ್ಯಗಳಿಗನುಸಾರವಾಗಿ ಅನಾದಿ-ಅಗ್ರಹಾರ, ಮಹಾಗ್ರಹಾರ, ಪರಿಯ ಅಗ್ರಹಾರ, ಪರಮೇಶ್ವರ ದತ್ತಿ ಅಗ್ರಹಾರಗಳೆಂದು ವರ್ಗೀಕರಿಸಲಾಗಿತ್ತು.

ಹೊಸತನದ ಹಪಾಪಿತನ ಇಂದಿನವರಂತೆ ಹಿಂದಿನವರಿಗೂ ಇತ್ತು. ಪೊಸವಡಂಗಿಲೆ (ಈಗಿನ ಬಳ್ಳಾರಿ ಜಿಲ್ಲೆಯ ಹಿರೇಹಡಗಲಿ)ಯ ನಾಗರಿಕರಿಗೆ ಎಲ್ಲವೂ ಹೊಸದು ಬೇಕೆನಿಸುತ್ತಿತ್ತು!

ಹೀಗಾಗಿ ಅಗ್ರಹಾರವಿದ್ದ ತಮ್ಮ ಊರನ್ನು 'ಹೊಸ' ಹಡಂಗಿಲೆಯೆಂದು ಕರೆದರು. ಅಷ್ಟೇ ಅಲ್ಲ 'ಹೊಸ ಕಾವ್ಯ', 'ಹೊಸ ಸಂಗೀತ', 'ಹೊಸ ವಾದ್ಯ', 'ಹೊಸ(ವಿನೂತನ)ರಸ'ಗಳ ವೃತ್ತ, ಹೊಸ ವಸ್ತು, ಹೊಸ 'ವಿಳಾಸ', 'ಹೊಸ ದೇಸಿ'ಗಳೆಲ್ಲಾ ಪೊಸವಡಂಗಿಲೆಯಲ್ಲಿ ಕ್ರಿ.ಶ.೧೦೫೦ರಷ್ಟು ಹಿಂದೆಯೇ ಹುಟ್ಟಿಕೊಂಡವು! ಅಲ್ಲಿ 'ಶಾಶ್ವತ ವಿಶ್ವವಿದ್ಯಾಧಾಮ'ವೊಂದು ಮೆರೆದುದು ವಿಶೇಷ.[೧೧]

ಉಚ್ಚ ಶಿಕ್ಷಣವನ್ನು ಸಂಸ್ಕೃತದಲ್ಲಿಯೂ ಪ್ರಾಥಮಿಕ ಶಿಕ್ಷಣವನ್ನು ಕನ್ನಡದಲ್ಲಿಯೂ ಬೋಧಿಸಲಾಗುತ್ತಿತ್ತು. ಅಕ್ಕರಿಗ ಅಥವಾ ಕನ್ನಡ ಪಂಡಿತನು, ಕರ್ನಾಟ ಶಿಕ್ಷೆ, ಬಾಲಶಿಕ್ಷೆ, ಕನ್ನಡಾಕ್ಷರಶಿಕ್ಷೆ, ಕರ್ನಾಟ ಬಾಲಶಿಕ್ಷೆ ಎಂದು ವಿವಿಧ ಹೆಸರುಗಳಿಂದ ಗುರುತಿಸುವ ಕನ್ನಡ ವಿದ್ಯಾಭ್ಯಾಸದ ಮುಖ್ಯಸ್ಥನಾಗಿದ್ದನು.[೧೨] ಕೆಲವೆಡೆಯಲ್ಲಿ ಪುರಾಣಭಟ್ಟನೇ ಕನ್ನಡದ ಪಾಠ ಹೇಳಿಕೊಡುತ್ತಿದ್ದ.[೧೩] ಪುರಾಣ ಹೇಳುವದು ಸಂಜೆಯ ನಾಲ್ಕು ಘಳಿಗೆಗೆ(ಒಂದೂವರೆ ತಾಸು) ಸೀಮಿತವಾದದ್ದರಿಂದ ದಿನದಲ್ಲಿ ಬೇಕಾದಷ್ಟು ಬಿಡುವು ಅವನಿಗೆ ದೊರೆಯುತ್ತಿತ್ತು. ಕನ್ನಡ ಅಕ್ಷರಾಭ್ಯಾಸದ ಜೊತೆ, ವ್ಯಾಕರಣ, ಗಣಿತಗಳ ಪರಿಚಯವನ್ನೂ ಮಾಡಿಸುತ್ತಿದ್ದರು. ಬೇಲೂರಿನ ಉದ್ಭವ ನರಸಿಂಹಪುರದ ಅಗ್ರಹಾರದಲ್ಲಿ ಬಾಲಕರಿಗೆ ಋಗ್ವೇದ, ಯಜುರ್ವೇದಗಳನ್ನು ಕಲಿಸಲಿಕ್ಕೆ ಉಂಬಳಿ ಕೊಡಲಾಗಿತ್ತು. ಇನ್ನೂ ಕೆಲವೆಡೆ 'ಖಂಡಿಕೆ' ಅಥವಾ ವೇದಗಳ ಭಾಗ(ಖಂಡ)ಗಳನ್ನು ಕಲಿಸಲಿಕ್ಕೆಂದೇ ಮೀಸಲಾದ ವೇದಗಳ ಪ್ರಾಥಮಿಕ ಶಾಲೆಗಳಿದ್ದವು.[೧೪] ಬಹುಶಃ ವೇದಗಳ ಸರಳ ಪ್ರಾರ್ಥನೆಗಳು ಮತ್ತು ದೈನಂದಿನ ಪೂಜಾ ಪ್ರಕಾರದ ಋಕ್ಕುಗಳನ್ನು, ಮಕ್ಕಳಿಗೆ ಕಂಠಪಾಠ ಮಾಡಿಸುವದಕ್ಕೆಂದೇ ಈ ಖಂಡಿಕೆಗಳು ಹುಟ್ಟಿಕೊಂಡಿರಬೇಕು. ಅಲ್ಲದೆ ಪದಪಾಠ ಪರಿಚಯ, ಕ್ರಮವಾಗಿ ಪದಗಳನ್ನು ಭೇದಿಸಿ 'ಅರಣ', ಬ್ರಾಹ್ಮಣ ಸೂತ್ರಗಳನ್ನು, ರುದ್ರವನ್ನು ಪಠಿಸುವದು ಖಂಡಿಕೆಗಳಲ್ಲಿ ನಡೆಯುತ್ತಿತ್ತು.[೧೫] ಕನ್ನಡದ ಜೊತೆಗೆ ನಾಗರ, ತಿಗುಳ ಮತ್ತು ಆರ್ಯ ಎಂದರೆ ಸಂಸ್ಕೃತ, ತಮಿಳು ಮತ್ತು ಮರಾಠಿ ಭಾಷೆಗಳನ್ನೂ ಕೆಲ ಅಗ್ರಹಾರಗಳಲ್ಲಿ ಕಲಿಸುತ್ತಿದ್ದರು.[೧೬] ವ್ಯಾಪಾರಕ್ಕಾಗಿ ದೇಶದ ಬೇರೆ ಬೇರೆ ಭಾಗಗಳಿಗೆ ಹೋಗಲಿಚ್ಛಿಸುವ ಮಕ್ಕಳಿಗೆ ಈ ಭಾಷಾಭ್ಯಾಸದಿಂದ ಹೆಚ್ಚಿನ ಲಾಭವಾಗುತ್ತಿದ್ದಿರಬೇಕು. ಇಂಥ ಅಗ್ರಹಾರದಲ್ಲಿ ಓದಿದ ರಸಿಕನೊಬ್ಬ ತೆಲುಗು, ತಮಿಳು, ಕನ್ನಡ, ನಾಗರ ಲಿಪಿಗಳಲ್ಲಿ ತನ್ನ ಹೆಸರನ್ನು ಆಯಾ ಪ್ರದೇಶಗಳ "ವಾರವನಿತೆಯರ ಕಣ್ಣುಗಳಲ್ಲಿ" ಬರೆದದ್ದು ಆಶ್ಚರ್ಯವಲ್ಲ![೧೭]

ಹೆಗ್ಗಡೆ ಎರೆಯಣ್ಣನು ಅರಸಿಕೆರೆ ಹತ್ತಿರದ ನರಸಿಂಹಪುರದ ಅಗ್ರಹಾರದಲ್ಲಿ ಊಟ-ಉಪಚಾರಗಳಿರುವ ಪ್ರಾಥಮಿಕ ಶಾಲೆಯನ್ನು ಸ್ಥಾಪಿಸಿ, ಮನೆಯೊಂದನ್ನು ಕಟ್ಟಿಸಿ ಬೋಳೆಯ ಸೋವಿಯಣ್ಣನನ್ನು ಕರ್ನಾಟಕ ಬಾಲಶಿಕ್ಷೆಯನ್ನು ಬೋಧಿಸಲು ನೇಮಿಸಿದ್ದ. ಅಲ್ಲಿ ಇಪ್ಪತ್ತು ವಿದ್ಯಾರ್ಥಿಗಳಿದ್ದರು.[೧೮] ಅಗ್ರಹಾರದ ಸದಸ್ಯರೆಲ್ಲರೂ ಬ್ರಾಹ್ಮಣರೇ ಇರಬೇಕೆಂಬ ಕಡ್ಡಾಯವೇನೂ ಇರಲಿಲ್ಲ. ಕಮ್ಮಾರ, ಬಡಿಗ, ಅಕ್ಕಸಾಲಿ, ತಳಾರ, ಕಂಚುಗಾರ, ಮಾಲಾಕಾರ(ಹೂಗಾರ), ಕೃಷಿಕರೆಲ್ಲ ಅಲ್ಲಿ ಸಹೃದಯತೆಯಿಂದ ಒಟ್ಟಾಗಿ ಬಾಳುತ್ತಿದ್ದರು; ಕೆಲವೊಮ್ಮೆ ಜೈನ, ಬೌದ್ಧ

ಅನುಯಾಯಿಗಳನ್ನೂ ಅಲ್ಲಿ ಕಾಣಬಹುದಿತ್ತು. ಅಗ್ರಹಾರದ ಸಂರಕ್ಷಣೆಗಾಗಿ ಪರಾಕ್ರಮದಿಂದ ಕಾದಿ ವೀರಸ್ವರ್ಗ ಸೇರಿದವರಲ್ಲಿ ಎಲ್ಲ ಜಾತಿಯವರು ಇದ್ದರು.

ಹೆಚ್ಚಾಗಿ ಅಗ್ರಹಾರಗಳೆಲ್ಲ ವಿದ್ಯಾಲಯಗಳನ್ನು ಹೊಂದಿದ ವಾಸಸ್ಥಾನಗಳಾಗಿದ್ದು ಬ್ರಹ್ಮಪುರಿ, ಮಠ, ಶಾಲೆ ಮತ್ತು ಘಟಿಕೆಗಳೊಡನೆ ನಿಕಟ ಸಂಪರ್ಕ ಹೊಂದಿರುತ್ತಿದ್ದವು. ಆದ್ದರಿಂದ ಕರ್ನಾಟಕದ ಶಿಕ್ಷಣ ಪರಂಪರೆಯಲ್ಲಿ ಅಗ್ರಹಾರವನ್ನು ಮೂಲ ವಿದ್ಯಾಸಂಸ್ಥೆಯೆಂದು ಪರಿಗಣಿಸಲಾಗುತ್ತದೆ. ಕರ್ನಾಟಕದಲ್ಲಿ ಎಷ್ಟು ನೂರು ಅಗ್ರಹಾರಗಳಿದ್ದವೆಂದು ಹೇಳುವದು ಕಠಿಣ. ಹೊಸ ಶಾಸನವೊಂದನ್ನು ಹುಡುಕಿದಾಗ, ಹೊಸದೊಂದು ಅಗ್ರಹಾರದ ಉಲ್ಲೇಖ ಸಿಗುವದು ಸಾಮಾನ್ಯ ಮಾತಾಗಿದೆ.

ಊರಿನ ಭಾಗವೊಂದನ್ನು ಬ್ರಾಹ್ಮಣರಿಗೆ ಕೊಟ್ಟು ಶಿಕ್ಷಣಕ್ಕೆ ಮೀಸಲಿಟ್ಟರೆ ಅದನ್ನು 'ಬ್ರಹ್ಮಪುರಿ' ಎಂದು ಗುರುತಿಸಲಾಗುತ್ತಿತ್ತು. ಅರಸರು, ದಂಡನಾಯಕರು, ಧಾರ್ಮಿಕ ಸ್ಥಳಗಳಿಗೆ ಭೇಟಿ ಕೊಟ್ಟಾಗ, ಧರ್ಮಪ್ರಸಂಗಗಳನ್ನು ಏರ್ಪಡಿಸಿ, ಬ್ರಹ್ಮಪುರಿ, ಅಗ್ರಹಾರಗಳಂತಹವನ್ನು ಸ್ಥಾಪಿಸಲಿಕ್ಕೆ, ಅವಕ್ಕೆ ದಾನ-ದತ್ತಿ ನೀಡಲಿಕ್ಕೆ ವ್ಯವಸ್ಥೆ ಮಾಡಲಾಗುತ್ತಿತ್ತು. ಪ್ರಭಾವಿತರಾದ ಅರಸರು, ದಂಡನಾಯಕರು, ಕೊಡುಗೈಯಿಂದ ದಾನಮಾಡುತ್ತಿದ್ದರು. ಇಂಥ ಒಂದು ಧರ್ಮಪ್ರಸಂಗದ ನಂತರ, ಕೇಶವ ದಂಡನಾಯಕನು ದಕ್ಷಿಣ ಬಳ್ಳಿಗಾವಿಯಲ್ಲಿ, ಹಣ್ಣುಹಂಪಲುಗಳಿಂದ ಸಮೃದ್ಧವಾದ ಪರಿಸರದಲ್ಲಿ ಕೇಶವ ದೇವಾಲಯವನ್ನು ಕಟ್ಟಿಸಿ, ವೀರ ಕೇಶವಪುರವೆಂಬ ಬ್ರಹ್ಮಪುರಿಯನ್ನು ಕ್ರಿಶ.೧೧೧೦ ಇರಲ್ಲಿ ಸ್ಥಾಪಿಸುತ್ತಾನೆ. ವೇದ ವೇದಾಂಗಗಳನ್ನು ಕಲಿಸುವ ಭಟ್ಟೋಪಾಧ್ಯಾಯರಿಗೂ, ಇತರ ಬ್ರಾಹ್ಮಣರಿಗೂ ಮಂಚ, ಹಾಸಿಗೆ, ಪಾತ್ರೆ, ಪಡಗ ಸಹಿತ, ಮನೆಗಳನ್ನು ಕಟ್ಟಿಸಿಕೊಡುತ್ತಾನೆ. ಬ್ರಾಹ್ಮಣರಿಗೆ, ಜೀವನೋಪಾಯಕ್ಕೆ ವೃತ್ತಿಯನ್ನು ಕೊಡಮಾಡುತ್ತಾನೆ.[೧೯] ಬಳ್ಳಿಗಾವಿಯಲ್ಲಿ ಏಳು ಬ್ರಹ್ಮಪುರಿಗಳು ಇದ್ದರೆ, ಅಣ್ಣಿಗೇರಿಯಲ್ಲಿ ಐದು ಇದ್ದವು. ಇಲ್ಲಿ ವೇದಗಳ ಖಂಡ(ಭಾಗ)ಗಳನ್ನು ಕಲಿಸುವ ಖಂಡಿಕೆಯೊಂದಿಗೆ ಪ್ರಾಥಮಿಕ ಶಿಕ್ಷಣಕ್ಕೂ ಏರ್ಪಾಡು ಇತ್ತು.[೨೦]

ದೇವಾಲಯದ ಭಾಗವಾಗಿ, ಯತಿಗಳಿಗೆ, ಛಾತ್ರರಿಗೆ ನಿವಾಸ ಸ್ಥಾನವಾಗಿ ಮಠಗಳು ಹಲವು ಶತಮಾನಗಳಿಂದ ಅಸ್ತಿತ್ವದಲ್ಲಿದ್ದರೂ, ವಿದ್ಯಾಸಂಸ್ಥೆಗಳಾಗಿ ಅವು ಊರ್ಜಿತಾವಸ್ಥೆಗೆ ಬಂದದ್ದು, ಹತ್ತನೆಯ ಶತಮಾನದ ನಂತರ. ಕಾಳಾಮುಖರೆಂದು ಹೆಸರುವಾಸಿಯಾಗಿರುವ ಪಾಶುಪತಶೈವರು ಕರ್ನಾಟಕದಲ್ಲಿ ಮಠಗಳಿಗೆ ವಿದ್ಯಾಕ್ಷೇತ್ರದ ಸ್ಥಾನ ಕೊಟ್ಟವರಲ್ಲಿ ಪ್ರಮುಖರು. ಇವರು ಕಾಶ್ಮೀರದಿಂದ, ಗುಜರಾತ ಮಾರ್ಗವಾಗಿ ಕರ್ನಾಟಕಕ್ಕೆ ಕ್ರಿ.ಶ. ಸುಮಾರು ಆರನೇ ಶತಮಾನದಲ್ಲಿ ಬಂದರು. ಕರಿಯ ಭಸ್ಮವನ್ನು ಮುಖಕ್ಕೆ ಲೇಪಿಸಿಕೊಳ್ಳುತ್ತಿದ್ದರಿಂದ ಕಾಳಾಮುಖರೆಂಬ ಅನ್ವರ್ಥಕನಾಮ ಬಂದಿತು. ೧೦ನೇ ಶತಮಾನದ ಹೊತ್ತಿಗೆ ಇವರ ಶೈವಮಠಗಳು ದಕ್ಷಿಣ ಭಾರತದಲ್ಲೆಲ್ಲ ಹರಡಿಕೊಂಡವು. ಬಳ್ಳಿಗಾವಿ, ಕುಪ್ಪತ್ತೂರು, ಮುತ್ತಗೆ, ಸೂಡಿ, ಹೂಲಿ, ಇಟ್ಟಗೆ, ಶ್ರೀಶೈಲಗಳ ಮಠಗಳು ಪ್ರಮುಖವಾಗಿದ್ದವು. ಅಲ್ಲದೇ ನಾಡಿನ ತುಂಬ ಚಿಕ್ಕ ದೊಡ್ಡ ಮಠಗಳನ್ನು ಮತ್ತು ಶೈವ ದೇವಾಲಯಗಳನ್ನೂ ಸ್ಥಾಪಿಸಿದರು.[೨೧] ಹಲವು ಕಾಳಾಮುಖಯತಿಗಳು

ರಾಜಗುರುಗಳೂ ಆಗಿದ್ದರು. ಇವರು ಸ್ಥಾಪಿಸಿದ ಮಠಗಳಲ್ಲಿ ಬಳ್ಳಿಗಾವಿಯ ಕೇದಾರೇಶ್ವರ ದೇವಸ್ಥಾನಕ್ಕೆ ಹೊಂದಿ ಇದ್ದ ಕೋಡಿಯ ಮಠ ಹೆಸರುವಾಸಿಯಾಗಿದೆ. ಹಲವಾರು ಸಮರ್ಥ ಯತಿಗಳು ಅದನ್ನು ಧಾರ್ಮಿಕ, ಸಾಮಾಜಿಕ ಚಟುವಟಿಕೆಗಳ ಕೇಂದ್ರವನ್ನಾಗಿ ಕಟ್ಟಿದರೂ ಇಮ್ಮಡಿ ವಾಮಶಕ್ತಿ ದೇವನಕಾಲಕ್ಕೆ ಅದು ವೈಭವದ ಶಿಖರಕ್ಕೆ ಏರಿತ್ತು. ನಾಲ್ವತ್ತಾರು ವರ್ಷಗಳ ಕಾಲ ವಿದ್ಯಾದಾನ ಮಾಡಿದ ಅಖಂಡ ಶ್ರೇಯಸ್ಸು ಆತನದು. ಘನವಿದ್ವಾಂಸನಿರುವದರ ಜೊತೆಗೆ ಆತ ಮಂತ್ರಸಾಧಕನೂ ಆಗಿದ್ದ. ಈತ ಸಕಲ ಶಾಸ್ತ್ರಜ್ಞನೂ, ವಿಜ್ಞಾನಿಯೂ, ಶ್ರೇಷ್ಠಗುರುವೂ ಆಗಿದ್ದರಿಂದ ಸದಾಕಾಲ ಶಿಷ್ಯರಿಂದ ಸುತ್ತುವರಿಯಲ್ಪಟ್ಟವನಾಗಿದ್ದ. ಕೋಡಿಯ ಮಠದಲ್ಲಿ ಸ್ವಾಧ್ಯಾಯಕ್ಕೆ ಪ್ರೋತ್ಸಾಹವಿದ್ದುದರಿಂದ ನೈಷ್ಠಿಕ ಬ್ರಹ್ಮಚಾರಿಗಳು ಅಲ್ಲಿದ್ದ ನಾಲ್ಕು ವೇದಗಳನ್ನು ಆಳವಾಗಿ ಅಭ್ಯಸಿಸುತ್ತಿದ್ದರು. ವ್ಯಾಕರಣ ವಿಭಾಗದಲ್ಲಿ ಕೌಮಾರ, ಪಾಣಿನಿ, ಶಾಕಟಾಯನ ಮತ್ತು ಶಬ್ದಾನುಶಾಸನಗಳನ್ನು ಕಲಿಸಲಾಗುತ್ತಿತ್ತು. ಇವುಗಳಲ್ಲದೇ ನ್ಯಾಯ, ವೈಶೇಷಿಕ, ಮೀಮಾಂಸೆ, ಸಾಂಖ್ಯ, ಬೌದ್ಧ ಮೊದಲಾದ ಷಡ್ ದರ್ಶನಗಳನ್ನು, ಪುರಾಣ, ಧರ್ಮಶಾಸ್ತ್ರ, ಕಾವ್ಯ, ನಾಟಕಾದಿಗಳನ್ನು ಬೋಧಿಸುತ್ತಿದ್ದರು. ಅರ್ಥಾತ್ ಧರ್ಮಬೋಧೆಗಷ್ಟೇ ಮಠ ಮೀಸಲಿರಲಿಲ್ಲ. ಏಕದಂಡಿ, ತ್ರಿದಂಡಿ, ಹಂಸ, ಪರಮಹಂಸರಂತಹ ಸನ್ಯಾಸಿಗಳ ವಿವಿಧ ವರ್ಗದವರಿಗೆ ಅಲ್ಲಿ ಆದರದ ಸ್ವಾಗತವಿತ್ತು. ಜೊತೆಗೆ ಮನರಂಜನೆ ನೀಡಿ ಜೀವಿಸುವ ಗಾಯಕರು, ವಾದಕರು, ಕೊಳಲಿನವರು, ನರ್ತಕರು, ಕಥೆ ಹೇಳುವವರು ಆ ಮಠದಲ್ಲಿದ್ದರು. ಅಭಯಾಶ್ರಮದಂತಿದ್ದ ಮಠಕ್ಕೆ ಕಿವುಡರು, ಕುರುಡರು, ಕುಂಟರು, ದೀನರು, ದಲಿತರು, ಅಂಗವಿಕಲರು, ಅನಾಥರು, ಭಿಕ್ಷುಕರೂ ಬರುತ್ತಿದ್ದರು. ಅವರೆಲ್ಲರಿಗೆ ಆಹಾರ, ಆಶ್ರಯದ ಜೊತೆಗೆ ಪಥ್ಯ ಔಷಧೋಪಚಾರದ ವ್ಯವಸ್ಥೆ ಇದ್ದುದು ಮಹತ್ವದ ಸಂಗತಿ.[೨೨]

ಸ್ವಾಧ್ಯಾಯಕ್ಕೆ, ಅಧ್ಯಯನಕ್ಕೆ ಮತ್ತು ವ್ಯಾಖ್ಯಾನಗಳನ್ನು ಬರೆಯಲಿಕ್ಕೆ ಹೀಗೆ ಮೂರು ಬಗೆಯ ವಿದ್ಯೆಗೆ ಅವಕಾಶವಿತ್ತು. ಬಳ್ಳಿಗಾವಿಯಲ್ಲಿ ಹರಿಹರ, ಬ್ರಹ್ಮ, ಬುದ್ಧ, ಜಿನರಿಗೆ ಮೀಸಲಾದ ಮಠಗಳಿದ್ದವು. ಹೀಗಾಗಿ, ವಿದ್ಯಾದಾನಕ್ಕೆ ಆರೋಗ್ಯಕರ ವಾತಾವರಣ ಬೆಳೆದು ಬಹುಸಂಖ್ಯೆಯಲ್ಲಿ ವಿದ್ಯಾರ್ಥಿಗಳನ್ನು ಅವು ಆಕರ್ಷಿಸಿರಬಹುದು.

ಚಾಲುಕ್ಯ ವಿಕ್ರಮಾದಿತ್ಯನ ದಂಡಾಧೀಶನಾದ ಮಹಾದೇವನು ಇಟ್ಟಿಗೆಯಲ್ಲಿ ಸರಸ್ವತಿಗೆ ಮಠ ಕಟ್ಟಿಸಿದ(ಕ್ರಿ.ಶ.೧೧೧೨). ೫೦೦ ಮತ್ತರು ಭೂಮಿಯನ್ನು ಉಂಬಳಿಯಾಗಿ ಕೊಟ್ಟ. ಇದರ ಉತ್ಪನ್ನ ಶಿಕ್ಷಕ ವರ್ಗದ ಸಂಬಳ, ಛಾತ್ರವರ್ಗದ ಆಹಾರ ಮತ್ತು ಗಡಿಯಾರ(ಗಳಿಗೆ ಬಟ್ಟಲು) ನೋಡಿಕೊಳ್ಳುತ್ತಿದ್ದ ಮಾಣಿಗಳ ಅಶನಾರ್ಥಕ್ಕೆ ಮೀಸಲಿತ್ತು. ಇಲ್ಲಿ ಸಾಹಿತ್ಯ, ವೇದಾಂತ, ಬ್ರಹ್ಮವಿದ್ಯೆಗಳಲ್ಲಿ ಪರಿಣತರು, ಶುದ್ಧ ಚಾರಿತ್ರರಾದ ನಾಲ್ಕುನೂರು ಬ್ರಾಹ್ಮಣರು ನೆಲೆಸಿದ್ದರು. ಸಕಲ ಶಾಬ್ದಿಕರು, ಕವಿಗಳು, ತಾರ್ಕಿಕರು, ಆಗಮಿಕರಿಗೆಲ್ಲ ಈ ಮಠ ಆಶ್ರಯ ಕೊಟ್ಟಿತ್ತು.[೨೩]

ವೀರಶೈವ ಕ್ರಾಂತಿಯ ನಂತರ ಪ್ರಮುಖ ಕಾಳಾಮುಖ ಶೈವಮಠಗಳು ವೀರಶೈವ ಮಠಗಳಾಗಿ ಪರಿವರ್ತನೆ ಹೊಂದಿದವು. ಹೂಲಿಯ ಮಠದ ಗುರುಪರಂಪರೆಯೂ

ಶಾಸನಗಳಲ್ಲಿ ಬರುವ ಗುರುಗಳ ವಂಶಾವಳಿಯೊಂದಿಗೆ ಸರಿಯಾಗಿ ತಾಳೆ ಹೊಂದಿ ಈ ಮಾತನ್ನು ಸಮರ್ಥಿಸುತ್ತದೆ.[೨೪]

ಹದಿಮೂರನೇ ಶತಮಾನದಿಂದ ತಲೆ ಎತ್ತಲಾರಂಭಿಸಿದ ವೀರಶೈವ ಮಠಗಳಲ್ಲಿ ಕಾಯಕಕ್ಕೆ ಹೆಚ್ಚಿನ ಪ್ರಾಧಾನ್ಯತೆ ಬಂದಿತು. ಕಾಯಕವೇ ಕೈಲಾಸವೆಂದು ಬಸವಣ್ಣನವರು ಸಾರಿದ್ದರಿಂದ, ವೃತ್ತಿಯೂ ಮೋಕ್ಷ ಸಾಧನವಾಗಿ ಪರಿಣಮಿಸಿ, ವಿದ್ಯಾಭ್ಯಾಸಕ್ಕೆ ಅತ್ಯಂತ ಅವಶ್ಯವಿದ್ದ ವ್ಯಾವಹಾರಿಕ ರೂಪ ಬರಲಾರಂಭಿಸಿತು. 'ಶಿವತತ್ವಚಿಂತಾಮಣಿ'ಯು ಸುಮಾರು ಐವತ್ತು ಕಾಯಕಗಳನ್ನು ಹೆಸರಿಸುತ್ತದೆ. ಇವುಗಳಲ್ಲಿ ಓದಿಸುವ ಕಾಯಕ(ಉಪಾಧ್ಯಾಯ ವೃತ್ತಿ), ವಚನ ಕಾಯಕ (ಸುಶ್ರಾವ್ಯವಾಗಿ ವಚನಗಳನ್ನು ವಾಚಿಸಿ ಅವುಗಳ ಸಂದೇಶ ಬೀರುವದು), ಮತ್ತು ಓಲೆಯ ಕಾಯಕ (ತಾಳೆಯೋಲೆಗಳನ್ನು ಬರೆಹಕ್ಕೆ ಅನುಕೂಲವಾಗುವಂತೆ ಸಿದ್ಧಪಡಿಸುವದು)ಗಳೂ ಸಮಾವೇಶಗೊಂಡಿದ್ದವು. ಇಂದಿನ ಕಾಗದದಂತೆ ಓಲೆಗರಿಗಳ ಬಳಕೆಯಿದ್ದುದರಿಂದ ಅದಕ್ಕೆ ವಿಶೇಷ ಬೇಡಿಕೆ ಇತ್ತು. ಹೀಗಾಗಿ ತಾಳೆಗರಿ ಮತ್ತು ಕಂಟಗಳನ್ನು ತಯಾರಿಸಿ ಹಳ್ಳಿ ಹಳ್ಳಿಗಳಿಗೆ ಒಯ್ದು ಮಾರುವದು ಓಲೆಯವರ ಕೆಲಸವಾಗಿತ್ತು. ಇಂದಿಗೂ ಓಲಿಮಠ, ಓಲಿ, ಓಲಿಕಾರ ಮುಂತಾದ ಹೆಸರುಗಳು ಉತ್ತರ ಕರ್ನಾಟಕದಲ್ಲಿದ್ದು ಹಿಂದೆ ಆ ವೃತ್ತಿಯನ್ನು ಕೊಡಮಾಡುತ್ತಿದ್ದ ಮಠ ಮತ್ತು ಕಾಯಕವನ್ನು ಕೈಕೊಂಡ ಮನೆತನಗಳನ್ನು ಸೂಚಿಸುತ್ತವೆ. ಮಠಗಳಲ್ಲಿ ಮೂರು ಬಗೆಯವು ಇದ್ದವು. ಓದಿಸುವ ಮಠಗಳಲ್ಲಿ ಓದುಬರೆಹ ಕಲಿಸಿದರೆ, ಸಾಲಿಮಠಗಳಲ್ಲಿ ನೂಲುವದು, ನೇಯುವದು, ಓಲೆಗಳಿಗೆ ನಕ್ಷೆ ಬಿಡಿಸುವದು, ಕಡತಗಳನ್ನು ತಯಾರಿಸುವದು, ಅವುಗಳಿಗೆ ರಕ್ಷಾಕವಚಗಳನ್ನು ಮಾಡುವದು ಮುಂತಾದವನ್ನು ಹೇಳಿಕೊಡುತ್ತಿದ್ದರು. ದೈನಂದಿನ ಹಲವಾರು ಕಸಬುಗಳಿಗೆ ಬೇಕಾಗುವ ಸಾಧನಗಳನ್ನು ತಯಾರಿಸುವ ಕ್ರಮ ಇತ್ಯಾದಿಗಳ ವಿವರ ಮಠಗಳಲ್ಲಿ ರಾಶಿಬಿದ್ದ ಕಡತಗಳಲ್ಲಿ ಕಂಡುಬಂದಿದೆ.

ಕೂಲಿಮಠ, ಶಬ್ದಮಣಿದರ್ಪಣಮಠ, ಟೀಕಿನಮಠ, ಟಿಪ್ಪಣಿಮಠ, ಸಂಪಾದನೆಯ ಮಠಗಳನ್ನು ಇಂದಿಗೂ, ಹುಬ್ಬಳ್ಳಿ, ಜಮಖಂಡಿ, ಅಬ್ಬಿಗೇರಿ ಮುಂತಾದ ಕಡೆ ಕಾಣಬಹುದಾಗಿದೆ.[೨೫] ಕೆಲವು ಮಠಗಳಲ್ಲಿ ಕೃಷಿ, ಚಿಕಿತ್ಸಾವಿಧಾನ, ಕಮ್ಮಾರಿಕೆಗಳನ್ನೂ ಹೇಳಿಕೊಡುತ್ತಿದ್ದರು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಜೈನಮಠಗಳಿದ್ದಂತೆ ಐಗಳ ಮಠಗಳು ಇದ್ದವು. ಅಲ್ಲಿ ಓದುಬರೆಹ, ಗಣಿತ, ಸಂಸ್ಕೃತ ಅಧ್ಯಯನದೊಂದಿಗೆ ಯಕ್ಷಗಾನ ಪ್ರಸಂಗಗಳನ್ನು ಕಲಿಸುತ್ತಿದ್ದರು.

ಮಠಗಳ ಆಡಳಿತ ಒಂದು ಕೋಮಿಗೆ ಸೇರಿದ್ದರೂ ಅಲ್ಲಿ ಇತರ ಜಾತಿಯ ವಿದ್ಯಾರ್ಥಿಗಳಿಗೂ ಶಿಕ್ಷಣ ದೊರೆಯುತ್ತಿತ್ತು ಎಂಬುದು ಗಮನಾರ್ಹ.

## ಸಂದರ್ಭ ಸೂಚಿ

೧. ಇ.ಐ. ಪು ೨೬೩-೬೫; ಎಸ್.ಐ.ಐ. IX (I) ೬೫.

೨. ಲೋಹಾಸನದ ರಚನೆಯ ವಿವರ ಮಾನಸೋಲ್ಲಾಸದಲ್ಲಿ ಬರುತ್ತದೆ. ಬಹುಶಃ ದೊಡ್ಡ ವರ್ಗಗಳಿಗೆ, ಸಮೂಹಕ್ಕೆ ವ್ಯಾಖ್ಯಾನ ಕೊಡಲು ಅನುಕೂಲವಾಗಲು ಎತ್ತರದ ಈ ಆಸನವನ್ನು ಅರಸರು ಗೌರವಸೂಚಕವಾಗಿ ವಿದ್ವಾಂಸರಿಗೆ ಕೊಡಮಾಡುತ್ತಿದ್ದರು. ಈ ಗೌರವ ಪಡೆದವರು ಲೋಹಾಸನಿ ಎನಿಸಿಕೊಳ್ಳುತ್ತಿದ್ದರು.

೩. ಇ.ಐ. XVI ಪು.೪ ರಿಂದ.
೪. ಅದೇ IV ಪು ೬೦ ಸಾಲೊಟಗಿ.
೫. ಎ.ಕ. XI ದಾವಣಗೆರೆ ೩೯.
೬. ಎಸ್.ಐ.ಐ. IX(I) ೨೬೭.
೭. ಕೆ.ಐ. I ಪು ೩.
೮. ಎ.ಕ. VII ಶಿಕಾರಪುರ ೧೮೬.
೯. ಇ.ಐ. XII ಪು ೧೫೦.
೧೦. ಜೆ.ಬಿ.ಬಿ.ಆರ್. ಎಸ್. IX ಪು.೨೭೫.
೧೧. ಎಸ್.ಐ.ಐ. IX (I) ಪು ೯೩ ಹೂವಿನ ಹಡಗಲಿ.
೧೨. ಎ.ಕ. VII ಶಿ.೧೮೫, ಎ.ಕ. ಅ ೧೩೮, ಜೆ.ಬಿ.ಬಿ.ಆರ್.ಎಸ್. ಪು ೨೭೫.
೧೩. ಎ.ಕ. XIII ಸಿರಾ-೨
೧೪. ಎಸ್.ಐ.ಐ. XI(II) ೧೪೨.
ಅದೇ ೧೭೪
ಇ.ಐ. XXXIV 7
೧೫. ಶಿವತತ್ವ ಚಿಂತಾಮಣಿ-ನೂತನ ಗಣಂಗಳ ಕಥೆ ಪದ್ಯ ೫, ಪು ೩೮೬.
೧೬. ಎ.ಕ. (ಹೊಸತು) ತಿ.ನ. ೨೩೮ ಶಾಸನದಲ್ಲಿ "ನಾಗರ, ಕಂನಡ, ತಿಗುಳಾರ್ಯವನೋದಿಸುವ ಬಾಲಶಿಕ್ಷೆ ಉಪಾಧ್ಯರು" ಎಂದಿದೆ ಅಂದರೆ ಸಂಸ್ಕೃತ, ಕನ್ನಡ, ತಮಿಳು, ಮರಾಠಿಗಳನ್ನು ಕಲಿಸುತ್ತಿದ್ದರು. 'ಹಳೆಬೀಡು ಪುರಾತನ ಚರಿತ್ರೆ'ಯಲ್ಲೂ ಇಮ್ಮಡಿ ನರಸಿಂಹ ಬಲ್ಲಾಳನು ಇಂಥ ವಿದ್ಯಾಶಾಲೆ ಇಡಿಸಿದ ವಿಚಾರ ಹೇಳಿದೆ. ಇತಿಹಾಸ ದರ್ಶನ (ಸಂಪುಟ II, ಸಂಚಿಕೆ 1) ಬೆಂಗಳೂರು ೧೯೮೭, ಪು ೧೮.
೧೭. ಎಸ್.ಐ.ಐ. IX (I) ಪು ೯೩.
೧೮. ಎ.ಕ. V ಅರಸಿಕೆರೆ ೧೩೮.
೧೯. ಎ.ಕ. VII ಶಿಕಾರಪುರ ೧೨೩.
೨೦. ಎಸ್.ಐ.ಐ. XV ೭೧
೨೧. ಎ.ಕ. VII ಶಿಕಾರಿಪುರ ೧೦೨.
ಅದೇ VIII ಸೊರಬ ೨೭೬.
ಎಸ್.ಐ.ಐ. XV ಮುತ್ತಗೆ ೩೨.
ಅದೇ ಹೊಂಬಳ ೭೩.
೨೨. ಕೋಡಿಯಮಠ
ಎ.ಕ. VII ೧೦೦, ೧೦೨, ೧೦೪, ೧೦೮.
೨೩. ಇ.ಐ. XIII ಪು.೪೧.
೨೪. ಎಸ್.ಸಿ. ನಂದಿಮಠ 'ಎ ಹ್ಯಾಂಡ್‌ಬುಕ್ ಆಫ್ ವೀರಶೈವಿಸಂ' ಧಾರವಾಡ ೧೯೪೨, ಪು.೯-೧೦.
೨೫. ಎಚ್. ದೇವೀರಪ್ಪ: 'ಲೇಖನಾಭಿವೃದ್ಧಿ' ಕರ್ನಾಟಕ ಭಾರತಿ ಪು ೪೫.

# ೮. ವೃತ್ತಿಯಲ್ಲಿ

ಕನ್ನಡ ನಾಡಿನ ವೃತ್ತಿಶಿಕ್ಷಣ ವಂಶಪಾರಂಪರಿಕವಾಗಿ ಬಂದಂತಹದು. ಅಂತೆಯೇ ಕುಲದ ಕಸಬು, ಕುಲವಿದ್ಯೆ ಎಂಬ ಅನ್ವರ್ಥಕ ನಾಮ ಅದಕ್ಕಿದೆ. ಹಲವಾರು ತಲೆಮಾರುಗಳಿಂದ ಶಿಲ್ಪಿ, ಚಿತ್ರಕಾರ, ಗುಡಿಗಾರ, ಸುವರ್ಣಕಾರ, ಕಮ್ಮಾರ, ಬಡಿಗ, ನೇಕಾರ, ಸಿಂಪಿ, ವಾದ್ಯಕಾರ, ನಾಟಕಕಾರ, ಸಂಗೀತಗಾರ, ವೈದ್ಯ, ಪುರೋಹಿತ, ಮಾಂತ್ರಿಕ ಮುಂತಾದವರೆಲ್ಲ ಹಿರಿಯರ ವೃತ್ತಿಯನ್ನೆ ಮುಂದುವರಿಸುತ್ತಿದ್ದರು. ಇದರಿಂದ ತೀರ ಎಳೆವಯಸ್ಸಿನಲ್ಲಿಯೇ ತರಬೇತಿ ಪ್ರಾರಂಭವಾಗುತ್ತಿತ್ತಲ್ಲದೇ ತಂದೆಯೇ ಶಿಕ್ಷಕನು ಆಗಿರುತ್ತಿದ್ದ. ಹಿರಿಯರಿಗಿಂತ ಮಿಗಿಲಾಗಿ ಮುನ್ನಡೆಯಬೇಕು ಎನ್ನುವವರು, ಇನ್ನಿತರ ಗುರುಗಳಿಂದಲೂ ತರಬೇತಿ ಪಡೆಯುತ್ತಿದ್ದರು. ತಮ್ಮ ವೃತ್ತಿಗೆ ಆಧಾರಭೂತವಾದ ಇನ್ನಿತರ ವಿಷಯಗಳನ್ನು ಅವರು ಕಡ್ಡಾಯವಾಗಿ ಕಲಿಯಬೇಕಿತ್ತು. ಇದರಿಂದ ಅವರು ತಮ್ಮ ವೃತ್ತಿಯಲ್ಲಿ ತಜ್ಞರೆನಿಸಿಕೊಳ್ಳುತ್ತಿದ್ದರು. ಆಸಕ್ತಿಯಿಲ್ಲದ ಮತ್ತು ಸಂಬಂಧಪಡದ ಕ್ಷೇತ್ರಗಳನ್ನು ಅರಿಯಲು ಅವರ ಬಳಿ ವೇಳೆ ಇರಲಿಲ್ಲ!

ರಾಜ್ಯದ ಮೂಲೆ ಮೂಲೆಗಳಲ್ಲಿ ಹರಡಿಕೊಂಡಿರುವ ವಾಸ್ತುಶಿಲ್ಪ ಮತ್ತು ಕಲಾಕೃತಿಗಳು, ಕನ್ನಡ ಶಿಲ್ಪಿಗಳ ಆಳವಾದ ಶಿಕ್ಷಣ-ತರಬೇತಿ ಮತ್ತು ಅಧ್ಯಯನಗಳ ಸ್ಥೂಲ ಕಲ್ಪನೆ ನೀಡುತ್ತವೆ. ಬಾದಾಮಿಯ ಗುಹಾಲಯಗಳು, ಶ್ರವಣಬೆಳ್ಗೊಳದ ಗೋಮಟೇಶ್ವರ ಮತ್ತು ಎಲ್ಲೋರದ ಕೈಲಾಸ ದೇವಾಲಯಗಳು ಅವರ ದುಡಿಮೆಯ ಆಳವನ್ನು ಪರಿಚಯಿಸುತ್ತವೆ. ಇವೆಲ್ಲ ಶಿಲ್ಪ ಚಮತ್ಕಾರಗಳು ಯಾಂತ್ರಿಕ ಸಹಾಯವಿಲ್ಲದೇ ಮಾನವ ಕೈಗಳಿಂದಲೇ ನಿರ್ಮಿತವಾದವು ಎಂದು ನೆನೆಸಿಕೊಂಡಾಗ ಅಚ್ಚರಿಯಾಗದೇ ಇದ್ದೀತೆ? ಈ ಶ್ರಮಕ್ಕಾಗಿ ಅವರಿಗೆ ಹೇಳಿಕೊಳ್ಳುವಂಥ ಪ್ರತಿಫಲ ಸಿಗುತ್ತಿರಲಿಲ್ಲ. ಅವು ಮಾಡುವದು ರಾಜಸೇವೆ, ಅದಕ್ಕಿಂತ ಮುಖ್ಯವಾಗಿ ಈಶಸೇವೆಯೆಂದು, ಪುಣ್ಯದ ಕೆಲಸವೆಂದು ಭಾವುಕತೆಯಿಂದ ಕೆಲಸವನ್ನು ನಿರ್ವಹಿಸುತ್ತಿದ್ದರು. ತಲೆ-ತಲಾಂತರಗಳಿಂದ ಬಂದ ಮನೆಯಲ್ಲೊ, ಗುಡಿಸಲಲ್ಲೊ ವಾಸವಾಗಿ, ರಾಜರು, ತುಂಡರಸರು, ಪಾಳೇಗಾರರು, ಇತರರು ಸ್ವಸಂತೋಷದಿಂದ ಕೊಡಮಾಡಿದ ಭೂಮಿ, ಕಾಣಿಕೆಯಿಂದ ಬಂದ ಉತ್ಪನ್ನದಿಂದಲೇ ತೃಪ್ತರಾಗಿ ತಂತಮ್ಮ ಕಾಯಕವನ್ನು ಕೈಕೊಳ್ಳುತ್ತಿದ್ದರು.

ಮಗನಿಗೆ ಐದು ವರ್ಷ ತುಂಬಿದಾಗ ಶಿಲ್ಪಿಯಾದವನು ಪುರೋಹಿತನಿಂದ ಶುಭ ಮುಹೂರ್ತ ಅರಿತು ಶಿಲ್ಪಕಲೆಯ ಶಿಕ್ಷಣ ಆರಂಭಿಸುತ್ತಿದ್ದ. ಮಗನಿಗೆ ಮಂಗಲಸ್ನಾನ ಮಾಡಿಸಿ, ಶುಚಿಯಾದ ಬಟ್ಟೆ ತೊಡಿಸಿ, ಸಾರಿಸಿ ರಂಗೋಲಿ ಹಾಕಿದ ಅಂಗಳದಲ್ಲಿ ಮಣೆಯ ಮೇಲೆ

ಕುಳ್ಳಿರಿಸುತ್ತಿದ್ದ. ಮಂಗಲವಾದ್ಯ ಇಲ್ಲವೆ ಜಾಗಟೆ ಬಾರಿಸುತ್ತಿದ್ದರೆ ಆಪ್ತೇಷ್ಟರ ಎದುರಿಗೆ ವಿದ್ಯಾರ್ಥಿಹುಡುಗನ ಹಣೆಗೆ ಶ್ರೀಗಂಧದ ತಿಲಕ ಹಚ್ಚಿ ಅವನಿಂದ 'ಶ್ರೀ' ಅಥವಾ 'ಸಿದ್ಧಂನಮಃ' ಹೇಳಿಸಿ ಕೈಯಲ್ಲಿ ಉಳಿ-ಸುತ್ತಿಗೆ ಕೊಟ್ಟು ಶಿಲೆಯಲ್ಲಿ 'ಓಂ'ಕಾರವನ್ನು ಕೊರೆಯಲು ಕಲಿಸುತ್ತಿದ್ದ. ಹೀಗೆ ತಂದೆಯೇ ಗುರು. ಮಗನೇ ಶಿಷ್ಯ. ದೇವ ದೇವತೆಯರನ್ನು ಮೆಚ್ಚಿಸುವ ರೂಪವನ್ನು ತಯಾರಿಸುವ ಕಲೆಯನ್ನು ಕರಗತ ಮಾಡಿಕೊಳ್ಳುವ ಯತ್ನ ಕಿರಿದೇನಲ್ಲ. ಮೊದಲ ವರ್ಷದಲ್ಲಿ ಹೂ-ಬಳ್ಳಿ, ಪ್ರಾಣಿಗಳ ರೂಪರೇಷೆಗಳನ್ನಷ್ಟೇ ಕಲಿಸಿದರೆ, ಎರಡನೇ ವರ್ಷದಲ್ಲಿ ಅವನ್ನು ಉಬ್ಬು ಚಿತ್ರಗಳನ್ನಾಗಿ ಮಾರ್ಪಡಿಸಬೇಕಿತ್ತು. ತಂದೆ, ಪ್ರತಿದಿನದ ಪ್ರಗತಿಯನ್ನು ಅವಲೋಕಿಸಿ, ತಿದ್ದಿ, ಮಾರ್ಗದರ್ಶನ ನೀಡುತ್ತಿದ್ದ. ಅದೆಷ್ಟೊ ಸಲ ತಂದೆ-ಮಕ್ಕಳು ತೀರ್ಥಯಾತ್ರೆಯ ನಿಮಿತ್ತದಿಂದ ಓಡಾಡಿ, ಶ್ರೇಷ್ಠ ಕಲಾಕೃತಿಗಳನ್ನು ನೋಡುತ್ತಿದ್ದರು, ಅಭ್ಯಸಿಸುತ್ತಿದ್ದರು. ಸಾವಕಾಶವಾಗಿ ಉಬ್ಬು ಚಿತ್ರಗಳನ್ನು ಶಿಲ್ಪವನ್ನಾಗಿ ಸಿದ್ಧಮಾಡಲು ತರಬೇತಿ ಕೊಡಲಾಗುತ್ತಿತ್ತು. ಕೊನೆಯಲ್ಲಿ ಶಿಲ್ಪದಲ್ಲಿ ಕುಸುರಿನ ಕೆಲಸ, ಮೆರುಗು ಕೊಡುವದು ಕಲಿಸಿದರೆಂದರೆ, ತರಬೇತಿ ಮುಗಿದಂತೆ. ಅನಂತರ ತರುಣ ಶಿಲ್ಪಿಯು ಸ್ವತಂತ್ರವಾಗಿ ಕೆಲಸ ಪ್ರಾರಂಭಿಸಬಹುದು, ಇಲ್ಲವೇ ಇನ್ನೊಬ್ಬ ಓಜ, ಅಥವಾ ಆಚಾರ್ಯನ ಸಹಾಯಕನಾಗಿ ದುಡಿಯಬಹುದಾಗಿತ್ತು.

ಮೂರ್ತಿ ಕಟೆಯುವದಿರಲಿ, ಗುಡಿ ಕಟ್ಟುವದಿರಲಿ, ಮೊದಲು ಮುಖ್ಯ ಶಿಲ್ಪಿಯನ್ನು ಗೊತ್ತುಪಡಿಸಿ, ಅವನಿಗೆ ವೀಳ್ಯ ಅಡಿಕೆ, ಕಾಯಿ, ಹಣ್ಣು, ಸುವರ್ಣಗಳನ್ನು 'ಸಂಚಕಾರ'(ಸನ್ಮಾನ) ವೆಂದು ಕೊಡುವದು ವಾಡಿಕೆ. ಅಂದಿನಿಂದ ಶಿಲ್ಪಿ ಮತ್ತು ಅವನ ತಂಡದವರು, ಕಾರ್ಯೋನ್ಮುಖಿಯಾಗುವರು. ಶಿಲ್ಪಸೂತ್ರಗಳ ನಿರ್ದೇಶನದಂತೆ, ತಮ್ಮ ಭಾವೀಕೃತಿಯ ರೂಪರೇಷೆಗಳನ್ನು ಮೊದಲಿಗೆ ಹಲಿಗೆ, ತಾಳೆಪತ್ರದಲ್ಲಿ ಗುರುತು ಹಾಕಿಕೊಳ್ಳುತ್ತಿದ್ದರು. ಆರೇಳು ಶತಕಗಳ ಹಿಂದಿನ ತಾಳೆಓಲೆಯಲ್ಲಿ ಚಿತ್ರಿಸಿದ ಧ್ವಜಸ್ತಂಭ(47) ಕಂಬಗಳ(48) ನಕ್ಷೆಗಳು ಮತ್ತು ಅದರಲ್ಲಿ ನಮೂದಿಸಿದ ಉದ್ದಗಲಳತೆಗಳ ಪ್ರಮಾಣಗಳು ಇಂದಿಗೂ ಲಭ್ಯವಿವೆ. ಮುಖ್ಯಸ್ಥನು ಅವರವರ ಯೋಗ್ಯತೆಯಂತೆ ಕೆಲಸಗಳನ್ನು ಸಹಾಯಕರಿಗೆ ಹಂಚಿ ಹಾಕುತ್ತಿದ್ದನು. ಕೊಟ್ಟ ಅವಧಿ ಮುಗಿಯುತ್ತ ಬಂದಾಗ, ಹಿಲಾಲು, ಸೊಡರುಗಳ ಬೆಳಕಿನಲ್ಲಿ ಇಡೀ ರಾತ್ರಿ ದುಡಿಯುವ ಪ್ರಸಂಗ ಬಾರದೇ ಇರುತ್ತಿರಲಿಲ್ಲ. ಸಕಾಲದಲ್ಲಿ ಹಿಡಿದ ಕೆಲಸ ಮುಗಿದಾಗ, ದಿಗ್ವಿಜಯದ ಗೆಲುವು ಶಿಲ್ಪಿಗಳದು. ಸಮಾರಂಭವೇರ್ಪಡಿಸಿ, ತಂಡದವರಿಗೆ, ಶಿಲ್ಪಿಗಳಿಗೆ ದೇವಸ್ಥಾನ ನಿರ್ಮಾಣಕ್ಕೆ ಕಾರಣರಾದವರು ಸನ್ಮಾನ ಮಾಡಿ, ಅವರ ಕೃತಿಯನ್ನು ದೇವರಿಗೆ ಮುಡಿಪು ಇಡುತ್ತಿದ್ದರು.

ಜಕಣಾಚಾರಿಯ ಶಿಲ್ಪಶಾಸ್ತ್ರದ ಜ್ಞಾನವನ್ನು ಅವನ ಮಗನೇ ಪ್ರಶ್ನಿಸಿ, ತಂದೆಯ ಕೃತಿ, ದೋಷಪೂರ್ಣವೆಂದು ಸಿದ್ಧಮಾಡಿದನೆಂಬ ಕಥೆ ಕರ್ನಾಟಕದಲ್ಲಿ ಪ್ರಚಲಿತವಿದೆ. ರಾಜ್ಯದ ವಿವಿಧ ಭಾಗಗಳಲ್ಲಿ ಹನ್ನೆರಡರಿಂದ ಹದಿನಾಲ್ಕನೇ ಶತಮಾನದವರೆಗೆ ರಚಿತವಾದ ದೇವಾಲಯಗಳೆಲ್ಲ ಅವನ ರಚನೆಗಳೇ! ಎಂದು ನಂಬುವವರಿದ್ದಾರೆ. ರಾತ್ರೆಯೊಂದರಲ್ಲಿ ಗುಡಿಯೊಂದನ್ನು ನಿಲ್ಲಿಸುವ ದೇವಶಿಲ್ಪಿಯಾಗಿದ್ದನಂತೆ. ಆದರೆ ಈ ಶಿಲ್ಪಿಯ ಬಗ್ಗೆ ಐತಿಹಾಸಿಕ

ದಾಖಲೆಯಿಲ್ಲ. ಅಜಂತ, ಎಲ್ಲೋರಗಳಿಗೆ ಹೋದ ದಕ್ಷಿಣದ ಶಿಲ್ಪಿ, ಆಚಾರಿಗಳಿಗೆ ಜಕಣಾಚಾರಿಗಳೆಂದು ಕರೆದಿರಬೇಕು. ಇದೊಂದು ಶೈಲಿಯನ್ನು ಪ್ರತಿನಿಧಿಸುವ ಶಬ್ದವಾಯಿತು. ಎಲ್ಲ ಕಲಾಕೃತಿಗಳು, ಭಗವಂತನಿಗೆ ಸಮರ್ಪಿತವೆಂಬ ಉತ್ಕಟ ಭಕ್ತಿ ಭಾವದಿಂದಲೇ ಮೂಡಿ ಬಂದಂಥವಾದ್ದರಿಂದ, ಆತನ ಸೃಷ್ಟಿಯಲ್ಲಿ ತಾವು ತೃಣಸಮಾನರೆಂಬ ನಮ್ರ ಭಾವನೆ ಬೆಳೆಸಿಕೊಂಡದ್ದರಿಂದ, ತಮ್ಮ ಹೆಸರು ಅಥವಾ ಚರಿತ್ರೆಯನ್ನು ಬಿಟ್ಟು ಹೋಗುವ ಬಗ್ಗೆ ಶಿಲ್ಪಾಚಾರ್ಯರು ಯತ್ನಿಸಲೂ ಇಲ್ಲ. ಯೋಚಿಸಲೂ ಇಲ್ಲ. ಅಂತೆಯೇ ಶ್ರವಣಬೆಳ್ಗೊಳದ ಶ್ರೇಷ್ಠ ಕೃತಿಯಾದ ಬಾಹುಬಲಿಯ ವಿಗ್ರಹವನ್ನು ಚಾವುಂಡರಾಯನು ಮಾಡಿಸಿದನು, ಎಂದು ಕಿರುಶಾಸನ ಸಾರುತ್ತದೆಯೇ ಹೊರತು ಅದನ್ನು ಕಟೆದ ಶಿಲ್ಪಿವರ್ಯರ ಬಗ್ಗೆ ಏನನ್ನೂ ಹೇಳಿಲ್ಲ. ಈ ನಿಸ್ವಾರ್ಥ ಸೇವೆಗೆ ಮೇರೆಯುಂಟೆ? ತಮ್ಮ ಹೆಸರು ಬರೆಯದ ಶಿಲ್ಪಿಗಳು ನಿರಕ್ಷರಿಗಳಿದ್ದರೆಂದು ಭಾವಿಸಕೂಡದು. ಕೆಲವೇ ಶಿಲ್ಪಿಗಳು ತಮ್ಮ ಕೃತಿಗಳ ಮೇಲೆ ಹಸ್ತಾಕ್ಷರ ಕೊರೆದು ತಮಗೂ ಓದುಬರೆಹ ಬರುತ್ತಿತ್ತು ಎಂದು ಸಿದ್ಧ ಮಾಡಿದ್ದಾರೆ.

ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳರ ಕಾಲದ ಕೆಲ ಶಿಲ್ಪಗಳ ಮೇಲೆ ಅವನ್ನು ಅರಳಿಸಿದವರ ಹೆಸರುಗಳಿವೆ. ಅದರಂತೆ ಸಮಕಾಲೀನ ಶಿಲಾಶಾಸನ, ತಾಮ್ರಪಟಗಳಲ್ಲಿಯೂ ಅವರ ಬಗ್ಗೆ ಕಿಂಚಿತ್ ಮಾಹಿತಿ ಸಿಗುವದರಿಂದ ನಮ್ಮ ಶಿಲ್ಪಿಶ್ರೇಷ್ಠರ ಬಗ್ಗೆ ಕೊಂಚವೇ ಅರಿಯುವಂತಾಗಿದೆ. ಅವರನ್ನು ರೂಪಾಕಾರಿಯೆನ್ನುತ್ತಿದ್ದರು. ಇದೇ ಮುಂದೆ 'ರೂವಾರಿ' ಆಯಿತು. ಚಿತ್ರದುರ್ಗದ ಶಾಸನವೊಂದರಿಂದ ಶಿಲ್ಪಿ ಮಹಾಕಾಳನು ಅಕ್ಷರಗಳ ನಡುವೆ ಸಿಂಹ, ಆನೆ, ಗಿಳಿ ಮುಂತಾದ ಪಶು-ಪಕ್ಷಿಗಳನ್ನು ಚಿತ್ರ ರೂಪದಲ್ಲಿ ನಿಪುಣತೆಯಿಂದ ಸೇರಿಸುತ್ತಿದ್ದನೆಂಬುದು ತಿಳಿಯುತ್ತದೆ.[೧] ಗುಬ್ಬಿ ತಾಲೂಕಿನ ತಾಮ್ರಪಟದಿಂದ ವೇರೂಳ (ಎಲ್ಲೋರ)ದ ಕೈಲಾಸ ದೇವಾಲಯದ ನಿರ್ಮಾಣಕ್ಕೆ, ಶಿಲ್ಪಸಿದ್ಧಾಂತದಲ್ಲಿ ಪಾರಂಗತರಾದ ಮುನಿಗಳೆಂದು ತಿಳಿದು ಬರುತ್ತದೆ. ಬೇಲೂರಿನ ಶಿಲಾಬಾಲಿಕೆಯರನ್ನು ಕಟೆದ ರೂವಾರಿ, ದಾಸೋಜ ಮತ್ತು ಅವನ ಮಗ ಜಾವಣರು, ಬಳ್ಳಿಗಾವಿಯಿಂದ ಬಂದವರು.[೨] "ಬಿರುದ ರೂವಾರಿ ಗೊಂದಳ ಬಡಿವ" ಬಿರುದು ತಂದೆಗಿದ್ದರೆ "ಬಿರುದ ರೂವಾರಿ ಮದನ ಮಹೇಶ" ಎಂಬುದು ಮಗನಿಗಿತ್ತು ಎಂದು ಶಾಸನಗಳಿಂದ ತಿಳಿಯುತ್ತದೆ. ಮಲ್ಲಿಯಣ್ಣ, ನಾಗೋಜರು ನಿರ್ಮಿಸಿದ ಮದನಿಕೆಯರ ಶಿಲ್ಪಗಳಲ್ಲಿ ಪಶು-ಪಕ್ಷಿಗಳನ್ನು ಮೂಡಿಸಿದ್ದಾರೆ. ನವರಂಗದಲ್ಲಿರುವ ಶಿಲ್ಪಗಳನ್ನು ಚಿಕ್ಕ ಹಂಪ, ಮಲ್ಲೋಜರು ಕೊರೆದಿದ್ದಾರೆ. ಇದರಂತೆ ಮಾಬಣ, ಮಾಬ, ಬೋಚಣ, ಚೆವುಗ, ದೇವೋಜ, ಕಾಳಿದಾಸ ಮೊದಲಾದ ರೂವಾರಿಗಳು, ಹಳೇಬೀಡಿನ ಹಲವಾರು ಸುಂದರ ಶಿಲ್ಪಗಳನ್ನು ರಚಿಸಿದ್ದಾರೆ. ಅನೇಕ ಹೊಯ್ಸಳ ದೇವಾಲಯಗಳ ಶಿಲ್ಪದಡಿಯಲ್ಲಿ ಈ ರೂವಾರಿಗಳ ಹಸ್ತಾಕ್ಷರಗಳನ್ನು ನೋಡಬಹುದಾಗಿದೆ. ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯವನ್ನು, ತೆಂಕಣ ದಿಸೆಯ ಸೂತ್ರಧಾರಿ ಗುಂಡ ಕಟ್ಟಿದನು.[೩] ಅದರಂತೆ ರೇವಡಿ ಓವಜ್ಜನು ಮಲ್ಲಿಕಾರ್ಜುನ ದೇವಾಲಯ ರಚಿಸಿದನು.[೪] ಪೊಯ್ಸಳಾಚಾರಿ, ತನ್ನನ್ನು ವಿದ್ಯಾವಂತನೆಂದು

ಕರೆದುಕೊಂಡು, ತಾನು ಉಳಿ ಮತ್ತು ಬಳ್ಳಿ ಹಿಡಿದವರ (ಸೂತ್ರಧಾರಿ ಅಥವಾ ಮೇಸ್ತ್ರಿಗಳು) ಚಟ್ಟ(ಛಾತ್ರ)ನೆಂದು ಉದ್ಗರಿಸಿದ್ದಾನೆ.[೫]

ಚಿತ್ರಕಲೆಯ ಶಿಕ್ಷಣಕ್ರಮ ಶಿಲ್ಪಕಲೆಯದಕ್ಕಿಂತ ಬಹಳ ಭಿನ್ನವಾಗಿರಲಿಲ್ಲ. ಕಲಿಯುವಿಕೆಯಲ್ಲಿ ಯಾವ ತೊಂದರೆಗಳೂ ಬಾರದಿರಲಿ ಎಂದು ವಿಘ್ನೇಶ್ವರನಿಗೆ ಪೂಜೆ ಸಲ್ಲಿಸಿ, ಕೆಂಪು, ಕಪ್ಪು ಬಣ್ಣಗಳಲ್ಲಿ ಸರಳ ವಕ್ರ ರೇಖೆಗಳನ್ನು ಎಳೆಯಲು ಪ್ರೋತ್ಸಾಹಿಸುತ್ತಿದ್ದರು. ನಿಸರ್ಗದಲ್ಲಿ ವಿಪುಲವಾಗಿ ದೊರೆಯುವ ಹುರಮುಂಜಿ(=ಕಾವಿ), ಇದ್ದಲು,(=ಮಸಿ) ಖನಿಜ ಪದಾರ್ಥ, ಎಲೆ, ಹೂಗಳನ್ನು ನುಣ್ಣಗೆ ಅರೆದು, ಸೋಸಿ ಬಣ್ಣಗಳನ್ನು ಸಿದ್ಧ ಮಾಡುವದನ್ನು ತಿಳಿಸಿ ಕೊಡುತ್ತಿದ್ದರು. ಬೇರೆ ಬೇರೆ ಅಳತೆಯ ತೆಂಗಿನ ಚಿಪ್ಪುಗಳಲ್ಲಿ ಸೇರಿಸಿದ ಈ ಬಣ್ಣಗಳಿಗೆ ಸರಿಪ್ರಮಾಣದಲ್ಲಿ ಗೋಂದು(ಅಂಟು) ಸೇರಿಸಿದರೆ ಅದನ್ನು ಬೇಕಾದಾಗ ಬಳಸಿಕೊಳ್ಳಬಹುದಾಗಿತ್ತು. ಇಣಚಿಯ ಕೇಶಗಳನ್ನು ರೇಶಿಮೆ ನೂಲಿನಿಂದ ಸುತ್ತಿ ಹಕ್ಕಿಯೊಂದರ ಗರಿಯಲ್ಲಿ ಸಿಕ್ಕಿಸಿದರೆಂದರೆ ಕುಂಚಗಳು ಸಿದ್ಧವಾಗಿಬಿಡುತ್ತಿದ್ದವು. ಕರಡು ಕೆಲಸಕ್ಕಾಗಿ ಕುರಿ, ಒಂಟೆ, ಹಂದಿಗಳ ರೋಮದ ಕುಂಚಗಳು ಇರುತ್ತಿದ್ದವು. ಕೈಯಿಂದಲೇ ಕಾಗದ ಸಿದ್ಧಮಾಡಿ, ಹಲಗೆಯೊಂದಕ್ಕೆ ಅಂಟಿಸಿ, ಒಣಗಿದ ನಂತರ ಬೆಣಚುಕಲ್ಲಿನಿಂದ ಉಜ್ಜಿ ಉಜ್ಜಿ ನುಣುಪಾಗಿ ಸುತ್ತಿದ್ದರು. ಕಾಗದದ ಬದಲಿಗೆ ಬಟ್ಟೆ ಬಳಸುವ ಪದ್ಧತಿಯೂ ಇತ್ತು. ವಿದ್ಯಾರ್ಥಿಯು ಚಿತ್ರ ಬಿಡಿಸಲು ಬೇಕಾಗುವ ಸಲಕರಣೆಗಳನ್ನು ತಯಾರಿಸಲು ಕಲಿತ ನಂತರ ಅವನಿಗೆ ಇದ್ದಲಿಯಿಂದ ಬಾಹ್ಯರೇಖೆಗಳನ್ನು ಹಾಕುವದನ್ನು ಕಲಿಸಲಾಗುತ್ತಿತ್ತು(49). ವರ್ಣ ಸಂಯೋಜನೆಯನ್ನು ಶಿಕ್ಷಕನೊಡನೆ ಚರ್ಚಿಸಿ ನಿರ್ಧರಿಸಬೇಕಾಗುತ್ತಿತ್ತು(50). ಎದ್ದು ಕಾಣುವಂತೆ ರೇಖೆಗಳನ್ನು 'ಕಡಪು' ಮಾಡುವದು, ಭಾವ ಹೊರ ಹೊಮ್ಮುವಂತೆ ವರ್ಣ ವಿನ್ಯಾಸ ಬಳಸುವ ಸಾಹಸವನ್ನು ಪಳಗಿದವರು ಮಾತ್ರ ಯತ್ನಿಸಬಹುದಾಗಿತ್ತು(51).

ಕಾಗದ, ಬಳಕೆಗೆ ಬರುವ ಮೊದಲು ತಾಳೆಗರಿಗಳನ್ನೆ ಚಿತ್ರ ಬಿಡಿಸುವದಕ್ಕಾಗಿ ಬಳಸಿಕೊಳ್ಳಲಾಗುತ್ತಿತ್ತು(52). ತಮ್ಮ ಕುಲದೇವತೆಯ ಹೆಸರನ್ನು ಸ್ಮರಿಸಿ, ಕಂಟದಿಂದ ಹಾವು, ನಾಯಿ(53)ಗಳಂತಹ ಪ್ರಾಣಿಗಳನ್ನು ರೂಪಿಸುತ್ತಿದ್ದರು. ಈ ಚಿತ್ರಗಳು ಯಾವ ಪ್ರಾಣಿಗಳನ್ನು ಪ್ರತಿನಿಧಿಸುತ್ತವೆ? ಎಂದು ನಿರ್ಧರಿಸುವದು ಕಷ್ಟದ್ದಾಗುತ್ತಿದ್ದುದರಿಂದ ಅವುಗಳ ಹೆಸರುಗಳನ್ನು ನಮೂದಿಸುತ್ತಿದ್ದರು. ಕೆಲವು ವಿದ್ಯಾರ್ಥಿಗಳು ಬಿಡಿಸಿದ್ದು ಏನು ಎಂದು ಅವರಿಗೇ ಅರಿಯದ್ದರಿಂದ ಅವುಗಳನ್ನು ಹೆಸರಿಸುವ ತೊಂದರೆಯನ್ನೂ ತೆಗೆದುಕೊಳ್ಳಲಿಲ್ಲ(54)! ನಾಯಿಯನ್ನು ಹೋಲುವ ಪ್ರಾಣಿ ಯಾವುದು? ಎಂದು ಗುರುತಿಸುವದು ಪ್ರಾಣಿಶಾಸ್ತ್ರಜ್ಞರಿಗೂ ಕಷ್ಟದ ಕೆಲಸ. ಅದರಂತೆ ಬಾಹ್ಯಲೋಕದ ಸ್ತ್ರೀಯರ ಚಿತ್ರ(55)ಗಳನ್ನು ವಿದ್ಯಾರ್ಥಿಗಳು ಕಲ್ಪನಾಶಕ್ತಿಯಿಂದಲೇ ಬಿಡಿಸುತ್ತಿದ್ದಿರಬೇಕು. ಅಕ್ಷರಾಭ್ಯಾಸ, ನೃತ್ಯ, ಹಾಡುಗಾರಿಕೆ, ಆಭರಣ ತಯಾರಿಕೆಗಳನ್ನು ವಿವಿಧ ಶಿಕ್ಷಕರಿಂದ ಹೇಳಿಸಿಕೊಳ್ಳುತ್ತಿದ್ದರು. ಆಯಾ ವೃತ್ತಿಗಳ ಗೊಂದಣಗಳು (ಶ್ರೇಣಿಗಳು) ಶಿಕ್ಷಣದ ಏರ್ಪಾಡು ಮಾಡುತ್ತಿದ್ದವು.

ಕಲೆಗಳ ತರಬೇತಿಯ ಅವಧಿಯನ್ನು ಗುರು-ಹಿರಿಯರು ನಿರ್ಧರಿಸುತ್ತಿದ್ದರು("ಕಾಲಂ ಕೃತ್ವಾ ಸುನಿಶ್ಚಿತಂ"). ಕಲಿಯುವ ಅವಧಿಯಲ್ಲಿ ಊಟ-ವಸತಿಗಳ ಏರ್ಪಾಡನ್ನು ಶಿಕ್ಷಕನೇ ಮಾಡುತ್ತಿದ್ದನು. ಶಿಷ್ಯವೃಂದದ ನೆರವಿನಿಂದ ತಯಾರಿಸಿದ ಕೃತಿಗಳಿಂದ ಬರುವ ಉತ್ಪನ್ನವನ್ನು ಇದಕ್ಕೆ ಬಳಸಲಾಗುತ್ತಿತ್ತು.[೬] ಗುರುಸ್ಥಾನದಲ್ಲಿದ್ದವನು ಉಮೇದುವಾರರಿಂದ ವೈಯಕ್ತಿಕ ಕೆಲಸಗಳನ್ನು ಮಾಡಿಸುವಂತಿರಲಿಲ್ಲ("ನ ಚ ಅನ್ಯತ್ ಕಾರಯೇತ್ ಕರ್ಮ"). ಈ ಪರಿಪಾಠವನ್ನು ಉಲ್ಲಂಘಿಸಿದವರನ್ನು ಅರಸನು ಶಿಕ್ಷಿಸಬಹುದಾಗಿತ್ತು. ತರಬೇತಿಯ ನಂತರ ವಿದ್ಯಾರ್ಥಿಗಳು ಸಾಧ್ಯವಿದ್ದಷ್ಟು ಸಂಚಾರ ಕೈಕೊಂಡು ತಜ್ಞ ಕಲಾಕಾರರ ಕೃತಿಗಳನ್ನು ಅಭ್ಯಸಿಸುತ್ತಿದ್ದರು. ಮಳೆ, ಗಾಳಿ, ಜನರ ದುರ್ಲಕ್ಷ್ಯ ಮತ್ತು ವಿಧ್ವಂಸಕ ಚಟುವಟಿಕೆಗಳಿಂದ ನಮ್ಮ ಹೆಚ್ಚಿನ ಚಿತ್ರಸಂಪತ್ತು ನಷ್ಟವಾಗಿ ಹೋಗಿದೆ. ಆದರೂ ಹಂಪೆ, ಲೇಪಾಕ್ಷಿ, ಸೀಬಿ, ಶ್ರವಣಬೆಳ್ಗೊಳ, ಶ್ರೀರಂಗಪಟ್ಟಣ, ಮೈಸೂರುಗಳಲ್ಲಿ ಅಳಿದುಳಿದ ಚಿತ್ರಗಳೇ ನಮ್ಮ ಅಭಿಮಾನದ ಆಸ್ತಿಯಾಗಿವೆ.

ಸುಮಾರು ಐದು ಶತಕಗಳ ಹಿಂದೆ, ಪೋರ್ಚುಗೀಸರ ಧರ್ಮಾಂತರದಿಂದ ತಪ್ಪಿಸಿಕೊಳ್ಳಲು ಕರ್ನಾಟಕದ ಕರಾವಳಿಗೆ ಆಗಮಿಸಿದ ಕಾವಿ(ಹುರಮುಂಜಿ)ಯ ಕಲಾಕಾರರು ಈ ಕಲೆಯನ್ನು ಬಳಸಿ, ಇಲ್ಲಿಯ ದೇವಾಲಯಗಳನ್ನು ಏಕವರ್ಣೀಯ ಚಿತ್ರಗಳಿಂದ ಅಲಂಕರಿಸಿದರು. ಸ್ಥಳೀಯ ವಿದ್ಯಾರ್ಥಿಗಳು, ಗೋವಾ, ಮಾಲವಣ, ರತ್ನಾಗಿರಿಗಳ ಗುರುಗಳಿಂದ ಈ ಕಲೆಯನ್ನು ತಮ್ಮದನ್ನಾಗಿ ಮಾಡಿಕೊಂಡರು. ರಾಮಾಯಣ, ಮಹಾಭಾರತ, ಭಾಗವತ, ಶಿವಪುರಾಣಗಳನ್ನು ಕಂಠಸ್ಥ ಮಾಡಿಕೊಂಡ ಗುರುವು ಪ್ರತಿಯೊಂದು ವ್ಯಕ್ತಿಯನ್ನು ಹೇಗೆ ರೂಪಿಸಬೇಕೆಂದು ವಿವರಿಸುತ್ತಿದ್ದನು. ಯಾವುದಾದರೂ ಪೌರಾಣಿಕ ಘಟನೆಯನ್ನು ಕಾಗದದ ಮೇಲೆ ರೂಪಿಸಿ, ಗುಂಡುಸೂಜಿಯಿಂದ ಚುಚ್ಚಿ ಹಸಿ ಗೋಡೆಗೆ ವರ್ಗಾಯಿಸಿ ಕೊಳ್ಳುತ್ತಿದ್ದರು. ನಂತರ ಕಡಲ ಸಿಂಪುಗಳಿಂದ ತಯಾರಿಸಿದ ಬೆಣ್ಣೆಯಂತಹ ಸುಣ್ಣದಲ್ಲಿ ಹುರಮುಂಜಿ ಸೇರಿಸಿ ಹದವಾದ ಮಿಶ್ರಣವನ್ನು ಗೋಡೆಗೆ ಲೇಪಿಸಿ, ಚೂಪಾದ ಕಂಟದಿಂದ ಗೀರುಗಳನ್ನು ಎಳೆಯುತ್ತಿದ್ದರು. ಶುಭ್ರ ಬಿಳಿ ಹಿನ್ನೆಲೆಯಲ್ಲಿ ಕೆಂಪು ಚಿತ್ರಗಳು ಅತ್ಯಾಕರ್ಷಕ ವಾಗಿರುತ್ತಿದ್ದವು. ಧರ್ಮಿಷ್ಠರು, ಧನಿಕರು, ರಸಿಕರು, ತಮ್ಮ ಇಷ್ಟದೇವತೆ, ಪೂರ್ವಜರ ಚಿತ್ರಗಳನ್ನು ಸ್ವಗೃಹಗಳಲ್ಲಿ ನಿರ್ಮಿಸಿಕೊಳ್ಳುತ್ತಿದ್ದರು. ಹೆಸರುಗಳ ವಿವರಗಳನ್ನು ದೇವನಾಗರಿ ಲಿಪಿಯಲ್ಲಿ ಬರೆದಿರುವದು ಚಿತ್ರಗಳ ವೈಶಿಷ್ಟ್ಯ. ಇಂದು ಸಿಮೆಂಟ್, ಡಿಸ್‌ಟೆಂಪರ್‌ಗಳೇ ಗೋಡೆಗಳನ್ನು ಆಳುವ ಅಧಿಪತಿಗಳಾಗಿದ್ದರಿಂದ ಕಾವಿ ಚಿತ್ರಗಳು ನಿರ್ಗತಿಕವಾಗಿವೆ. ಇಂಥ ಸ್ಥಿತಿಯಲ್ಲಿ ಈ ಕಲೆಯನ್ನು ಕಲಿಯುವವರು ಯಾರು?

ಹಿಂದೊಮ್ಮೆ ಹಿತ್ತಾಳೆ, ಕಂಚು, ಪಂಚಲೋಹಗಳ ವಿಗ್ರಹಗಳಿಗೆ ವಿಪರೀತ ಬೇಡಿಕೆಯಿತ್ತು. ಇವುಗಳಲ್ಲಿ ಮಿಗಿಲೆನಿಸಿದ ಕಂಚುಗಾರರು ಮತ್ತು "ಸದ್ವಿದ್ಯಾಧಿಕರಾದ ಪಂಚಾಳರು"[೭] ಕರ್ನಾಟಕದಲ್ಲಿ ಇದ್ದರು. ನಂತರ ತಮಿಳುನಾಡಿನ ಅನೇಕ ಕುಟುಂಬಗಳು ಕರ್ನಾಟಕದ ವಿವಿಧ ಭಾಗಗಳಲ್ಲಿ ಬೀಡುಬಿಟ್ಟಿದ್ದರು. ಅವರ ಮನೆಗಳೇ ಪುಟ್ಟ ಕಾರಖಾನೆಗಳಂತೆ, ವಿದ್ಯಾಲಯಗಳಂತೆ ಇರುತ್ತಿದ್ದವು. ವಿವಿಧ ಧಾತುಗಳನ್ನು ಕೊಂಡು ತಂದು ಕರಗಿಸಿ ಪ್ರತಿಮೆಗಳನ್ನು ಎರಕ

ಹೊಯ್ಯುವದು ಕಠಿಣ ಕೆಲಸವಾಗಿತ್ತು. ನಂತರ ಅವನ್ನು ತಿಕ್ಕಿ, ತಿದ್ದಿ, ಹೊಳಪು ಹಾಕಬೇಕಾಗಿತ್ತು. ಈ ಕಲೆ ಕರಗತ ಮಾಡಿಕೊಳ್ಳುವವರು ದಿನಕ್ಕೆ ಹತ್ತು ಹನ್ನೆರಡು ತಾಸುಗಳ ಕಠಿಣ ಪರಿಶ್ರಮಕ್ಕೆ ಸಿದ್ಧವಿರಲೇಬೇಕಾಗಿತ್ತು. ಅಲ್ಲದೇ ಕಲಾಕೃತಿಗಳನ್ನು ಮಾರಲು ಊರೂರು ಕೇರಿ ಕೇರಿ ಅಲೆಯಬೇಕಾಗಿತ್ತು. ಸಂತೆ, ಜಾತ್ರೆಗಳಲ್ಲಿ ಇಂಥ ಸರಕುಗಳು ತುಂಬ ಬರುತ್ತಿದ್ದವು. ಇಂದು ವಿವಿಧ ದೇವಾಲಯಗಳಲ್ಲಿ ಜಿನಾಲಯಗಳಲ್ಲಿ ಕಂಡುಬರುವ ಸುಂದರ ಪಂಚಲೋಹದ ವಿಗ್ರಹಗಳ ಹಿಂದಿನ ಕಲೆ ಮತ್ತು ಕಠಿಣ ಶ್ರಮಗಳನ್ನು ನೆನೆಸಿಕೊಂಡರೆ ಈ ಕಲೆಯನ್ನು ದುರ್ಲಕ್ಷಿಸಿ ನಾವು ಅದೆಷ್ಟು ಹಾನಿ ಮಾಡಿಕೊಂಡಿದ್ದೇವೆ! ಎಂಬ ಕಲ್ಪನೆ ಬರುತ್ತದೆ.

ಕರಾವಳಿಯ ಯಕ್ಷಗಾನ, ವಿಶ್ವದ ಲಕ್ಷ್ಯವನ್ನು ಸೆಳೆದಿದೆ. ಈ ಕಲೆಯನ್ನು ಕರಗತ ಮಾಡಿಕೊಳ್ಳಲು ವಿದ್ಯಾರ್ಥಿಗಳು ಸಾಕಷ್ಟು ಬವಣೆ ಪಡುತ್ತಿದ್ದರು. ಎಳೆಯ ವಯಸ್ಸಿನಲ್ಲಿಯೇ ವೃತ್ತಿಮೇಳಗಳೊಂದಿಗೆ ಅವರ ವೇಷ-ಭೂಷಣಗಳ 'ಪೆಟಾರೆಗಳನ್ನು'(ಬೆತ್ತದ ಪೆಟ್ಟಿಗೆಗಳನ್ನು) ಹೊತ್ತು ಊರೂರು ಅಲೆಯಬೇಕು. ಅಲ್ಲಿ ಅಡಿಗೆ ಮಾಡುವದು, ಯಕ್ಷಗಾನ ಆಟವಾಡುವ ಸ್ಥಳದಲ್ಲಿ 'ರಂಗ' ನಿರ್ಮಿಸುವದು (ಹೊಂಡ ತೋಡಿ ನಾಲ್ಕು ಕಂಬಗಳ ರಂಗ ನಿರ್ಮಿಸಿ ಮಾವಿನ ಎಲೆಗಳ ತೋರಣ ತೂಗಿ ಬಿಡುವದು), ಪ್ರೇಕ್ಷಕರ ಉತ್ಸಾಹ ಹಿಗ್ಗಿಸಲು ಕೋಡಂಗಿ (ಹನುಮನಾಯಕ)ಯಾಗಿ ಪಾತ್ರವಹಿಸುವದು, ಮುಂತಾದವು ಉಮೇದುವಾರರಿಗೆ ತಮ್ಮ ತರಬೇತಿಯನ್ನು ಒರೆಗಲ್ಲಿಗೆ ಹಚ್ಚಲು ಅವಕಾಶ ಒದಗಿಸುತ್ತಿದ್ದವು. ಹಲವಾರು ವರ್ಷಗಳನ್ನು ಈ ರೀತಿ ಕಳೆದ ಮೇಲೆ ಕಟ್ಟುವೇಷ, ಹೆಣ್ಣು ವೇಷಗಳು ದಕ್ಕಬಹುದು. ವಿದ್ಯಾರ್ಥಿ ಭಾಗವತನು ಮೊದಲು ಬಂದು ಒಂದೆರಡು ಗಂಟೆ ಪ್ರಸಂಗದ ಹಾಡು ಹಾಡಿ, ಯಕ್ಷಗಾನ ನಡೆಸಿದ ನಂತರ ಮುಖ್ಯ ಭಾಗವತನು ಪ್ರತ್ಯಕ್ಷನಾಗುತ್ತಿದ್ದ. ಮಳೆಗಾಲದಲ್ಲಿ ತಮ್ಮ ಊರಿನ ದೇವಸ್ಥಾನದ ಪೌಳಿಯಲ್ಲಿ ಕಲೆತು, ಈ ವಿದ್ಯಾರ್ಥಿಗಳು ಹೊಸ ಹೊಸ ಪಾತ್ರಗಳನ್ನು ರೂಢಿಸಿಕೊಳ್ಳುತ್ತಿದ್ದರು. 'ಪ್ರಸಂಗ'ಗಳಲ್ಲಿ ಪರಿಣತಿ ಪಡೆಯಬೇಕಾದರೆ ಐಗಳ ಮಠದಲ್ಲಿ ಸೇರಿದಾಗಲೇ ಲಭ್ಯವಿದ್ದವುಗಳನ್ನು ಕಂಠಪಾಠ ಮಾಡಿಕೊಳ್ಳುತ್ತಿದ್ದರು. ಇದರ ಜೊತೆಗೆ ಸ್ವತಃ ಬಣ್ಣ ಬಳಿದುಕೊಂಡು ಅಲಂಕಾರಗಳನ್ನು ಮಾಡಿಕೊಳ್ಳುವದನ್ನು ರೂಢಿಸಿಕೊಳ್ಳಲೇಬೇಕಾಗಿತ್ತು.

ಕ್ರಿ.ಶ. ಹನ್ನೆರಡನೆ ಶತಕದ ಪೂರ್ವದಿಂದಲೇ ಕರ್ನಾಟಕದಲ್ಲಿ ಸಂಗೀತ, ಪ್ರಬುದ್ಧ ರೀತಿಯಲ್ಲಿ ಅಭ್ಯಸಿಸಲ್ಪಡುತ್ತಿತ್ತು. ಅಂತಲೇ ಸಂಗೀತವನ್ನು ಶಾಸ್ತ್ರೋಕ್ತವಾಗಿ ಕಲಿಯಲು ಸಹಾಯವಾಗುವಂತೆ ಸಂಗೀತ ಸಾರ್ವಭೌಮನೆಂದು ಹೆಸರಾದ ಚಾಲುಕ್ಯ ಸೋಮೇಶ್ವರನು ತನ್ನ ಮಾನಸೋಲ್ಲಾಸದಲ್ಲಿ ಒಂದು ಬೃಹತ್ ಅಧ್ಯಾಯವನ್ನೇ ಸಂಗೀತಕ್ಕೆ ಮೀಸಲಿರಿಸಿದ್ದಾನೆ. ಅದರಲ್ಲಿ ಆಗ ಕರ್ನಾಟಕದಲ್ಲಿ ಬಳಕೆಯಲ್ಲಿದ್ದ ತಂತಿವಾದ್ಯ, ಊದುವ ವಾದ್ಯ ಮತ್ತು ಬಾರಿಸುವ ವಾದ್ಯಗಳ ರಚನೆ, ಬಳಸುವ ವಿಧಾನಗಳನ್ನು ವಿವರಿಸಲಾಗಿದೆ.[೮] ಹಾಡುಗಾರಿಕೆಯ ಹಾಗೆಯೇ ವಿವಿಧ ರಾಗಗಳನ್ನು ಪರಿಚಯಿಸಿ, ಅವುಗಳ ಲಕ್ಷಣ, ತಾಲ, ಲಯಗಳನ್ನು, ಹಾಡುವ ಋತು ಹಾಗೂ ಸಮಯ ವಿಧಾನಗಳನ್ನು ಸೇರಿಸಲಾಗಿದೆ. ಅನಂತರ ದಕ್ಷಿಣ ಭಾರತದಲ್ಲಿ ಪ್ರಕಟವಾದ ಗ್ರಂಥಗಳು ಈ ಕೃತಿಯನ್ನೇ ಆಧರಿಸಿವೆ ಎಂದು ಇಲ್ಲಿ ಸ್ಮರಿಸಿಕೊಳ್ಳಬಹುದು. ಇದು

ಶಾಸ್ತ್ರೀಯವಾಗಿ ಕಲಿಯುವವರಿಗೆ ಸಹಾಯವಾದರೆ, ಜನಸಾಮಾನ್ಯರ ಹಾಡುಗಾರಿಕೆಗೆ ಪುರಂದರದಾಸರ ಕೊಡುಗೆ ದೊಡ್ಡದು. ಸ್ವತಃ ಹಾಡುತ್ತ, ಕುಣಿಯುತ್ತ ಇತರರು ಸುಲಭದಲ್ಲಿ ಹಾಡಿ, ಹಾಡಿಸಿ ಸಂತೋಷ ಪಡುವಂತಹ ಅಸಂಖ್ಯ ಹಾಡುಗಳನ್ನು ರಚಿಸಿದರು. ಇದರಿಂದಾಗಿ ಹಳ್ಳಿ ಹಳ್ಳಿಗಳಲ್ಲಿ ಪದಗಳನ್ನು ಹಾಡುವವರು ಹೆಚ್ಚಾದರು. ಬಡವರು-ಸಿರಿವಂತರೆಂಬ ಭೇದವಿಲ್ಲದೇ ಎಲ್ಲರೂ ಸಂಗೀತಪ್ರೇಮಿಗಳಾದರು. ಜೊತೆಗೆ ಸಂಗೀತದ ಆರಂಭದ ಗೀತೆಗಳನ್ನು ರಚಿಸಿದ ಶ್ರೇಯಸ್ಸು ಪುರಂದರದಾಸರಿಗೆ ಹೋಗುತ್ತದೆ. ಅವರ ಸರಳ ವರಸೆ, ಜಂಟಿ ವರಸೆ, ಅಲಂಕಾರ ಗೀತಗಳು ಸಂಗೀತದ ವಿದ್ಯಾರ್ಥಿಗಳಿಗೆ ಚಿರಪರಿಚಿತ. ಭಾಷೆ ಪ್ರದೇಶ ಭೇದವಿಲ್ಲದೇ ದಕ್ಷಿಣದಲ್ಲೆಲ್ಲ ಅವರ ನಾಲ್ಕು ಪಿಳ್ಳಾರಿ ಗೀತೆಗಳನ್ನು (ಗಣಪತಿಯ ಸ್ತುತಿ) ಎಲ್ಲರೂ ಪ್ರಾರಂಭದಲ್ಲಿ ಅಭ್ಯಸಿಸುತ್ತಾರೆ.

ಹದಿನೇಳನೆಯ ಶತಮಾನದಲ್ಲಿ ನಿಜಗುಣ ಶಿವಯೋಗಿಗಳು, "ವಿವೇಕ ಚಿಂತಾಮಣಿ" ಯಲ್ಲಿ ರಾಗ ಪ್ರಕಾರಾದೀ ಸಂಗೀತದ ವಿವಿಧ ಸೂತ್ರಗಳನ್ನು ವಿವರಿಸಿ, ಅದಕ್ಕೊಂದು ಕೈಪಿಡಿಯ ರೂಪ ಕೊಟ್ಟು ಸಂಗೀತ ಶಿಕ್ಷಣಕ್ಕೆ ಭದ್ರ ಬುನಾದಿ ಹಾಕಿದರು. ಹದಿನೆಂಟನೆಯ ಶತಮಾನದಲ್ಲಿ ತ್ಯಾಗರಾಜರಿಗೆ ಸಂಗೀತ ಪ್ರೇರಣೆ ಒದಗಿದ್ದು ಪುರಂದರದಾಸರ ಪದಗಳಿಂದ, ಎಂದು ಹೇಳಲಾಗುತ್ತಿದೆ. ವಿಜಯನಗರ ಕಾಲದಿಂದ ಆಂಧ್ರ-ಕರ್ನಾಟಕಗಳಲ್ಲಿ ಲಲಿತಕಲೆಗಳು ಏಕರೂಪತೆ ತಾಳಿದ್ದವು. ಆಗಿನ್ನೂ ಭಾಷಾ ಭೇದಗಳ ಭೂತ, ದೈನಂದಿನ ವ್ಯವಹಾರಗಳಿಗೆ ಅಡ್ಡಿ ಒದಗಿಸಿರದ್ದರಿಂದ ಮೊದಲಿಗೆ ಕನ್ನಡ ರಚನೆಗಳು ತೆಲುಗು ದೇಶದಲ್ಲೂ, ತೆಲುಗು ರಚನೆಗಳು, ತ್ಯಾಗರಾಜರ ನಂತರ ಕನ್ನಡ ದೇಶದಲ್ಲೂ ಜನಪ್ರಿಯವಾದವು.

ಸಂಗೀತ ತರಬೇತಿಗೆ ಗುರುಗಳ ಮನೆಯಲ್ಲಿದ್ದೇ ಶಿಷ್ಯಂದಿರು ಕಲಿಯುವದು ವಾಡಿಕೆಯಾದರೂ, ಸ್ತ್ರೀಯರಿಗೆ ಗುರುಗಳು ತಮ್ಮ ಇಲ್ಲವೇ ಶಿಷ್ಯೆಯ ಮನೆಯಲ್ಲಿ ಪಾಠ ಹೇಳುತ್ತಿದ್ದರು. ಇಂಥ ಚಿತ್ರಗಳು ಅಲ್ಲೊಂದು ಇಲ್ಲೊಂದು ಕಣ್ಣಿಗೆ ಬೀಳುತ್ತವೆ. ಶಿಲ್ಪವೊಂದರಲ್ಲಿ, ಶಿಕ್ಷಕನು ಕೈಯೆತ್ತಿ ಭಾವಪೂರ್ಣವಾಗಿ ಕಲಿಸುತ್ತಿದ್ದಾಗ, ವಿದ್ಯಾರ್ಥಿನಿಯು ವೀಣೆ ನುಡಿಸುತ್ತ ಹಾಡುಗಾರಿಕೆಯಲ್ಲಿ ಹಿಂಬಾಲಿಸುತ್ತಿದ್ದಾಳೆ(56). ಇನ್ನೊಂದು ಚಿತ್ರದಲ್ಲಿ ರಾಜಕುಮಾರಿ ಹಿಂದಿನ ದಿನ ಕಲಿತ ಪಾಠವನ್ನು ತಪ್ಪಾಗಿ ಒಪ್ಪಿಸಿದಾಗ, ಶಿಕ್ಷಕನು ಆಕ್ಷೇಪವೆತ್ತುವದನ್ನು ರೂಪಿಸಲಾಗಿದೆ(57).

ಪರೋಪಕಾರಕ್ಕೆ ಮೀಸಲಾದ ವೃತ್ತಿ, ವೈದ್ಯಕೀಯ. ಇದರಲ್ಲಿ ಅಪಾರ ವಿಶ್ವಾಸವಿಟ್ಟ ಕನ್ನಡಿಗರು ಪ್ರಾಚೀನ ಕಾಲದಿಂದ ಆ ವಿದ್ಯೆಯನ್ನು ತಮ್ಮ ಒಬ್ಬ ಪುತ್ರ ಇಲ್ಲವೇ ಶಿಷ್ಯನಿಗೆ ಕಲಿಸುತ್ತಿದ್ದರು.' ಕಾಡು-ಮೇಡುಗಳಲ್ಲಿ ಅಲೆದು ವಿವಿಧ ಜಾತಿಯ ಸಸ್ಯಗಳನ್ನು ಗುರುತಿಸಿ, ಒಂದರ ತೊಗಟೆ, ಇನ್ನೊಂದರ ಬೇರು, ಮಗುದೊಂದರ ಹೂ, ಕಾಯಿ, ಹಣ್ಣುಗಳನ್ನು, ಬೀಜಗಳನ್ನು ಕಲೆ ಹಾಕುತ್ತಿದ್ದರು. ಔಷಧಕ್ಕೆ ಬಾರದ ಒಂದೂ ಸಸ್ಯವಿಲ್ಲವೆಂದು ನಮ್ಮವರ ಗ್ರಹಿಕೆ. ಕಲೆ ಹಾಕಿದವುಗಳನ್ನು ಒಣಗಿಸಿ, ಪುಡಿಮಾಡಿ, ಹೆಸರಿಸಿ ಕೆಡದಂತೆ ಸಂಗ್ರಹಿಸಿ ಇಡುತ್ತಿದ್ದರು. ಸ್ಥಳೀಯವಾಗಿ ಸಿಗದವುಗಳನ್ನು ಕಾಶ್ಮೀರ, ಕೇರಳದವರೆಗಿನ ಪ್ರದೇಶಗಳಿಂದ

ತರಿಸಿಕೊಳ್ಳಲಾಗುತ್ತಿತ್ತು. ಇವುಗಳನ್ನು ಕೊಟ್ಟು ಕೊಳ್ಳುವುದರಿಂದ ಹಣಕ್ಕೆ ಪ್ರಾಧಾನ್ಯವಿರಲಿಲ್ಲ. ಹಳ್ಳಿಗಳಲ್ಲಿ, ಊರುಕೇರಿಗಳಲ್ಲಿ ಯಾರಿಗೆ ಜಡ್ಡಾದರೂ, ಜನ ವೈದ್ಯರಲ್ಲಿ ಧಾವಿಸುತ್ತಿದ್ದರು.[೧೦] ಅವನು ಶಿಷ್ಯನಿಂದ ಬೇಕಾದ ಗಿಡ, ಮೂಲಿಕೆಗಳನ್ನು ತರಿಸಿ, ತೇದು, ಬೆರಸಿ, ಸೇವಿಸುವ ಕ್ರಮ ಹೇಳಿ, ಬೀಳ್ಕೊಡುತ್ತಿದ್ದ. ಈ ಎಲ್ಲ ಸೇವೆ ಉಚಿತವಾಗಿ ನಡೆಯುತ್ತಿತ್ತು. ವೈದ್ಯರಿಂದ ಉಪಕೃತರಾದವರು ಗೌರವದಿಂದ ಹಣ್ಣು ಹಂಪಲು, ಕಾಯಿಪಲ್ಲೆ ಧಾನ್ಯ, ಬಟ್ಟೆಬರೆಗಳನ್ನು ತಲುಪಿಸಿ ಕೈಮುಗಿದು ಬರುತ್ತಿದ್ದರು. ವೇದ ವಿದ್ಯೆಯಂತೆ, ಆಯುರ್ವೇದ ವಿದ್ಯೆಯೂ ಸಮಾಜ ಸೇವೆಗೆ ಮೀಸಲಿತ್ತು. ಬರುಬರುತ್ತ ರೋಗಿಗಳ ಸಂಖ್ಯೆ ಹೆಚ್ಚಲಾರಂಭಿಸಿದಾಗ, ವ್ಯಾಪಾರಿಗಳು (ಗಂದಿಗರು) ಅಂಗಡಿ ತೆಗೆದು ಲಾಭ ಮಾಡಿಕೊಳ್ಳಲಾರಂಭಿಸಿದರು. ಶಿಲ್ಪ ಒಂದರಲ್ಲಿ ಊರ ಹಿರಿಯ ವೈದ್ಯ, ಯುವತಿಯ ನಾಡಿ ಪರೀಕ್ಷಿಸುವದನ್ನು ಸುಂದರವಾಗಿ ಚಿತ್ರಿಸಲಾಗಿದೆ. ಕೆಲವು ವೈದ್ಯರು ಶಾಸನಗಳಿಗೆ ದಾನ ಕೊಟ್ಟಿದ್ದು, ಇನ್ನು ಕೆಲವರು ಶಾಸನ ಬರೆಸುವದರಲ್ಲಿ ಪಡೆದ ಪರಿಣತಿ ದೊರೆಯುತ್ತದೆ.[೧೧] ಆಯುರ್ವೇದ ಪಂಡಿತನಾಗಿದ್ದ ಪರಹಿತನು ತನ್ನ ವೇದ, ಆಯುರ್ವೇದ ವಿದ್ಯೆಯನ್ನೆಲ್ಲ ವಿದ್ಯಾರ್ಥಿಗಳಿಗೆ ಕಲಿಸಿ ತನ್ನ ಜನ್ಮವನ್ನು ಸಾರ್ಥಕಗೊಳಿಸಿದನೆಂದು ಒಂದು ಶಾಸನ ಸಾರುತ್ತದೆ.[೧೨] ಚರಕ, ಸುಶ್ರುತ, ಅಶ್ವಿನಿ ಮತ್ತು ಬಾಹಟ ಮುಂತಾದ ನರವೈದ್ಯದ ಪುಸ್ತಕಗಳನ್ನು ವಿದ್ಯಾರ್ಥಿಗಳು ಅಭ್ಯಸಿಸಬೇಕಾಗಿತ್ತು.[೧೩] ಚಿಕಿತ್ಸೆ ಮಾಡುವವರು ಜಾತಿ, ವರ್ಣ, ಲಿಂಗ ಭೇದವನ್ನು ಸಾಮಾನ್ಯವಾಗಿ ಪರಿಗಣಿಸುತ್ತಿರಲಿಲ್ಲ. ಗಂಗಡಿಕಾರ ನಂಜಮ್ಮನೆಂಬಾಕೆ ಬ್ರಾಹ್ಮಣ, ಕ್ಷತ್ರಿಯ, ಶೂದ್ರರೆಂಬ ತಾರತಮ್ಯ ಮಾಡದೆ, ಮೈಲಿ ಬೇನೆಗೆ ಶುಶ್ರೂಷೆ ನೀಡುತ್ತಿದ್ದಳು.[೧೪]

ಗಿರಾಕಿಗಳಿಗೆ ಸರಕು ಮಾರಿ, ಮಾತುಗಳಿಂದ ತೃಪ್ತಿಪಡಿಸಿ ಧನಿಕರಾಗುವ ವ್ಯಾಪಾರಿ ವೃತ್ತಿ, ಸುಲಭದಲ್ಲಿ ಸಾಧಿಸಲಾರದು! ಭಾವೀ ವರ್ತಕರಿಗೆ, ಅಕ್ಷರಾಭ್ಯಾಸ, ಪ್ರಚಲಿತವಿದ್ದ ಪ್ರಾದೇಶಿಕ ಭಾಷೆಗಳು, ಭೂಗೋಲ, ಪ್ರಯಾಣದ ಪದ್ಧತಿಗಳನ್ನು ಶಾಲೆ, ಗೊತ್ತಳಿ, ಶ್ರೇಣಿಗಳು ಕಲಿಸುತ್ತಿದ್ದವು. ಆದರೆ ವೃತ್ತಿಯ ರಹಸ್ಯಗಳನ್ನು ತಂದೆಯಾದವನೇ ಮಗನಿಗೆ ಹೇಳಿಕೊಡುತ್ತಿದ್ದ. ನಂತರ ಕಿರಿಯ ವ್ಯಾಪಾರಿ, ಸ್ವಂತ ಅನುಭವದಿಂದ, ವ್ಯಾಪಾರವನ್ನು ವೃದ್ಧಿಸಿ, ತನ್ನವೇ ತಂತ್ರಗಳನ್ನು ಕಂಡು ಹಿಡಿಯುತ್ತಿದ್ದ. ಇವುಗಳಲ್ಲಿ ಕೆಲವನ್ನು ಅತಿ ರಂಜಿತವಾಗಿ, ಭಿತ್ತಿಚಿತ್ರಕಾರನು ಚಿತ್ರಿಸಿದ್ದಾನೆ. ಬಟ್ಟೆ ಅಂಗಡಿಯವನು ಐದು ಗಜದ ಬಟ್ಟೆಯನ್ನು ಕಿರಿಮೊಳ ಹಾಕಿ ಏಳುಗಜ ಮಾಡಿ ತೋರುವ ಯತ್ನವನ್ನು ಗಿರಾಕಿ ವಿರೋಧಿಸುತ್ತಿದ್ದಾನೆ!(58) ಇದರಂತೆ ದಿನಸಿನ ವ್ಯಾಪಾರಿ, ತೂಗುವ ಕಲ್ಲನ್ನು ಸೇರಿಸಿದ ತಕ್ಕಡಿಯ ಒಂದು ಕೈ ಕೆಳಕ್ಕೆ ಹೋಗದಂತೆ ತೊಡೆ ಅಡ್ಡಗಟ್ಟಿ, ಕಡಿಮೆ ಸಾಮಗ್ರಿ ಕೊಡುವ ಯತ್ನವನ್ನು ಬಳಕೆದಾರನು ಗುರುತಿಸಿಬಿಟ್ಟಿದ್ದಾನೆ(59).

ಚಾಲುಕ್ಯ ಮತ್ತು ರಾಷ್ಟ್ರಕೂಟರ ಕಾಲಕ್ಕೆ ಸಮುದ್ರ ವ್ಯಾಪಾರ ಬಿರುಸಾಗಿ ನಡೆಯುತ್ತಿತ್ತು. ಕಲ್ಯಾಣ, ಶೂರ್ಪರಕಗಳು (ಈಗಿನ ಕಲ್ಯಾಣ ಮತ್ತು ನಲಸೋಪಾರಾ. ಮಹಾರಾಷ್ಟ್ರದಲ್ಲಿವೆ) ಪ್ರಸಿದ್ಧ ಬಂದರಗಳಾಗಿದ್ದು ಅರಬ್ ರಾಷ್ಟ್ರಗಳಲ್ಲದೇ, ಗ್ರೀಸ, ರೋಮ್, ಪಾರಸ ದೇಶಗಳೊಂದಿಗೆ ವ್ಯಾಪಾರ ನಡೆಯುತ್ತಿದ್ದುದರಿಂದ, ವ್ಯಾಪಾರಿ ವರ್ಗದವರು ದೇಶದಾದ್ಯಂತ

ಹರಡಿದ ರಾಜಮಾರ್ಗಗಳ, ನದಿ ಕಾಲುವೆ, ಸಮುದ್ರ ಮಾರ್ಗಗಳ ವಿವರಗಳನ್ನು ಅಧ್ಯಯನ ಮಾಡಲೇಬೇಕಾಗಿತ್ತು. ಇದಲ್ಲದೇ ಸುಮಾತ್ರಾ ಮತ್ತು ಚೀನದಿಂದಲೂ ಸಾಮಾನುಗಳು ಬರುತ್ತಿದ್ದವು. ಭಾರತದ ಹದಿನೆಂಟು ಪ್ರದೇಶಗಳಿಂದ ನಿರ್ಯಾತಕ್ಕೆ ಬರುವ ಸರಕುಗಳನ್ನು ಸಂಗ್ರಹಿಸುವ, ಕೊಡು-ಕೊಳಿಗಳನ್ನು ಮಾಡುವ ಅನುಕೂಲತೆಗಾಗಿ ಹದಿನೆಂಟು ಭಾಷೆಗಳಲ್ಲಿ ಹಲವನ್ನಾದರೂ ರೂಢಿಸಿಕೊಳ್ಳಬೇಕಾಗಿತ್ತು.[೧೫]

ಪ್ರಾಚೀನ ಕಾಲದಲ್ಲಿ, ವೃತ್ತಿಕಾರರಿಗೆಲ್ಲ ವೈಯಕ್ತಿಕ ಶಿಕ್ಷಣ ದೊರೆತು ಗ್ರಾಮ, ಊರು, ಪಟ್ಟಣಗಳೆಲ್ಲ ಅವರ ಪರಿಣತಿಯ ಲಾಭವನ್ನು ಪಡೆಯುತ್ತಿದ್ದವು. ಜನರಿಗೆ ಪ್ರೋತ್ಸಾಹ ನೀಡಿ, ದೊಡ್ಡ ಪ್ರಮಾಣದಲ್ಲಿ ಸಂಘಟಿತ ಕಾರ್ಮಿಕರಿಂದ ಉದ್ಯೋಗಗಳನ್ನು ನಡೆಸಿದ ಶ್ರೇಯಸ್ಸು ಬಹಮನಿ ಅರಸರಿಗೆ ಸಲ್ಲುತ್ತದೆ. ಇಂಥ ಸಂಸ್ಥೆಗಳನ್ನು ಫಾರಸಿಯಲ್ಲಿ 'ಕಾರ್ಖಾನಾ' ಎನ್ನುತ್ತಾರೆ. ಇಂದಿನ ಕಾರ್ಖಾನೆಗಳಿಗಿಂತ ಇವು ಸಾಕಷ್ಟು ಚಿಕ್ಕವಾಗಿದ್ದು ಕುಶಲ ಕೈಗಾರಿಕೆಯ ಕೇಂದ್ರಗಳಾಗಿದ್ದವು. ಸಾಮಾನ್ಯವಾಗಿ ಉತ್ತರಭಾರತದಲ್ಲಿಯಂತೆಯೇ ಅರಮನೆಗೆ ಹೊಂದಿದ್ದು, ಎಷ್ಟೋ ಆಳರಸರು ವೈಯಕ್ತಿಕವಾಗಿ, ಕೆಲವನ್ನು ಮನರಂಜನೆಗಾಗಿ ಕೈಕೊಂಡವೂ ಇದ್ದವು. ಬಟ್ಟೆ ನೇಯುವದು, ರತ್ನಗಂಬಳಿ, ಶಾಲು ತಯಾರಿಸುವದು, ಜರಿಯ, ಕುಸುರಿನ ಕೆಲಸ, ಹಸ್ತಿದಂತದ ಕೆಲಸ, ಬೆಳ್ಳಿ ಬಂಗಾರಗಳ ಆಭರಣ, ಚಿತ್ರಗಳನ್ನು ರಚಿಸುವದು, ಧಾತುವಿನ ಪಾತ್ರೆಗಳ ಮೇಲೆ ಹೂಬಳ್ಳಿ ರಚಿಸುವದು, ಮುಂತಾದ ಚಟುವಟಿಕೆಗಳು ಈ ಕಾರ್ಖಾನೆಗಳಲ್ಲಿ ನಡೆಯುತ್ತಿದ್ದವು. ಶಾಲಾಶಿಕ್ಷಣದಲ್ಲಿ ಆಸಕ್ತಿಯಿಲ್ಲದ ಮುಸ್ಲಿಂ ವಿದ್ಯಾರ್ಥಿಗಳು ಈ ಹೊಸ ಉದ್ಯಮಗಳಲ್ಲಿ ತರಬೇತುಗಾರರೆಂದು ಸೇರಲಾರಂಭಿಸಿದರು. ಇಲ್ಲಿ ಉತ್ಪಾದಿಸಿದ ಸರಕುಗಳಿಗೆ ವಿದೇಶಗಳಲ್ಲಿ ವಿಶೇಷ ಬೇಡಿಕೆಯಿತ್ತು. ಹೀಗಾಗಿ ಎಲ್ಲರಿಗೂ ಉದ್ಯೋಗ ದೊರೆಯಲಾರಂಭಿಸಿತು. ಬಹಮನಿ ಮತ್ತು ಆದಿಲ್‌ಶಾಹಿ ಅರಸರು ಪರ್ಶಿಯಾದ ಶಿರಾಜ್ ಮತ್ತು ಇಸ್ಪಹಾನ್‌ಗಳಿಂದ, ಇರಾಕದ ದಮಸ್ಕಸ್‌ನಿಂದ ಕುಶಲ ಕಲಾವಿದರನ್ನು ಬರಮಾಡಿಕೊಂಡು ಅರಗು, ಕಲಂಕಾರಿ, ಪೇಪರ ಮಾಶಿ, ಧಾತುವಿನ ಮೇಲೆ ಇನ್ನೊಂದು ಧಾತುವಿನ ಕುಸುರಿ ಕೆಲಸ ("ದಮಾಸಿನಿಂಗ್") ಅಥವಾ ಬಿದರಿ ಕಲೆಯ ಕಾರಖಾನೆಗಳನ್ನು ತೆಗೆದರು.

ಟಿಪ್ಪು ಸುಲ್ತಾನನು ಕೈಗಾರಿಕೆಯಲ್ಲಿ ಹೊಸವಿಧಾನಗಳನ್ನು ಹೊರಗಿನಿಂದ ತಂದು ಈ ಕಾರ್ಖಾನಾಗಳಿಗೆ ಜೀವ ತುಂಬಿದನು. ಸಕ್ಕರೆ, ಗಾಜು, ಅಗಲವಾದ ಬಟ್ಟೆ, ಉತ್ತಮ ಕಾಗದ, ಗಡಿಯಾರಗಳು, ಕಟ್ಲರಿ ಸಾಮಾನುಗಳು ಸ್ವದೇಶದಲ್ಲಿ, ಅದೂ ಕರ್ನಾಟಕದಲ್ಲೇ ತಯಾರಾಗಲಾರಂಭಿಸಿದವು. ಸಕ್ಕರೆಯ ತಂತ್ರಜ್ಞರನ್ನು ಚೀನದಿಂದ ಕರೆಯಿಸಿದರೆ, ರೇಶಿಮೆ ತಜ್ಞರನ್ನು ಬಂಗಾಲದಿಂದ ಬರಮಾಡಿಕೊಳ್ಳಲಾಯಿತು. ಇಪ್ಪತ್ತೊಂದು ಕೇಂದ್ರಗಳಲ್ಲಿ ಮಲ್ಬೆರಿ ಕೃಷಿ ಪ್ರಾರಂಭವಾಯಿತು. ಗಾಜಿನ ಉದ್ದಿಮೆಗೆ ಫ್ರೆಂಚರಿಂದ ತರಬೇತಿ ಕೊಡಿಸಿದ. ತಮಿಳುನಾಡಿನಿಂದ ನೇಕಾರರನ್ನು ಕರೆಸಿ ಜಿನುಗಾದ ಬಟ್ಟೆ, ಈ ನಾಡಿನಲ್ಲೇ ತಯಾರಾಗುವಂತೆ ನೋಡಿಕೊಂಡ.[೧೬] ಇದು ಕರ್ನಾಟಕದ "ಮೊದಲ ಕಾರ್ಖಾನಾ ಕ್ರಾಂತಿ" ಎಂದು ಕರೆದರೆ ತಪ್ಪಾಗಲಾರದು!

ಮೇಲೆ, ಹಿಂದಿನಿಂದ ನಡೆದು ಬಂದ ಕೆಲ ವೃತ್ತಿಗಳಲ್ಲಿ ಹೇಗೆ ಶಿಕ್ಷಣ ಕೊಡಲಾಗುತ್ತಿತ್ತು ಎಂದು ವಿವರಿಸಲಾಗಿದೆ. ಇದರಂತೆ ಇನ್ನೆಷ್ಟೋ ವೃತ್ತಿಗಳಲ್ಲಿ ಹೆಚ್ಚು-ಕಡಿಮೆ ಇದೇ ರೀತಿಯಲ್ಲಿ ವಿದ್ಯಾದಾನ ಮಾಡಲಾಗುತ್ತಿತ್ತು.

## ಸಂದರ್ಭ ಸೂಚಿ

೧. ಎ.ಕ. XI ೪೭ ಭೀಮ ಸಮುದ್ರ.
೨. ಅದೇ V ೧೭ ಬೇಲೂರು.
೩. ಐ.ಎ. X ಪು ೧೬೪-೬೫.
೪. ಅದೇ X ಪು ೧೭೦.
೫. ಎ.ಕ. VI ಮೂಡಗೆರೆ ೧೩.
೬. ಕಾಣೆ ಪಿ.ವಿ.: 'ದಿ ಹಿಸ್ಟರಿ ಅಫ್ ಧರ್ಮಶಾಸ್ತ್ರ' II(I) ಪು ೩೬೪-೬೫.
೭. 'ಸದ್ವಿದ್ಯಾಧಿಕರಾದ ಪಂಚಾಳರು' ಮೋಹನ ತರಂಗಿಣಿ. ಸಂಧಿ-೩ ಪದ್ಯ ೨೨, ಪು ೨೬.
೮. ಮಾನಸೋಲ್ಲಾಸ III ಗೀತ ವಿನೋದ ಮತ್ತು ವಾದ್ಯ ವಿನೋದವು ೧-೧೧೯.
೯. 'ದ. ಕನ್ನಡ ಜಿಲ್ಲೆಯ ಪಾಂಗಾಳನಾಯಕ ಕುಟುಂಬ ಎರಡೂವರೆ ಶತಕಗಳಿಗಿಂತ ಹೆಚ್ಚು ಆಯುರ್ವೇದ ಹಾಗೂ ಸಿದ್ಧೌಷಧಗಳ ಪರಂಪರೆ ಹೊಂದಿದೆ' ಡಾ. ಐ.ಕೆ.ಪಿ. ಶರ್ಮ- 'ದಕ್ಷಿಣ ಕನ್ನಡದಲ್ಲಿ ಆಯುರ್ವೇದ' (ಲೇಖ) ಸುದರ್ಶನ-II, ಪು ೩೬೫.
೧೦. ಅದೇ.
೧೧. ಎ.ಕ. V ೮,೯,೧೦, ೧೧ ೧೫೮.
೧೨. ಇ.ಐ.XIII ಪು ೨೭೩.
೧೩. ವಡ್ಡಾರಾಧನೆ I ಪು ೧೯೬.
೧೪. ಎ.ಕ. VI (ಹೊಸ) ಪಾಂ., ಪು ೨೩.
೧೫. ಉಪಾಧ್ಯೆ ಆ.ನೇ. (ಸಂ.): ಉದ್ಯೋತನ ಸೂರಿಯ "ಕುವಲಯಮಾಲಾ", ಪು ೭೩.
೧೬. ಕರ್ನಾಟಕ ರಾಜ್ಯ ಗೆಝೆಟಿಯರ್ I, ಪು ೮೮೯.

# ೯. ಸ್ತ್ರೀ ಶಿಕ್ಷಣ

ಸ್ತ್ರೀಯರಿಗೆ ಸಮಪಾಲು, ಸಮಬಾಳು, ಸ್ವಾತಂತ್ರ್ಯ, ಸಮಾನತೆಗಳು ಬೇಕೆಂಬ ಕೂಗು ಈ ಶತಮಾನದ ಪ್ರಾರಂಭದಲ್ಲೂ ಕೇಳಿ ಬರುತ್ತಿರುವದರಿಂದ, ಶತಮಾನಗಳಿಂದ ಅವರು ಪುರುಷರ ದಾಸ್ಯದಲ್ಲಿ ಕೊಳೆಯುತ್ತಿದ್ದರೆಂಬ ಭಾವನೆ ಬರುವದು ಸಹಜ. ಆದರೆ ಕರ್ನಾಟಕದ ಸ್ತ್ರೀ ಶಿಕ್ಷಣದ ಇತಿಹಾಸ ತಿರುವಿ ಹಾಕಿದಾಗ ಕಣ್ಣಿಗೆ ಬೀಳುವ ವಿಚಾರ ಅಷ್ಟೊಂದು ನಿರಾಶಾಜನಕವಾಗಿಲ್ಲ. "ನ ಸ್ತ್ರೀ ವಿದ್ಯಾಮರ್ಹತಿ" ನಿಯಮವನ್ನು ಜಾರಿಗೆ ತಂದ ಯತ್ನ ತಿಳಿದುಬಂದಿಲ್ಲ. ತನ್ನ ಸಬಲತೆಯನ್ನು ಸ್ಥಾಪಿಸುವದಕ್ಕೋಸ್ಕರವೇ ಪುರುಷರೊಂದಿಗೆ ಎಲ್ಲ ಕ್ಷೇತ್ರಗಳಲ್ಲಿ ಸ್ಪರ್ಧಿಸುವ ಚಪಲವನ್ನು ಮಹಿಳೆ ಆ ಯುಗದಲ್ಲಿ ತೋರಿಸಿರಲಿಕ್ಕಿಲ್ಲ! ಬಹುಶಃ ಹೆಮ್ಮರವಾಗಿ ಬೆಳೆಯುವ ಸುಪ್ತ ಶಕ್ತಿ ಇದ್ದ ಬೀಜದಂತೆ ಬಾಳಿ ಬದುಕಿದಳು. ನೆಲ, ನೀರಿನ ಅವಕಾಶ ದೊರೆತಾಗ ಈ ಬೀಜ ಅಂಕುರ ಒಡೆದು, ಗಿಡ, ಮರವಾಗಿ, ತನ್ನ ಪರಿಸರದವರಿಗೆಲ್ಲ ನೆರಳು, ಆಶ್ರಯ ಕೊಡಲು ಎಂದೂ ಹಿಂಜರಿಯಲಿಲ್ಲ. ಇಂದಿನ ರಾಜಕೀಯ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ದಂಡಮಾನದಿಂದ ಪ್ರಾಚೀನ ಕನ್ನಡತಿಯ ಜೀವನ ಅಳೆಯುವದು ಹಾಸ್ಯಾಸ್ಪದವಾದೀತು.

ವೇದಕಾಲದಲ್ಲಿ ಅಂದರೆ ಕ್ರಿ.ಶ.ಪೂ.೨೦೦೦ ವರ್ಷಗಳ ಹಿಂದೆ ಸ್ತ್ರೀಯರಿಗೆ ಪುರುಷರಂತೆಯೇ ವಿದ್ಯಾರಂಭ ಮಾಡಲಾಗುತ್ತಿತ್ತು. "ಪುರಾತನ ಕಾಲದಲ್ಲಿ ಕುಮಾರಿಯರಿಗೆ ಮುಂಜೀ ಬಂಧನ ಮಾಡಿ ವೇದಗಳನ್ನು ಕಲಿಸುವದರ ಜೊತೆಗೆ ಸಾವಿತ್ರಿ(ಗಾಯತ್ರಿ) ಮಂತ್ರ ಹೇಳಿಕೊಡುತ್ತಿದ್ದರು"[೧] ಎಂದು ಒಪ್ಪಿಕೊಂಡ ಯಮ ಸ್ಮೃತಿ, ಇಬ್ಬಗೆಯ ಹುಡುಗಿಯರನ್ನು ಗುರುತಿಸುತ್ತದೆ. ಕುಶಾಗ್ರಮತಿಗಳಿದ್ದು ಚಿಕಿತ್ಸಕ ಬುದ್ಧಿಯ 'ಬ್ರಹ್ಮವಾದಿನಿ'ಯರು- ಇವರಿಗೆ ಉಪನಯನದ ನಂತರ ಸ್ವಗೃಹದಲ್ಲಿ ವಿದ್ಯಾಭ್ಯಾಸ ಒದಗಿಸಲಾಗುತ್ತಿತ್ತು. ಗಾರ್ಗಿ, ಮೈತ್ರೇಯಿಯವರಲ್ಲದೇ ಇನ್ನೂ ೨೫ ಜನ ಬ್ರಹ್ಮವಾದಿನಿಯರ ಹೆಸರು ಸಿಗುತ್ತವೆ. ಎರಡನೆಯ ಗುಂಪಿಗೆ ಸೇರಿದವರು 'ಸದ್ಯೋವಧು'ಗಳು. ಉತ್ತಮ ಗೃಹಿಣಿಯರಾಗಿ ಗೃಹಜೀವನದ ಮತ್ತು ಯಾವತ್ತೂ ಧಾರ್ಮಿಕ, ಸಾಮಾಜಿಕ ಚಟುವಟಿಕೆಗಳಲ್ಲಿ ಪಾಲುಗೊಳ್ಳುತ್ತಿದ್ದರು. ಇವರಿಗೆ ಆತ್ಮೋನ್ನತಿಗಿಂತ ಇಡೀ ಸಂಸಾರದ ಸುಖವೇ ಸರ್ವಸ್ವವಾಗಿದ್ದಿತು. ಸೂತ್ರಕಾಲದ ಹೊತ್ತಿಗೆ ಸ್ತ್ರೀಯರಿಗೆ ಉಪನಯನ ಪದ್ಧತಿ ಬಿಟ್ಟು ಹೋದರೂ ಶಿಕ್ಷಣಕ್ಕೆ ತಿಲಾಂಜಲಿ ಕೊಟ್ಟ ಆಧಾರಗಳಿಲ್ಲ. ವೇದಾಧ್ಯಯನದ ಬದಲಾಗಿ ವಿವಿಧ ಕಲೆಗಳ, ಸಾಹಿತ್ಯ, ಲೋಕ

ವ್ಯವಹಾರಗಳ ಮೇಲೆ ಒತ್ತು ಬಿದ್ದಂತಿದೆ. ವಾತ್ಸ್ಯಾಯನನು ಸ್ತ್ರೀಯರು ಕೈಕೊಳ್ಳಬಹುದಾಗಿದ್ದ ಹತ್ತಾರು ವಿಷಯಗಳನ್ನು, ಹಲವಾರು ಕಲೆಗಳನ್ನು ಹೆಸರಿಸಿದ್ದಾನೆ.

ನಂತರದ ಯುಗದಲ್ಲಿ ಸಂಸ್ಕೃತಿಯ ಸುವರ್ಣಯುಗವೆನಿಸಿಕೊಳ್ಳುವ ದಿನಗಳಲ್ಲಿ (ಕ್ರಿ.ಶ.೩೦೦ ರಿಂದ ೯೦೦) ಸ್ತ್ರೀಯರ ಬಗ್ಗೆ ಉದಾರ ಭಾವನೆಯಿತ್ತು. "ಸಂಸ್ಕಾರವೆಂಬುದು ಆತ್ಮಕ್ಕೆ ಸಂಬಂಧಿಸಿದ್ದೇ ಹೊರತು ಸ್ತ್ರೀ ಪುರುಷರೆಂಬ ಬಾಹ್ಯ ಭೇದಕ್ಕೆ ಸಂಬಂಧಿಸಿಲ್ಲ" ಎಂದು ಘಂಟಾಘೋಷವಾಗಿ ಸಾರಿದ ಕವಿ ರಾಜಶೇಖರ, "ಪುರುಷರಂತೆ ಸ್ತ್ರೀಯರೂ ಕವಿಗಳಾಗಬಲ್ಲರು" ಎಂಬ ಸತ್ಯವನ್ನು ಎತ್ತಿ ಹಿಡಿದು, ಅದನ್ನು ಸಾಧಿಸಲು ಹಲವಾರು ಕವಯತ್ರಿಯರನ್ನು ತನ್ನ ಕಾವ್ಯ ಮೀಮಾಂಸೆಯ ಗ್ರಂಥದಲ್ಲಿ ಉದ್ಧರಿಸಿದ್ದಾನೆ.[೨] ಆತನ ಔದಾರ್ಯ, ಪ್ರೋತ್ಸಾಹಗಳಿಂದಲೋ ಏನೋ, ಅವನ ಪತ್ನಿ, ಅವಂತಿ ಸುಂದರಿ, ಕವಿತ್ವದೊಂದಿಗೆ ಅಲಂಕಾರ-ಶಾಸ್ತ್ರ ಪ್ರವೀಣೆಯಾದಳು. ರಾಜಶೇಖರ ಅವಂತಿ ಸುಂದರಿಯರಂಥ ದಂಪತಿಗಳು ಹಿಂದಿನ ಯುಗದಲ್ಲಿದ್ದರು ಎಂಬುದಕ್ಕೆ ಸಾಕ್ಷಿಯಾಗಿ ದಂಪತಿಗಳು ಶಿಲ್ಪದಲ್ಲಿ ಚಿತ್ರಿತರಾಗಿದ್ದಾರೆ. ಒಂದರಲ್ಲಿ ಪತ್ನಿ(60) ವಾಚನ ಸಾಮಗ್ರಿಗಳನ್ನು ಪತಿಗೆ ಕೊಡಮಾಡಿದರೆ, ಇನ್ನೊಂದರಲ್ಲಿ(61) ಪತಿ ಕಲಿಸಿದ ಶಾಸ್ತ್ರದ ಇಂಗಿತಾರ್ಥ ಅರಿತಕೊಳ್ಳಲಾರದೇ ಕಣ್ಣು ಕಣ್ಣು ಬಿಡುತ್ತಿದ್ದಾಳೆ! ರಾಜಶೇಖರನು ಕರ್ನಾಟಕದ ಕವಯತ್ರಿ ವಿಜ್ಜಿಕಾ ಅಥವಾ ವಿಜಯಾಂಕಾಳನ್ನು ಸ್ಮರಿಸಿದ್ದಾನೆ.[೩]

ಸಕಲ ವಿದ್ಯಾಪ್ರವೀಣೆ, ಸಾಮಿನಿರ್ಮಡಿಯ ಅಪೂರ್ವವಾದ ಸ್ಮಾರಕಶಿಲೆಯು, ಕಾರಬೆಲೆ(ಕೋಲಾರ ಜಿಲ್ಲೆಯ ಬೌರಿಂಗ್ ಪೇಟೆ ತಾಲೂಕು) ಗ್ರಾಮದಲ್ಲಿದೆ ಎಂದು ರೈಸರು ಸಂಪಾದಿಸಿದ 'ಎಪಿಗ್ರಾಫಿಯ ಕರ್ನಾಟಕ'ದ ಹತ್ತನೆಯ ಸಂಪುಟದಲ್ಲಿ ಉಲ್ಲೇಖವಿದೆಯಾದರೂ ದಶಕಗಳಿಂದ ಯಾರಿಗೂ ಅದರ ದರ್ಶನವಾದ ವರದಿ ಸಿಕ್ಕಿರಲಿಲ್ಲ.[೪] ಅದಾಗಲೇ ಕಾರಬೆಲೆ(ಕಾರಹಳ್ಳಿ) ನಾಮಶೇಷವಾಗಿದ್ದರಿಂದ, ಸಾಮಿನಿರ್ಮಡಿಗಾಗಿ ಎಲ್ಲಿ ಹುಡುಕುವದೆಂದು ಗೊಂದಲವಾಯಿತು. ಕ್ರಿ.ಶ.೧೯೭೮ರಲ್ಲಿ ಕೋಲಾರ ಜಿಲ್ಲೆಯ ಯುವ ಸಂಶೋಧಕರಾದ ಡಾ। ಆರ್. ಶೇಷಶಾಸ್ತ್ರಿಗಳೊಂದಿಗೆ, ಈ ಪ್ರಾಚೀನ ಸುಶಿಕ್ಷಿತೆಗಾಗಿ ಹುಡುಕಾಟ ಪ್ರಾರಂಭವಾಯಿತು. ಕೋಲಾರ-ಬಂಗಾರಪೇಟೆ ರಸ್ತೆಯಲ್ಲಿರುವ ಯರಗಲ್ ಹಳ್ಳಿಯ ಕುರುಬರ ದೇವಾಲಯದಲ್ಲಿ ಹರಡಿದ ಹತ್ತಾರು ವೀರಗಲ್ಲುಗಳಲ್ಲಿ ಈ ಸ್ಮಾರಕ ಸೇರ್ಪಡೆ ಯಾಗಿರಬೇಕು ಎಂಬ ಸುದ್ದಿಯನ್ನು ಡಾ। ಶೇಷಶಾಸ್ತ್ರಿ ತಂದರು. ವಿಶಾಲವಾದ ಹುಣಿಸೇಮರದ ನೆರಳಲ್ಲಿ ಚಿರ ವಿಶ್ರಾಂತಿ ಪಡೆದಿದ್ದ, ಕಿರಿಶಾಸನ ಹೊಂದಿದ್ದ ಮಹಿಳೆಯ ನೆನಪಿನ ಕಲ್ಲನ್ನು ನೆಲ ಅಗೆದು ಹೊರ ತೆಗೆದಾಗ, ಅಪರೂಪದ ಸಾಧನೆಯೆನಿಸಿತು.

ನಾಲ್ಕು ಅಡಿ ಎತ್ತರ, ಎರಡೂವರೆ ಅಡಿ ಅಗಲವಿರುವ ಶಿಲೆಯ ಮೇಲ್ಭಾಗದಲ್ಲಿ "ಸ್ವಸ್ತಿ ಶ್ರೀ ನಾಗಾರ್ಜುನಯ್ಯ ನಂದಿಗಬೆಯ ಮಗಳ್ ಸಾಮಿನಿರ್ಮಡಿ ಸರ್ವಶಾಸ್ತ್ರ ಪ್ರಸಿದ್ಧಿ ಶ್ರೀ" ಎಂಬ ಎರಡು ಸಾಲಿನ ಶಾಸನ ಬರೆಯಲಾಗಿದೆ. ಬೋಧನ ಭಂಗಿಯಲ್ಲಿ ಆಸೀನಳಾದ ತರುಣಿಯ ಎಡಭಾಗದಲ್ಲಿ ವ್ಯಾಸಪೀಠವಿದೆ(62). ಆಕೆ, ಸಕಲಶಾಸ್ತ್ರ ಪ್ರವೀಣೆಯಿದ್ದಳು ಎಂದು ದೃಢೀಕರಿಸಲು ಎಡಗೈಯಲ್ಲಿ ಓಲೆಗರಿ ಗ್ರಂಥ ಹಿಡಿದಿದ್ದಾಳೆ. ಐದು ಅಕ್ಷರಗಳ ಗ್ರಂಥದ ಹೆಸರಿನ

ನಡುವಿನ ಅಕ್ಷರದ ಮೇಲೆ ಬೆರಳಿದ್ದುದರಿಂದ "ಶ್ರೀ ಹ... ಸಿದ್ಧಿ" ಎಂದಿಷ್ಟೇ ಓದಬಹುದಾಗಿದೆ. ಸ್ಪಷ್ಟವಾಗದ ಅಕ್ಷರ 'ಶ್ರೀ ಹರಿಸಿದ್ಧಿ' ಅಥವಾ 'ಶ್ರೀ ಹರಸಿದ್ಧಿ' ಇದ್ದಿರಬಹುದೆಂದು ಊಹಿಸಲು ಸಾಧ್ಯವಿದೆ. ಕೇವಲ ತಂದೆ ತಾಯಿಗಳ ಹೆಸರು ನಮೂದಿಸಿದ್ದರಿಂದ ಆಕೆ ಅವಿವಾಹಿತೆಯಿರಬೇಕು. ಕೂದಲು ಜಟೆಯನ್ನು ಹೋಲುತ್ತಿರುವದರಿಂದ ಸನ್ಯಾಸಿನಿಯಿರಲು ಸಾಕು. ಯಾವುದೋ ಅರಿಯದ ಕಾರಣಕ್ಕೆ ಅಕಾಲ ಮೃತ್ಯುವಿಗೆ ಆಹುತಿಯಾಗಿ, ಅವಳ ಶಾಸ್ತ್ರಸಿದ್ಧಿಯಿಂದ ಪ್ರಭಾವಿತರಾದ ಊರವರು ಈ ನೆನಪಿನ ಕಲ್ಲನ್ನು ನಿಲ್ಲಿಸಿರಬೇಕು. ಸ್ತ್ರೀಯರಿಗೆ ಶಿಕ್ಷಣ ಸೌಕರ್ಯಗಳಿಲ್ಲದಿದ್ದರೆ, ಹತ್ತನೆಯ ಶತಮಾನದಲ್ಲಿ ಸಾಮಿನಿರ್ಮಡಿ ಸಕಲಶಾಸ್ತ್ರ ಪ್ರವೀಣೆಯಾಗುತ್ತಿರಲಿಲ್ಲ ಮತ್ತು ಜನ ಅವಳನ್ನು ಗುರುತಿಸುತ್ತಿರಲಿಲ್ಲವೆಂಬುದನ್ನು ಗಮನಿಸತಕ್ಕದ್ದು.

ಮೂಲತಃ ಕಾಶ್ಮೀರದವನಾದ ಬಿಲ್ಹಣನು ಕೆಲಕಾಲ ಗುಜರಾತದಲ್ಲಿದ್ದು ನಂತರ ಕರ್ನಾಟಕಕ್ಕೆ ಬಂದು ಚಾಲುಕ್ಯ ವಿಕ್ರಮಾದಿತ್ಯನ (ಕ್ರಿ.ಶ.೧೦೭೬-೧೧೨೭) ಆಸ್ಥಾನ ಕವಿಯಾಗಿದ್ದ. ಆತನು ಬರೆದ ಚಿಕ್ಕ ೫೦ ಶ್ಲೋಕಗಳ ಸಂಸ್ಕೃತ ಕಾವ್ಯ "ಚೋರ ಪಂಚಶಿಖಾ" ಬಿಲ್ಹಣನ ಆತ್ಮಕಥೆ ಅಥವಾ ಸ್ವಾನುಭವವೆಂದು ವಿದ್ವಾಂಸರ ಅಂಬೋಣ. ಸುಂದರಿಯಾದ ರಾಜಕುಮಾರಿ ಚಂಪಾವತಿಗೆ ಪ್ರತಿಭಾವಂತ ಬಿಲ್ಹಣನಿಂದ ಪಾಠ ಹೇಳಿಸಬೇಕು, ಎಂದು ಅರಸನ ಆಸೆ. ಆದರೆ ಯೌವನಸ್ಥರಾದ ಶಿಕ್ಷಕ-ಶಿಷ್ಯೆಯರನ್ನು ಒಟ್ಟಿಗೆ ಹೇಗೆ ಬಿಡುವದು? ಎಂಬುದು ಸಮಸ್ಯೆ. ಆದ್ದರಿಂದ ವಿದ್ಯಾರ್ಥಿನಿಗೆ, ಗುರು ಕುಷ್ಠರೋಗದಿಂದ ಬಳಲುತ್ತಿದ್ದರಿಂದ ದೂರ ಕುಳಿತುಕೊಳ್ಳಬೇಕು, ಬಿಟ್ಟ ಕಣ್ಣಿನಿಂದ ನೋಡಬಾರದು, ಎಂದು ಕಟ್ಟಾಜ್ಞೆಯಾಯಿತು. ಕವಿಗೆ, ರಾಜಕುಮಾರಿಯು ಹುಟ್ಟು ಕುರುಡಿ ಎಂದು ನಂಬಿಸಲಾಯಿತು! ಆದರೆ ಬೆಂಕಿಯ ಸಮೀಪದ ಬೆಣ್ಣೆಯ ಸ್ಥಿತಿಯಾಯಿತು. ಚಂಪಾವತಿ, ಕಣ್ಣಂಚಿನಿಂದ ಕವಿಯನ್ನು ಕದ್ದು ನೋಡಿದ್ದೇ ಮುಳುವಾಯಿತು. ಆತನ ರೂಪಕ್ಕೆ, ಮಾತಿನ ಚಾತುರ್ಯಕ್ಕೆ ಮರುಳಾದಳು. ಗುರು, ಶೃಂಗಾರ ರಸಭರಿತ ಕವಿತೆಗಳನ್ನೇ ಕಲಿಸಲಾರಂಭಿಸಿದನು! ಪ್ರೇಮಾಂಕುರ, ಗಿಡವಾದಾಗ ಅರಸನಿಗೆ ಸುದ್ದಿ ಮುಟ್ಟಿ ಕೋಪದಿಂದ ಕಿಡಿಕಿಡಿಯಾದ. ಕವಿಗೆ ಮರಣದಂಡನೆ ವಿಧಿಸಿದ. ವಧಸ್ಥಾನಕ್ಕೆ ಒಯ್ಯುವಾಗ ಒಂದಿಷ್ಟೂ ವಿಚಲಿತನಾಗದ ಕವಿ ತನ್ನ-ಚಂಪಾವತಿಯ ಕುರಿತಾದ ಪ್ರಣಯ ಕಾವ್ಯವನ್ನು ಸ್ವಯಂ ಸ್ಫೂರ್ತಿಯಿಂದ ಹಾಡಲಾರಂಭಿಸಿದ. "ನಾ ನಿನ್ನ ಮರೆಯಲಾರೆ, ಚಂಪಾವತಿ" ಎಂದು ಪ್ರಾರಂಭವಾಗುವ ಐವತ್ತು ನುಡಿಗಳು ಕವಿವಾಣಿಯಲ್ಲಿ ಹೊಮ್ಮಿದಾಗ, ಇಂಥ ಪ್ರತಿಭಾವಂತನನ್ನು ಕಳೆದುಕೊಳ್ಳುತ್ತಿದ್ದೇವಲ್ಲ! ಎಂದು ನೆರೆದವರ ಕಣ್ಣು ಒದ್ದೆಯಾದವು. ಇದರಿಂದ ವಿಚಲಿತನಾದ ಅರಸನು ಗಲ್ಲಿಗೇರಿಸುವ ನಿರ್ಣಯ ಬದಲಿಸಿ, ಚಂಪಾವತಿಯ ವಿವಾಹವನ್ನು ಬಿಲ್ಹಣನೊದಿಗೆ ನೆರವೇರಿಸುತ್ತಾನೆ.[*] ಮೇಘದೂತ, ಗೀತಗೋವಿಂದಗಳಂತೆ, ಚೋರಪಂಚಶಿಖಾ ಚಿತ್ರಕಲಾವಿದರಿಗೆ ಒಳ್ಳೆಯ ವಸ್ತು. ಒಂದರಲ್ಲಿ ಕುರುಡಿ ಎಂದು ನಟಿಸುವ ಚಂಪಾವತಿ, ಸಲ್ಲಾಪದಲ್ಲಿ ತೊಡಗಿದರೆ(63) ಇನ್ನೊಂದರಲ್ಲಿ ಅವನ ರೂಪ ಲಾವಣ್ಯಗಳಿಗೆ ದಿಗ್ಭ್ರಮೆಗೊಂಡು ಕಲಿಯುವಿಕೆಯನ್ನು ಸಂಪೂರ್ಣವಾಗಿ ಮರೆತುಬಿಟ್ಟಂತೆ ಚಿತ್ರಿತವಾಗಿದೆ(64).

ಹತ್ತನೆಯ ಶತಮಾನದಲ್ಲಿ ಪ್ರಚಲಿತವಿದ್ದ ಸ್ತ್ರೀ ಶಿಕ್ಷಣದ ಇಣುಕು ನೋಟವನ್ನು

ಪಂಪನಿಂದ ಅರಿಯಬಹುದಾಗಿದೆ. ಒಂದು ದಿನ ಆದಿನಾಥನು ತನ್ನ ಇಬ್ಬರು ಹೆಣ್ಣು ಮಕ್ಕಳಾದ ಬ್ರಾಹ್ಮಿ ಮತ್ತು ಸುಂದರಿಯರು ಶಿಕ್ಷಣ ಪಡೆಯುವಷ್ಟು ದೊಡ್ಡವರಾಗಿದ್ದರೆಂದು ತಿಳಿದುಕೊಂಡು ಹೇಳಿಕಳಿಸುತ್ತಾನೆ. ಅವರಿಬ್ಬರೂ ಬಂದು ನಮಸ್ಕರಿಸಿ ನಿಂತಾಗ, ಈ ವಯಸ್ಸು, ಗುಣ, ಶೀಲಗಳಿಗೆ ವಿದ್ಯೆಯೂ ಸೇರಿಕೊಂಡರೆ ಜಗತ್ಪಾವನೆಯರಾಗುತ್ತೀರಿ, ಎಂದು ಉದ್ಗರಿಸಿ ಸ್ವತಃ ವಿದ್ಯೆ ಕಲಿಸಲು ಪ್ರಾರಂಭಿಸುತ್ತಾನೆ. ಸರಸ್ವತಿಯ ಪೂಜೆ ಮಾಡಿ, ಮಕ್ಕಳಿಬ್ಬರನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು, 'ಸಿದ್ಧಂನಮಃ' ಎಂದು ಬ್ರಾಹ್ಮಿಯಿಂದ ಹೇಳಿಸಿ, ಅದನ್ನೇ ಬರೆದು, ಬಾಯಿಂದ ಹೇಳಿಸುತ್ತ ಅವಳಿಂದ ಬರೆಸುತ್ತಾನೆ. ಸುಂದರಿಗೆ ಒಂದು, ಎರಡು ಅಂಕಿಗಳನ್ನು ಕಂಠಪಾಠ ಮಾಡಿಸಿ ಬರೆಯುವ ರೂಢಿ ಮಾಡಿಸುತ್ತಾನೆ. ಮಕ್ಕಳನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಳ್ಳುವದೆಂದರೆ ಇಬ್ಬರಿಗೂ ಐದು ವರ್ಷಗಳಿಗಿಂತ ಹೆಚ್ಚಿರಲಾರದು! ನಂತರದ ದಿನಗಳಲ್ಲಿ ಅವನು ವ್ಯಾಕರಣ, ಛಂದಸ್ಸು, ಅಲಂಕಾರ, ವಾಙ್ಮಯ, ಸಮಸ್ತ ಕಲಾ ಸಮೂಹವನ್ನು ಇಬ್ಬರಿಗೂ ಕರಗತವಾಗುವಂತೆ ಕಲಿಸಿ ವಿದ್ಯಾಪರಿಪೂರ್ಣೆಯರನ್ನಾಗಿಯೂ 'ಅಪ್ಪಂತ'ರನ್ನಾಗಿಯೂ ಮಾಡಿದ.[೬] ಅಂದಿನ ಎಲ್ಲ ಹುಡುಗಿಯರೂ ಬ್ರಾಹ್ಮಿ ಮತ್ತು ಸುಂದರಿಯರಷ್ಟು ಅದೃಷ್ಟಶಾಲಿಗಳಾಗಿರಲಿಲ್ಲ. ಆದರೆ ಅವರು ಶಿಕ್ಷಕರಿಂದ ಓದುವದನ್ನು, ಬರೆಯುವದನ್ನು ಜೊತೆಯಾಗಿ ರೂಢಿಸಿಕೊಳ್ಳುತ್ತಿದ್ದರು.

ಚಾಮರಸನು 'ಪ್ರಭುಲಿಂಗಲೀಲೆ'ಯಲ್ಲಿ ರಾಜಕುಮಾರಿಯೊಬ್ಬಳ ಅಭ್ಯಾಸದ ವಿವರಗಳನ್ನು ಮಾಯಾದೇವಿಯ ವರ್ಣನೆಯ ಮೂಲಕ ಕೊಡಮಾಡಿದ್ದಾನೆ. ಸ್ತ್ರೀ ಶಿಕ್ಷಣಕ್ಕಾಗಿ ಅರಮನೆಯ ಮಹಡಿಯಲ್ಲಿದ್ದ 'ಕನ್ನೆ ಮಾಡ'ವನ್ನು ಬಳಸಲಾಗುತ್ತಿತ್ತು. ಪಂಪನೂ ಕನ್ನೆ ಮಾಡವನ್ನು ಉಲ್ಲೇಖಿಸಿರುವನು. ಕುಮಾರಿಯರ ವಿದ್ಯಾಭ್ಯಾಸಕ್ಕಾಗಿಯೇ 'ನಾಗವಾಸ'(ಅಂತಃಪುರ)ದ 'ಕನ್ನೆ ಮಾಡ' ಮೀಸಲಿರುತ್ತಿತ್ತು. ಅಲ್ಲಿ ರಾಜಕುಮಾರಿಯರಿಗೂ ಪರಿವಾರದ ಇತರ ಹುಡುಗಿಯರಿಗೂ 'ಕುಶಲಶಾಸ್ತ್ರ ವಿದ್ಯಾನೀಕ'ವನ್ನು ಪರಿಚಯಿಸಿ(ಕುಶಲಕಲೆ ಮತ್ತು ಇತರ ವಿದ್ಯೆಗಳನ್ನು ಕಲಿಸಿ) ಪರಿಣತೆಯರಾಗುವ ಅವಕಾಶಗಳನ್ನು ಒದಗಿಸಲಾಗುತ್ತಿತ್ತು. ಮದ್ದಳೆ ಬಾರಿಸುವ ಅಲ್ಲಮನಿಗೆ ಮನಸೋತ ಮಾಯಾದೇವಿ ತಂದೆಯ ಅಪ್ಪಣೆ ಪಡೆದು ಆತನನ್ನು ವಾದ್ಯವೃಂದದ(ನೆರವಿ ಬಿಂದದ) ಮುಖ್ಯಸ್ಥ(ಬೋವಗಾರಿಕೆಯ)ನನ್ನಾಗಿ ನೇಮಿಸಿ ಕನ್ನೆ ಮಾಡಕ್ಕೆ ಆತ ಬರುವಂತೆ ನೋಡಿಕೊಳ್ಳುತ್ತಾಳೆ.[೭] ಹಿಮ್ಮೇಳಕ್ಕೆ ಅತಿ ಮುಖ್ಯವಾದ ಮೃದಂಗ (ಅಲ್ಲಿ ಮದ್ದಳೆ)ವನ್ನು ಅಲ್ಲಮನು ನುಡಿಸುತ್ತಿದ್ದನಾದ್ದರಿಂದ, ಮೂರೂ ಹೊತ್ತು ನಾಗವಾಸದಲ್ಲಿರಬಹುದು! ಎಂಬುದು ಅವಳ ಹಂಚಿಕೆಯಾಗಿತ್ತು. ಶಿಕ್ಷಕರು ಸ್ತ್ರೀಯರೇ ಇರಬೇಕೆಂಬ ಕಡ್ಡಾಯವಿರಲಿಲ್ಲ.

ಕ್ರಿ.ಶ.೧೫೨೦-೨೨ರಲ್ಲಿ ವಿಜಯನಗರ ಸಾಮ್ರಾಜ್ಯವನ್ನು ಸಂಚರಿಸಿದ ಪೋರ್ಚುಗೀಸ ಪ್ರವಾಸಿ, ಡೋಮಿಂಗೊ ಪ್ಯಾಸ್ ಮತ್ತು ಫರ್ನಾವೊ ನುನಿಝ್‌ರು ರಾಜಧಾನಿಯ ವೈಭವದ ಚಿತ್ರವನ್ನು ಭಾವೀಪೀಳಿಗೆಗಾಗಿ ಬರೆದಿಡುವ ಕೃಪೆ ಮಾಡಿದ್ದಾರೆ. ರಾಜಧಾನಿಯಲ್ಲಿ ಸುಖ, ಶಾಂತಿ, ಸಮೃದ್ಧಿಗಳಿದ್ದುದರಿಂದ ಹೆಂಗಳೆಯರ ಓಡಾಟ, ಚಟುವಟಿಕೆ, ಶಿಕ್ಷಣಗಳಿಗೆ ಅವಕಾಶ ದೊರಕಿತ್ತು. ನಾಲ್ಕು ಸಾವಿರಕ್ಕೂ ಮಿಕ್ಕಿದ ಹೆಂಗಳೆಯರು ರಾಜರ ಸೇವೆಯಲ್ಲಿದ್ದರು.[೮] ಹೆಚ್ಚಿನವರ

ಶಿಕ್ಷಣ ವ್ಯವಸ್ಥೆ, ಅರಮನೆಯಲ್ಲಿ ಅಥವಾ ಆವಾರದಲ್ಲಿ ಮಾಡಲಾಗಿತ್ತು. ಮಹಾನವಮಿಯ ನೃತ್ಯಸ್ಪರ್ಧೆಯಲ್ಲಿ ಪಾಲುಗೊಳ್ಳುವವರ ಸಲುವಾಗಿ ವಿಶೇಷವಾಗಿ ನಿರ್ಮಿಸಿದ ನೃತ್ಯಮಂದಿರಗಳಿದ್ದವಲ್ಲದೇ ನೃತ್ಯ ತರಬೇತಿಗಾಗಿ ವಿಶಾಲವಾದ ನಾಟ್ಯಶಾಲೆಗಳು ಅರಮನೆಯಲ್ಲಿದ್ದವು.[೯] ನಾಟಕ, ಸಂಗೀತಗಳ ತರಬೇತಿಗೂ ವಿಶೇಷ ಪ್ರಾಧಾನ್ಯ ಕೊಡಲಾಗಿತ್ತು. ವೀಣೆ, ಕೊಳಲು, ಕಂಜೀರಾ, ತಾಳ, ಮದ್ದಳೆಗಳಂತಹ ಅನೇಕಾನೇಕ ವಾದ್ಯಗಳನ್ನು ನುಡಿಸುವದರಲ್ಲಿ ಸ್ತ್ರೀಯರು ಪ್ರಾವೀಣ್ಯ ಗಳಿಸುತ್ತಿದ್ದರು.[೧೦] ಪ್ರೇಕ್ಷಕರ ಎದುರಿಗೆ, ವಾದ್ಯಗಳನ್ನು ಒಂಟಿಯಾಗಿಯೂ, ಒಟ್ಟಾಗಿಯೂ ನುಡಿಸಿ ಅರಸರಿಂದ ಬಹುಮಾನವನ್ನು ಗಿಟ್ಟಿಸುತ್ತಿದ್ದರು. ನೃತ್ಯಕ್ಕೆ ಹಿನ್ನೆಲೆಯಾಗಿಯೂ ವಾದ್ಯಮೇಳವನ್ನು ಬಳಸುತ್ತಿದ್ದರು(65).

ಎಳೆ ವಯಸ್ಸಿನಲ್ಲಿ ನಾಟ್ಯಾಭ್ಯಾಸ ಪ್ರಾರಂಭಿಸಬಹುದಾಗಿತ್ತಾದರೂ ಶಾರೀರದ, ಹಾಡುಗಾರಿಕೆಯ ಶಿಕ್ಷಣ ಮೊದಲಿಗೆ ಕೊಡಲಾಗುತ್ತಿತ್ತು. ಹನ್ನೆರಡು ವರ್ಷದ ಕಿಶೋರಿ, ಅಂಗಾಂಗ ತುಂಬಿಕೊಂಡು ಹೆಣ್ಣಾಗುವ ಹೊಸ್ತಿಲಲ್ಲಿ ಇದ್ದಾಗ ನೃತ್ಯಾಭ್ಯಾಸಕ್ಕೆ ಯೋಗ್ಯಳೆಂದು ಪರಿಗಣಿಸಲಾಗುತ್ತಿತ್ತು.[೧೧] ಮೂವತ್ತು ವರ್ಷ ತುಂಬುವದರೊಳಗಾಗಿ, ನಿವೃತ್ತರಾಗಿ ಬಿಡುತ್ತಿದ್ದರು. ತರಬೇತಿಯ ಸಮಯದಲ್ಲಿ ಅಂಗಾಂಗಳು ಬಿಲ್ಲಿನಂತೆ ಮಣಿಯಬೇಕೆಂದು ಹತ್ತಾರು ಬಗೆಯ ವ್ಯಾಯಾಮ, ಶಾರೀರಿಕ ಚಟುವಟಿಕೆಗಳನ್ನು ಕಲಿಸುತ್ತಿದ್ದರು. ನಾಟ್ಯಶಾಲೆಗೆ ಹೊಂದಿ ಇಂಥ ಅಂಗಾಂಗಳ ತರಬೇತಿಗೆ ವಿಶ್ರಾಂತಿಧಾಮ ಇರುತ್ತಿತ್ತು.[೧೨] ಚಾಚೂ ತಪ್ಪದೇ ನೃತ್ಯ ಭಂಗಿಗಳನ್ನು ರೂಢಿಸಿಕೊಳ್ಳುವದಕ್ಕಾಗಿ, ಅಂಥ ಭಂಗಿಯ ಪ್ರತಿಮೆಗಳನ್ನು ಸ್ಥಾಪಿಸಲಾಗಿತ್ತು. ಅವನ್ನು ನೋಡಿ ವಿದ್ಯಾರ್ಥಿನಿಯರು ತಿದ್ದಿಕೊಳ್ಳುತ್ತಿದ್ದರು.[೧೩] ಇಷ್ಟಾಗಿಯೂ ನರ್ತಕಿಯರು ತಪ್ಪು ಹೆಜ್ಜೆ ಹಾಕಿದರೆ, ಶಿಕ್ಷಕರು ಅವರನ್ನು ತರಾಟೆಗೆ ತೆಗೆದುಕೊಳ್ಳದೇ ಬಿಡುತ್ತಿರಲಿಲ್ಲ(66). ಸಾಮಾನ್ಯವಾಗಿ ಅರಮನೆಯಲ್ಲಿ ಗಂಡಸರನ್ನು ಒಳಗೆ ಸೇರಿಸುತ್ತಿರಲಿಲ್ಲ. ವಯಸ್ಕ ಅಧಿಕಾರಗಳು ಮಾತ್ರ ಅರಸನ ಅಪ್ಪಣೆ ಪಡೆದು ಹೆಂಗಳೆಯರ ನಿವಾಸಕ್ಕೆ ಹೋಗಬಹುದಾಗಿತ್ತು. ಅರಮನೆಯ ಒಳಗಿನ ಸಿಬ್ಬಂದಿಯವರೆಲ್ಲ ಹೆಂಗಸರೇ ಇದ್ದುದರಿಂದ ರಾಜ್ಯದಲ್ಲೆಲ್ಲ ಹುಡುಕಾಡಿ ಬೇಕಾದ್ದರಲ್ಲಿ ಪರಿಣತೆಯರನ್ನು ಹುಡುಕಿ ತಂದು, ಅರಮನೆಯ ಕೆಲಸಕ್ಕೆ ನೇಮಿಸಲಾಗುತ್ತಿತ್ತು.[೧೪] ಇದರಿಂದ ಅರಮನೆಯ ಹೊರಗೂ ಸ್ತ್ರೀ ಶಿಕ್ಷಣದ ಸೌಕರ್ಯಗಳು ಇದ್ದವು ಎಂಬುದು ಸ್ಫುಟವಾಗಿದೆ.

ಅರಮನೆಯ ಆಡಳಿತದಲ್ಲಿ ಹೆಚ್ಚೆಚ್ಚು ಹೆಂಗಳೆಯರನ್ನು ನೇಮಿಸಲಾರಂಭಿಸಿದ್ದರಿಂದ ಸ್ತ್ರೀ ಶಿಕ್ಷಣಕ್ಕೆ ಹೊಸ ಆಯಾಮಗಳು ಒದಗಿದವು. ಗಣಿತ, ಲೆಕ್ಕ ಪತ್ರದಲ್ಲಿ ನುರಿತವರು, ಯಾವತ್ತೂ ದಾಖಲೆಗಳನ್ನು ಅಚ್ಚುಕಟ್ಟಾಗಿ ಇಟ್ಟು ಒಂದೂ ವರಹ ಹುಸಿಹೋಗಗೊಡುತ್ತಿರಲಿಲ್ಲ. ಮಾಂಡಲಿಕರು, ಸೇನಾಧಿಕಾರಿಗಳು, ವಿಭಾಗಾಧಿಕಾರಿಗಳಿಂದ ಬಂದ ಪತ್ರವ್ಯವಹಾರಗಳನ್ನೆಲ್ಲ ಪರಿಶೀಲಿಸಿ ಅರಸನಿಗೆ ಪ್ರಸ್ತುತಪಡಿಸಿ ಯೋಗ್ಯ ಸಲಹೆ-ಸೂಚನೆ ಪಡೆಯುತ್ತಿದ್ದರು.[೧೫] ಚರಿತ್ರೆಯಲ್ಲಿ ಪರಿಶ್ರಮವಿದ್ದವರು, ಅರಮನೆಯ ಘಟನೆಗಳನ್ನೆಲ್ಲ ಚಾಚೂ ತಪ್ಪದೇ ಬರೆದಿಡುತ್ತಿದ್ದರಲ್ಲದೇ ಬರೆದದ್ದನ್ನು ಅರಮನೆಯ ಹೊರಗಿನ ಅಧಿಕಾರಿಗಳ ದಾಖಲೆಗಳೊಂದಿಗೆ ಹೋಲಿಸಿ ನೋಡುತ್ತಿದ್ದರು. ಮಹಿಳಾ ಬೇಲಿಫರು, ನ್ಯಾಯಾಧೀಶರು ಇರುತ್ತಿದ್ದುದರಿಂದ[೧೬]

ಅರಮನೆಗೆ ಸಂಬಂಧಿತ ಭೂಮಿಯ ದಸ್ತಾವೇಜುಗಳನ್ನು ಮಾಡಿಸುವಾಗ, ತಮ್ಮ ಬೇಳೆ ಬೇಯಿಸಿಕೊಳ್ಳುವದಕ್ಕಾಗಿ 'ಹಣ' ಕೊಡುವ ಪದ್ಧತಿ ಬೆಳೆದಿರಲಿಕ್ಕಿಲ್ಲ! ಸ್ತ್ರೀ ಸಾಹಸಿಗಳಿಗೂ ಕಡಿಮೆಯಿರಲಿಲ್ಲ. ಗರಡೀಮನೆಗಳಲ್ಲಿ ಕಸರತ್ತು ಮಾಡಿ, ಭುಜಬಲ ಬೆಳೆಸಿಕೊಂಡು ಸಾರ್ವಜನಿಕ ಪ್ರದರ್ಶನ ಕೊಡುತ್ತಿದ್ದರು.[೧೭] ವಿಜಯನಗರ ಕಾಲದ ದೇವಾಲಯಗಳ ಗೋಡೆ, ಕಂಬಗಳ ಮೇಲೆ ಕುಸ್ತಿಯಲ್ಲಿ ತೊಡಗಿದ ಮಹಿಳಾ ಜಟ್ಟಿ ಜೋಡಿಗಳನ್ನು ಪ್ರಾತಿನಿಧಿಕವಾಗಿ ಮೂಡಿಸಿದ್ದನ್ನು ನೋಡಬಹುದು. ಗಟ್ಟಿಮುಟ್ಟಾದವರನ್ನು ಅರಮನೆಯ ಕಾವಲುಗಾರ್ತಿಯರನ್ನಾಗಿ ನೇಮಿಸುತ್ತಿದ್ದರು. ಅರಮನೆಯ ಆವರಣದಲ್ಲಿ ಕಟ್ಟಡಗಳು ದೂರ ದೂರ ಇದ್ದುದರಿಂದ, ಅರಸ-ಅರಸಿಯರನ್ನು ಮೇಣೆಗಳಲ್ಲಿ ಹೊತ್ತೊಯ್ಯಲು ಬಲಿಷ್ಠರಾದ ಹೆಂಗಳೆಯರಿರುತ್ತಿದ್ದರು. ಪಾಕ ಪ್ರವೀಣೆಯರು ರುಚಿಕಟ್ಟಾದ ಪದಾರ್ಥಗಳನ್ನು ಮಾಡಿ ಬಡಿಸುತ್ತಿದ್ದರಲ್ಲದೇ, ಅಡಿಗೆ ಪರಿಶುದ್ಧವೂ ವಿಷರಹಿತವೂ ಆಗಿದೆ ಎಂದು ಖಚಿತಪಡಿಸಿಕೊಳ್ಳ ಬೇಕಾಗುತ್ತಿತ್ತು. ಇದಲ್ಲದೇ ನಾನಾ ವೃತ್ತಿಗಳಲ್ಲಿ ಪಳಗಿದವರು, ದಾದಿಯರು, ಪಡಿಯರತಿಯರು, ಕುಂಚಟಗಿತ್ತಿಯರು, ಹೂಕಟ್ಟುವವರು, ಘಟ್ಟಿವಳ್ತಿಯರು, ಅಭ್ಯಂಜನ ಮಾಡಿಸುವವರು, ಚಿತ್ರಕಲೆ, ಹೊಲಿಗೆ, ಹೆಣಿಕೆ ಮಾಡುವವರು ಮತ್ತು ಆಯಾವೃತ್ತಿಯಲ್ಲಿ ತರಬೇತಿ ಕೊಡುವವರೂ ಇದ್ದರು.

ಅರಸನಿಗೆ ಹತ್ತಾರು ಪತ್ನಿಯರೂ, ಅಸಂಖ್ಯಾತ ಸಖಿಯರೂ ಇರುತ್ತಿದ್ದರು. ಸೇವಾಸಿಬ್ಬಂದಿಯ ವನಿತೆಯರೇ ವಿದ್ಯಾವಂತೆಯರು ಇರುತ್ತಿದ್ದಾಗ ಅರಸಿಯರು ಅವಿದ್ಯಾವಂತರು ಇರುವದು ಹೇಗೆ ಸಾಧ್ಯ? ಅರಸನು ತನ್ನ ವಿರಾಮ, ಮನೋಧರ್ಮ, ಆಸಕ್ತಿಗಳಿಗೆ ಅನುಸಾರವಾಗಿ ಬೇರೆ ಬೇರೆ ಹೆಂಗಳೆಯರ ಸಹವಾಸದಲ್ಲಿ ವಿರಾಮದ ವೇಳೆಯನ್ನು ಕಳೆಯುತ್ತಿದ್ದನು. ರಾತ್ರಿಯ ಮೊದಲ ಭಾಗವನ್ನು ವಿದುಷಿಯರು(ವಿದಗ್ಧೆಯರು), ವಾಕ್ಯ ಚತುರೆಯರು, ಪರಿಹಾಸ ವಿನೋದಿಗಳು, ಸಾಹಿತ್ಯ ರಸಭಾವಜ್ಞೆಯರು, ಕಥನ ಕೋವಿದೆಯರ ಸಂಗದಲ್ಲಿ ಕಳೆಯುತ್ತಿದ್ದ.[೧೮] ರಾತ್ರಿಯನ್ನು ಇಷ್ಟಪಟ್ಟ ಮಹಿಷಿಯೊಂದಿಗೆ ಕಳೆದರೆ, ಹಬ್ಬ ಹರಿದಿನ, ವಿಶೇಷ ಧಾರ್ಮಿಕ ಪ್ರಸಂಗಗಳಲ್ಲಿ ಪಟ್ಟದರಸಿಯೊಂದಿಗೆ ಇರುತ್ತಿದ್ದ. ಗಣಿಕಾವರ್ಗಕ್ಕೆ ಅರಮನೆಯಲ್ಲಿ ಓಡಾಡುವ ಸ್ವಾತಂತ್ರ್ಯ ಇತ್ತಲ್ಲದೆ ದೊರೆಯ ಎದುರಿಗೇ ವೀಳ್ಯ ಹಾಕಿಕೊಳ್ಳುವ ಸೌಲಭ್ಯವಿತ್ತು. ಅಂದಿನ ವೇಶ್ಯಾ ವರ್ಗ, ಎಳೆವಯಸ್ಸಿನಲ್ಲಿಯೇ ಸಂಗೀತ, ಕಲೆ, ಸರಸವಾದ ಮಾತುಗಾರಿಕೆ, ರಸಿಕತೆ, ಸಾಹಿತ್ಯಾಸಕ್ತಿ, ಅಭಿರುಚಿ, ಸೌಂದರ್ಯದೃಷ್ಟಿಗಳನ್ನು ತಮ್ಮ ತಾಯಂದಿರಿಂದ ಅಥವಾ ನುರಿತ ವಿದಗ್ಧೆಯರಿಂದ ಕಲಿತುಕೊಳ್ಳುತ್ತಿದ್ದರು. ಇಂಥ ಕಲಾವಂತೆಯರ ಸಹವಾಸ ಸುಖ ಪಡೆಯುವದಕ್ಕಾಗಿ ಊರ ಪ್ರತಿಷ್ಠಿತರು ಯಾವ ಮುಚ್ಚುಮರೆ ಇಲ್ಲದೇ ಅವರಲ್ಲಿ ಹೋಗಿ ಬರುತ್ತಿದ್ದರು.

ಪುರುಷರಿಗೆ ಸುಖ-ಸಂತೋಷ ಕೊಡುವದನ್ನೆ ವೃತ್ತಿಯಾಗಿ ಮಾಡಿಕೊಂಡ ವೇಶ್ಯಾಂಗನೆಯರು ಎಷ್ಟೊಂದು ಕಷ್ಟಪಟ್ಟು ವಿವಿಧ ವಿದ್ಯೆಗಳನ್ನು ತಮ್ಮವನ್ನಾಗಿ ಮಾಡಿಕೊಳ್ಳುತ್ತಿದ್ದರು ಎಂಬುದನ್ನು ದಂಡಿ(ಕ್ರಿ.ಶ.೬ನೇ ಶತಮಾನ), ದಾಮೋದರ ಗುಪ್ತ (ಕ್ರಿ.ಶ.೯ನೇ ಶತಮಾನ) ಮತ್ತು ರಾಘವಾಂಕ ಕವಿ(೧೩ನೇ ಶತಮಾನ)ಗಳ ಕೃತಿಗಳಿಂದ ಅರಿಯಬಹುದಾಗಿದೆ. ಅರಸನ ಪ್ರತಿಷ್ಠೆಯ ಒಡ್ಡೋಲಗದಲ್ಲಿ ಅವರಿಗೆ ಸ್ಥಾನವಿತ್ತು. ವಿಶೇಷ ಆಮಂತ್ರಿತ ಸಭೆಯಲ್ಲಿ ಅರಸಿಯರು,

ಕುಲಾಂಗನೆಯರೊಂದಿಗೆ ಅವರಿಗೆ ಆಸನ ಕೊಡಲಾಗುತ್ತಿತ್ತು.[೧೯] ಕಾವ್ಯಗೋಷ್ಠಿಗಳಲ್ಲೂ ಅವರು ಇರುತ್ತಿದ್ದರು.[೨೦] ಈ ಸ್ಥಾನಮಾನಗಳಿಗೆ ಬಾಧ್ಯಸ್ಥರಾಗುವವರು ಎಳೆಯ ವಯಸ್ಸಿನಿಂದಲೇ ನೃತ್ಯ, ನಾಟಕ, ವಾದ್ಯ ನುಡಿಸುವಿಕೆ, ಹಾಡುಗಾರಿಕೆ, ಚಿತ್ರಕಲೆ, ಆಟಿಗೆಗಳನ್ನು ತಯಾರಿಸುವದು, ಹೂಗಳ ಹಾರ ದಂಡೆಗಳನ್ನು ಕಟ್ಟುವದು, ಹೂವಿನ ವಿವಿಧ ಅಲಂಕಾರಗಳನ್ನು ತಯಾರಿಸುವದು, ಸುಗಂಧಗಳ ತಯಾರಿಕೆ, ತರ್ಕ, ತತ್ವಜ್ಞಾನ, ವಾಕ್ ಚಾತುರ್ಯಗಳನ್ನು ತಮ್ಮವನ್ನಾಗಿ ಮಾಡಿಕೊಳ್ಳಬೇಕಾಗಿತ್ತು. ಇದಲ್ಲದೇ ಅಕ್ಷರಾಭ್ಯಾಸದಲ್ಲಿ ವಿಶೇಷ ಶ್ರಮವಿರಬೇಕಿತ್ತು.[೨೧] ಅದಕ್ಕಾಗಿ ಶಿಕ್ಷಕರಿಂದ ಪಾಠ ಹೇಳಿಸಿಕೊಂಡು ನಂತರ ಅವನ್ನು ಅಭ್ಯಸಿಸಿ(67), ಮರುದಿನ ಒಪ್ಪಿಸಬೇಕಾಗುತ್ತಿತ್ತು(68). ಓದಿನ ನಡುವೆ ವೀಣೆ ನುಡಿಸುವದು(69) ಹಾಡುವದು ಇವೇ ಬದಲಾವಣೆಯ ವಿಷಯಗಳಾಗಿದ್ದವು. ಇನ್ನಿತರ ಗ್ರಂಥಗಳೊಂದಿಗೆ ಕಾಮಶಾಸ್ತ್ರವನ್ನು ಕೂಲಂಕಷವಾಗಿ ಅಧ್ಯಯನ ಮಾಡುತ್ತಿದ್ದರು. ಇದಲ್ಲದೇ ಜನಸಾಮಾನ್ಯರ ವಿದ್ಯೆಗಳಾದ ಹೊಲಿಗೆ, ಹೆಣಿಕೆ, ಅಡಿಗೆ, ತೋಟಗಾರಿಕೆ, ಧಾತುವಿನ ಕೆಲಸ, ಮುಂತಾದವುಗಳಲ್ಲೂ ಮನಸ್ಸು ಹಾಕಬೇಕಿತ್ತು. ಇವೆಲ್ಲಾ ವಿದ್ಯೆಗಳಲ್ಲಿ ಎಲ್ಲ ಗಣಿಕೆಯರು ಪರಿಣತರಾಗುವದು ಅಸಾಧ್ಯವಾದರೂ, ಕೆಲವುಗಳಲ್ಲಿ ಆದರೂ ಆಗಿರುತ್ತಿದ್ದರೆಂಬುದು ನಿರ್ವಿವಾದ. ಸಂಜೆಗಳಲ್ಲಿ ರಸಿಕರು ಅವರ ಮನೆಗೆ ಆಗಮಿಸಿ, ಚದುರಂಗ, ಪಗಡೆ ಆಡುವದು, ನೃತ್ಯ-ಸಂಗೀತಗಳಲ್ಲಿ ಭಾಗವಹಿಸುವದು, ಇಲ್ಲವೇ ಕಥೆಗಳನ್ನು ಕೇಳುವದು ಇತ್ಯಾದಿ ಚಟುವಟಿಕೆಗಳಲ್ಲಿ ತೊಡಗಿರುತ್ತಿದ್ದರು.[೨೨] ದೇವದಾಸಿಯರು ದೇವಾಲಯದ ಸಿಬ್ಬಂದಿಯ ಭಾಗವಾಗಿದ್ದು ಪೂಜೆಯ ಹೊತ್ತಿಗೆ ನಾಟ್ಯ ಸೇವೆ, ಸಂಗೀತ ಸೇವೆ ಸಲ್ಲಿಸುತ್ತಿದ್ದರು. ಧಾರ್ಮಿಕ ಚಟುವಟಿಕೆಗಳಲ್ಲಿ ಇವರ ಪಾತ್ರವಿರುತ್ತಿತ್ತು.

ರಾಜ ಪರಿವಾರದ ಹೆಣ್ಣುಮಕ್ಕಳು ಸದಾಕಾಲ ಅರಮನೆಯಲ್ಲೇ ಇದ್ದರೂ ಕೂಪಮಂಡೂಕಗಳಾಗದಂತೆ ಎಚ್ಚರಿಕೆ ವಹಿಸುತ್ತಿದ್ದರು. ಜಗತ್ತಿನ ಇನ್ನಿತರ ಜನ ಹೇಗೆ ವಾಸಿಸುತ್ತಾರೆಂದು ಅವರಿಗೆ ಜ್ಞಾನವಿರಬೇಕೆಂದು ಅರಮನೆಯ ಗೋಡೆಗಳಲ್ಲಿ ಜನಜೀವನದ ಆಕರ್ಷಕ ಚಿತ್ರಗಳಿರುತ್ತಿದ್ದವು. ಅವರಲ್ಲಿ ಪೋರ್ಚುಗೀಜರಾದಿ ವಿದೇಶೀಯರು ಜೀವಿಸುವ ರೀತಿಗಳನ್ನು ಚಿತ್ರಿಸುತ್ತಿದ್ದರು.[೨೩] ಅರಮನೆಗಳಲ್ಲಿ ಚಿತ್ರಶಾಲೆಗಳಿರುವದು ಸಾಮಾನ್ಯವಾಗಿತ್ತು. ಕಂಠೀರವ ನರಸರಾಜನ ಅರಮನೆಯಲ್ಲಿ ಚಂದ್ರಶಾಲೆ, ಚಿತ್ರಶಾಲೆಗಳಿದ್ದವು. ಜೊತೆಗೆ ಚೆಲುವಾದ ಪುತ್ಥಳಿಗಳು ಇದ್ದವು. ಭಾರತ, ರಾಮಾಯಣ, ಭಾಗವತ ಕಥಾ ಪ್ರಸಂಗಗಳನ್ನು ರೂಢಿಸುವಂಥವು. ಶೃಂಗಾರ ರಸಭರಿತವಾದ, ಕಾವ್ಯ-ನಾಟಕ ಪ್ರಸಂಗಗಳನ್ನೂ ನಿರೂಪಿಸುತ್ತಿದ್ದವು. ಅಲ್ಲದೆ ವಿವಿಧ ಪ್ರಕಾರದ ಪಕ್ಷಿಗಳ ಪ್ರತಿಕೃತಿಗಳ ಜೊತೆಗೆ ಆನೆ, ವರಾಹ, ಕಾಡುಕೋಣ, ಹೆಬ್ಬುಲಿ, ಸಿಂಹ, ಹರಿಣಗಳ ಪ್ರತಿಮೆಗಳನ್ನು ಇಟ್ಟಿದ್ದರು.[೨೪] ಇವಕ್ಕೆ ಶೈಕ್ಷಣಿಕ ಉದ್ದೇಶವಿತ್ತೆಂದು ಸಹಜವಾದ ಕಲ್ಪನೆ ಬರುವಂತಿದೆ.

ಓದಲು ಬಾರದವರಿಗೆ ಕೇಳಿ ತಿಳಿದುಕೊಳ್ಳಲು ವಿವಿಧ ಗ್ರಂಥಗಳನ್ನು ಓದಿ ಹೇಳುವದಕ್ಕಾಗಿಯೇ ಅರಮನೆಯಲ್ಲಿ ಹಲವರು ಇರುತ್ತಿದ್ದರು. ಪ್ರೌಢದೇವರಾಯನ ಅರಮನೆಯಲ್ಲಿ ಓದುವ

ಹೊನ್ನಮ್ಮವ್ವ ಇದ್ದಂತೆ, ತಿರುಮಲಾಂಬಿಕೆ ಅಥವಾ ತಿರುಮಲಮ್ಮ ಅಚ್ಯುತದೇವರಾಯನ ಕಾಲಕ್ಕೆ ಸಂಸ್ಕೃತದ ರಾಮಾಯಣ, ಮಹಾಭಾರತ ಪುರಾಣಗಳನ್ನು ಓದಿ ಹೇಳುವದರಲ್ಲಿ ಮಿಗಿಲೆನಿಸಿಕೊಂಡಿದ್ದಳಲ್ಲದೇ 'ವರದಾಂಬಿಕಾ ಪರಿಣಯಂ' ಎಂಬ ಕೃತಿಯನ್ನು ಸಂಸ್ಕೃತದಲ್ಲಿ ರಚಿಸಿದಳು. ತನ್ನ ವಿದ್ವತ್ತೆಯಿಂದ ಅಚ್ಯುತದೇವರಾಯನನ್ನು ಆಕರ್ಷಿಸಿ ಆತನ ರಾಣಿಯಾದಳು.[೨೫] ಇದಕ್ಕೂ ಇನ್ನೂರು ವರ್ಷ ಮೊದಲೇ ಬುಕ್ಕರಾಯನ ಸೊಸೆ ಗಂಗಾದೇವಿ, ವೀರಕಂಪರಾಯಚರಿತ ಅಥವಾ 'ಮಧುರಾವಿಜಯಂ' ಸಂಸ್ಕೃತದಲ್ಲಿ ರಚಿಸಿದ್ದಳು. ಸಂಚಿಯ ಹೊನ್ನಮ್ಮನ ಪ್ರತಿಭೆಯನ್ನು ಗುರುತಿಸಿ, ಚಿಕ್ಕದೇವರಾಯನು ಅಳಸಿಂಗಾಚಾರ್ಯರಿಂದ ಒಳ್ಳೆಯ ಶಿಕ್ಷಣ ಕೊಡಿಸಿದ್ದರಿಂದ ಆಕೆಯ ಕವಿತ್ವ ಅರಳಿ 'ಹದಿಬದೆಯಧರ್ಮ' ಬರೆದಳು. ತಾನೆಷ್ಟು ವಿದುಷಿಯಾಗಿದ್ದರೂ, ಓದಲು ಬರೆಯಲು ಬಾರದವರೂ, ಅದನ್ನು ಓದಿಸಿಯೋ ಹಾಡಿಸಿಯೋ ಕೇಳಿ ಅರ್ಥಮಾಡಿಕೊಳ್ಳುವಂತೆ ಸರಳವಾಗಿ ಬರೆದಿದ್ದಾಗಿ ಹೇಳಿಕೊಂಡಿದ್ದಾಳೆ.[೨೬] ಲಭ್ಯವಿದ್ದ ಶಿಕ್ಷಣದ ಲಾಭ ಪಡೆದ ಮಹಿಳೆಯರು ಅದನ್ನು ಸರಿಯಾಗಿ ಉಪಯೋಗಿಸಿಕೊಂಡು ಇತರರಿಗೂ ಅದರ ಲಾಭ ದೊರೆಯುವಂತೆ ಮಾಡುತ್ತಿದ್ದರು.

ಈ ಕಾಲದಲ್ಲಿ ಜನಸಾಮಾನ್ಯರೂ ಕಲೆ, ವಿನೋದಾವಳಿಗಳ ತರಬೇತಿಯಿಂದ ವಂಚಿತರಾಗಿರಲಿಲ್ಲ. ನರ್ತಕರು, ವಾದ್ಯಮೇಳದವರು, ಸಂಗೀತಗಾರರು ಊರಿಂದೂರಿಗೆ ಹೋಗಿ ತಮ್ಮ ಕಲಾಕೌಶಲ್ಯವನ್ನು ಪ್ರದರ್ಶಿಸಿ, ಪ್ರಶಂಸೆ, ಪಾರಿತೋಷಕ, ಧನಸಹಾಯಗಳನ್ನು ಪಡೆಯುತ್ತಿದ್ದರು. ಚಿಕ್ಕ ಊರುಗಳಲ್ಲಿಯೂ ನೃತ್ಯಶಿಕ್ಷಣ ನೀಡುವವರಿದ್ದರು. ನಟ್ಟುವರು ಕೋಲು ಹಿಡಿದು ನೃತ್ಯಗಾತಿಯರ ಹೆಜ್ಜೆಗಳನ್ನು ನಿರ್ದೇಶಿಸುತ್ತಿದ್ದರು. ಬಸವ ಪುರಾಣದಲ್ಲಿ ಮಹಿಳಾ ವಾದ್ಯದ ಮುಖ್ಯಸ್ಥೆ, ತನ್ನವರಿಗೆ ಕೊಡುವ ಸಲಹೆ ಸೂಚನೆಗಳ ಉಲ್ಲೇಖವಿದೆ. "ಮದ್ದಳೆಯವರೇ! ವಾದ್ಯವನ್ನು ಶ್ರುತಿಗೊಳಿಸಿ, ಜೊತೆವಾದ್ಯದವರು ಅನುವಾಗಿರಿ, ಮೇಳದವರು ಸಜ್ಜಾಗಿರಿ. ಮಹದೇವಿ, ಕಹಳೆ ಹಿಡಿ. ದ್ರುಪದವನು ವೊಯ್ ಎಂದು ನುಡಿಸಿ, ಲಿಂಗಾದೇವಿ ಕೊಳಲು ನುಡಿಸು. ಚಂಗಳೆ, ತಾಳ ಹಿಡಿ" ಎಂದೆಲ್ಲ ನಿರ್ದೇಶಿಸಲಾಗುತ್ತಿತ್ತು.[೨೭] ಶತಮಾನಗಳಲ್ಲಿ ನಿರ್ಮಿತವಾದ ಅನೇಕಾನೇಕ ದೇವಾಲಯಗಳಲ್ಲಿ ಈ ವರ್ಣನೆಗೆ ಹೋಲುವ ಕರ್ನಾಟಕದಲ್ಲಿ ಪ್ರಚಲಿತವಿದ್ದ ಹಲವಾರು ವಾದ್ಯಗಳನ್ನು ಪ್ರತಿನಿಧಿಸುವ ಶಿಲ್ಪಗಳನ್ನು ಕಾಣಬಹುದು.

ಸ್ತ್ರೀ ಶಿಕ್ಷಣವನ್ನು ಸೂಚಿಸುವ ಕೃತಿಗಳನ್ನು ನಿರ್ಮಿಸುವದು ಅನೇಕ ಶಿಲ್ಪಿಗಳ ಕನಸಾಗಿತ್ತು. ಬೀದರ ಜಿಲ್ಲೆಯ ಜಲಸಾಂಗವಿಯಲ್ಲಿ ಚಾಲುಕ್ಯರ ಕಾಲದ ಇಂಥ ಸುಂದರ ಶಿಲ್ಪವಿದೆ(70). ಅಂಗಾಂಗ ತುಂಬಿಕೊಂಡು ಸಾಲಂಕೃತಳಾದ ಶಿಲಾಬಾಲಿಕೆ ಕಡತದಲ್ಲಿ ಬರೆಯುವದರಲ್ಲಿ ಮೈಮರೆತಿದ್ದಾಳೆ. ಸೋಮನಾಥಪುರದಲ್ಲಿ(ಮಂಡ್ಯಜಿಲ್ಲೆ) ಕುಬ್ಜನೊಬ್ಬ ಅಸಾಮಾನ್ಯವಾದ ಕಂಟವೊಂದನ್ನು ಹಿಡಿದು ತಾಳೆಗರಿಯ ಮೇಲೆ ಬರೆಯುತ್ತಿದ್ದಾನೆ (71). ಬೇಲೂರಿನ ಸುರಸುಂದರಿ ಶಾಸನ ಬರೆಯುವ ಭಂಗಿಯಲ್ಲಿ ನಿಂತಿದ್ದಾಳೆ(72). ಪಟ್ಟದಕಲ್ಲಿನ ಶಿಲ್ಪ ಒಂದರಲ್ಲಿ ಕುಮಾರಿಯೋರ್ವಳು ಕೂತಲ್ಲಿಂದ ತಿರುಗಿ ಬರೆಯುತ್ತಿದ್ದಾಳೆ(73). ಅವಳ ಎದುರಿನಲ್ಲಿ ಇಬ್ಬರು ವಿದ್ಯಾರ್ಥಿಗಳು. ಜೊತೆಗೆ ಗಣಪನೂ ಇದ್ದಾನೆ! ಸ್ತ್ರೀ ಶಿಕ್ಷಣ ಒದಗಿಸುವ ವರ್ಣದ

ಭಿತ್ತಿಚಿತ್ರವೊಂದು ಅತ್ಯಂತ ಮೋಜಿನದಾಗಿದೆ. ಶಿಕ್ಷಕನು ಕರಿಹಲಿಗೆಯ ಸಹಾಯದಿಂದ ಬಿಕ್ಕಟ್ಟಿನ ವಿಷಯವನ್ನು ತಿಳಿಮಾಡಿ ಹೇಳುವ ಯತ್ನದಲ್ಲಿದ್ದಾಗ(74), ಸಮೀಪದಲ್ಲಿ ಕುಳಿತವಳು ತನ್ನ ಸಂದೇಹ ನಿವಾರಿಸಿಕೊಳ್ಳಲು ಪ್ರಶ್ನೆ ಕೇಳುತ್ತಿದ್ದಾಳೆ. ಅವಳ ಹಿಂದೆ ಇದ್ದ ಇನ್ನಿಬ್ಬರು ತಮಗೂ ಅನುಮಾನಗಳಿವೆ! ಎಂದು ಸೂಚಿಸಲು ಕೈ ಎತ್ತಿದ್ದಾರೆ. ನಾಲ್ಕನೆಯವಳು ಪಾಠದತ್ತ ಲಕ್ಷ ಹರಿಸದೇ ಯಾರನ್ನೊ(ಬಹುಶಃ ಪ್ರಿಯತಮನನ್ನು!) ಎದುರು ನೋಡುವಂತೆ ಕಿಟಕಿ ಬಳಿ ದೃಷ್ಟಿ ಹರಿಸಿದ್ದಾಳೆ.

ಕನ್ನಡನಾಡಿನ ಸ್ತ್ರೀ ಶಿಕ್ಷಣ, ಸುಪ್ತವಾಹಿನಿಯಿದ್ದಂತೆ. ಪ್ರಕಟವಾದಾಗಲೇ ಅದರ ಅಸ್ತಿತ್ವದ ಅರಿವಾಗುವದು. ಅತ್ತಿಮಬ್ಬೆ, ಅಕ್ಕಮಹಾದೇವಿ, ಶಾಂತಲೆ, ಸಾವಿಯಬ್ಬೆ, ಕೆಳದಿ ಚೆನ್ನಮ್ಮ, ಬೆಳವಡಿಮಲ್ಲಮ್ಮ,[೨೫] ಚೆನ್ನಭೈರಾದೇವಿ ಮೊದಲಾದವರಿಗೆ ವಿಶಾಲ ಮನೋಭಾವದೊಂದಿಗೆ ವಿದ್ಯೆಯ ಹಿನ್ನೆಲೆಯಿತ್ತು. ರಾಣಿಯರಿಗೆ ಯುದ್ಧಶಿಕ್ಷಣವೂ ದೊರೆಯುತ್ತಿತ್ತು. ಆದ್ದರಿಂದಲೇ ತ್ಯಾಗ, ಕಲೆ, ಧೈರ್ಯ, ಸಾಹಸಗಳಿಂದ ಹೆಚ್ಚಿನ ಉದಾತ್ತತೆ ತೋರ್ಪಡಿಸಿ ಚಿರಸ್ಮರಣೀಯರಾಗಿದ್ದಾರೆ.

## ಸಂದರ್ಭ ಸೂಚಿ


೧. ಭಾರತೀಯ ಸಂಸ್ಕೃತಿ, ಪು ೨೦೨.
೨. ಕಾವ್ಯಮೀಮಾಂಸಾ, ಪು ೨೩: "ಸಂಸ್ಕಾರೊಹ್ಯಾತ್ಮನಿ ಸಮವೈತಿ. ಪುರುಷವತ್ ಯೋಷಿತೋಽಪಿ ಕವೀ ಭವೇಯುಃ".
೩. ಕಾವ್ಯಮೀಮಾಂಸಾ, ಪು ೫೩: ವಿಜ್ಜಿಕಾ ಅಥವಾ ವಿಜಯಾಂಕಾ, ಪರಮೇಶ್ವರ ಪುಲಿಕೇಶಿಯ ಸೊಸೆ, ಚಂದ್ರಾದಿತ್ಯನ ರಾಣಿ, ಸಂಸ್ಕೃತದ ಕವಯತ್ರಿ.
೪. ಎ.ಕ. X ಬೌರಿಂಗಪೇಟೆ ೬೫
೫. 'ಚೌರಪಂಚಾಶಿಕಾ' -ಬಿಲ್ಹಣನ ಕಾವ್ಯ. ಪು. ೩-೪, ೫೫-೫೭
೬. ಆದಿಪುರಾಣ ೭, ಪದ್ಯ ೫೮-೬೦.
೭. ಪ್ರಭುಲಿಂಗಲೀಲೆ ಸಂಧಿ ೫, ಪದ್ಯ ೧೭-೧೮.
೮. ಸಿವೆಲ್-ಪು ೩೬೨.
೯. ಅದೇ.
೧೦. ಬಸವಪುರಾಣ: ೨ನೇ ಕಾಂಡ ಸಂಧಿ ೧೨, ಪದ್ಯ ೪೨ ಮತ್ತು ಮೋಹನ ತರಂಗಿಣಿ, "ರುದ್ರವೀಣೆ, ಧನುರ್ವೀಣೆ, ಚಂತ್ರ, ತುಂಬುರುವೀಣೆ, ಕೂರ್ಮವೀಣೆ, ಸ್ವರಮಂಡಲ", ಸಂಧಿ ೨೭, ಪದ್ಯ ೧೧.
೧೧. ಶಿವತತ್ವರತ್ನಾಕರ VI iii ಪದ್ಯ ೩೪ ಪು ೪೨೭ ಸಿವೆಲ್, ಪುಟ ೨೭೭.
೧೨. ಸಿವೆಲ್ ಪು ೨೭೭.
೧೩. ಅದೇ.
೧೪. ಪ್ರ.ಇಂ. II, ಬಾರ್ಬೋಸಾ, ಪು ೨೯೩.
೧೫. ಸಿವೆಲ್, ಪು ೩೬೩.

೧೬. ಅದೇ. ನ್ಯುನಿಝುನ ವೃತ್ತಾಂತ, ಪು ೩೬೩.

೧೭. ಅದೇ, ಪು ೨೫೮.

೧೮. ಮಾನಸೋಲ್ಲಾಸ II ಪು ೮೦, ಪದ್ಯ ೯೧೮-೧೯.

೧೯. ಅದೇ, ಪು ೧೫೫, ಪದ್ಯ ೩-೫.

೨೦. ಕಾವ್ಯಮೀಮಾಂಸಾ, ಪು ೫೪-೫೫.

೨೧. ದಶಕುಮಾರಚರಿತ ಉಚ್ಛ್ವಾಸ II ಕಾಮಮಂಜರಿಯ ಶಿಕ್ಷಣ.

೨೨. ಸೋಮನಾಥ ಚಾರಿತ್ರ ಸಂಧಿ ೨, ಪದ್ಯ ४೫.

೨೩. ಸಿವೆಲ್, ಪು ೨೭೪.

೨೪. ಕಂಠೀರವ ನರಸರಾಜ ವಿಜಯಂ ಸಂಧಿ ೭, ಪು ೧೮-೩೧.

೨೫. ಎಸ್.ಐ.ಐ. IX (ii) ನಂ.೫೫೬.

೨೬. ಹದಿಬದೆಯ ಧರ್ಮ ಸಂಧಿ ೯, ಪದ್ಯ ೫೬.

೨೭. ಬಸವಪುರಾಣ ಕಾಂಡ ೨, ಸಂಧಿ ೧೨, ಪದ್ಯ ४೨.

೨೮. ಬೆಳವಡಿ ಮಲ್ಲಮ್ಮನಿಗೆ ಅಣ್ಣ ಸದಾಶಿವನಾಯಕನೊಡನೆಯೇ ಹಲವು ಭಾಷೆಗಳಲ್ಲಿ, ಅನೇಕ ವಿಷಯಗಳಲ್ಲಿ ಮತ್ತು ಯುದ್ಧ ಶಾಸ್ತ್ರದಲ್ಲಿ ತರಬೇತಿ ದೊರೆತಿತ್ತು. ಹಿರಿಯ ಶಾಸ್ತ್ರಿಗಳು, ಪಂತರು(ಪಂಡಿತರು) ಮತ್ತು ವೀರಯೋಧರು ಶಿಕ್ಷಣ ಕೊಡಲು ನೇಮಿಸಲ್ಪಟ್ಟಿದ್ದರು. ಅಣ್ಣ-ತಂಗಿಯರು ಇತರ ಹುಡುಗ-ಹುಡುಗಿಯರೊಂದಿಗೆ ಪಾಠಶಾಲೆಗೆ ಹೋಗಿ ಓದಿದ್ದು ಒಂದು ವಿಶೇಷ. ನೋಡಿ: ಅನುಬಂಧ ೧.

## ೧೦. ಶಾರೀರಿಕ ಶಿಕ್ಷಣ

ಪ್ರಾಚೀನ ಕರ್ನಾಟಕದಲ್ಲಿ ಅಕ್ಷರಾಭ್ಯಾಸ ಇಲ್ಲವೇ ಬೇರೆ ಶಿಕ್ಷಣದ ಜೊತೆಗೆ, ಶಾರೀರಿಕ ಬೆಳವಣಿಗೆಗೆ ಅತ್ಯಂತ ಮಹತ್ವ ಕೊಡಲಾಗಿತ್ತು. ಪಾಠ ಮುಗಿದಾಗ ಹುಡುಗರೆಲ್ಲ ಆಟಕ್ಕೆ ಓಡುತ್ತಿದ್ದರು. ಊರಲ್ಲಿ ಗಿಡಮರಗಳಿರುವ ಬಯಲು, ಆಟಕ್ಕೆ ಮೀಸಲಿರುತ್ತಿತ್ತು. ದೇವಾಲಯದ ಪ್ರಾಂಗಣವೂ ಮಕ್ಕಳಿಗೆ ಕ್ರೀಡಾಂಗಣವಾಗುತ್ತಿತ್ತು. ಆಟ-ಪಾಟ ಪಂದ್ಯಾಟಗಳಲ್ಲಿ ಶ್ರಮವಹಿಸಿ, ಮೇಲ್ಮೆ ತೋರಿಸಲು ಮಕ್ಕಳನ್ನು ಪ್ರೋತ್ಸಾಹಿಸಲಾಗುತ್ತಿತ್ತು. ಎರಡು ತಂಡಗಳಲ್ಲಿ ಜಗಳವಾಗಿ ಗುರುಗಳ ಹತ್ತಿರ ದೂರ ಬಂದಾಗ ಗುರುಗಳು ಇಬ್ಬರನ್ನೂ ಶಿಕ್ಷಿಸಿ, ಆಡುವದು ನ್ಯಾಯಮಾಡಲಿಕ್ಕಲ್ಲವೆಂದು ಎಚ್ಚರಿಸುತ್ತಿದ್ದರು. ಶಿಕ್ಷಕರು ಇಲ್ಲದಿದ್ದಾಗ ಹಿರೇಮಣಿಗಳು ಪಾಠದಂತೆ ಆಟಗಳಲ್ಲೂ ಹಿರೇಹುದ್ದರಿತನ ವಹಿಸುತ್ತಿದ್ದರು. ಅಲ್ಲದೇ ವಿದ್ಯಾಕೇಂದ್ರಕ್ಕಾಗಿ ಹಣ್ಣು, ಕಾಯಿ ಕೀಳುವದು, ಕಟ್ಟಿಗೆ ಒಡೆಯುವದು, ಸಾಮಾನು ಸರಂಜಾಮು ತರುವದನ್ನು ಅವರೇ ನಿರ್ವಹಿಸಿ, ಇದಾವುದೂ ಅವಮಾನಕಾರಿಯೆಂದು ಭಾವಿಸದೇ ಗುರುಗಳ ಹತ್ತಿರದವರಾಗಿ, 'ಮರಿಶಿಕ್ಷಕ'ರ ಹೊಣೆಯನ್ನು ಸರಿಯಾಗಿ ಹೊರುತ್ತಿದ್ದರು.

ಯಾವ ಖರ್ಚೂ ಇಲ್ಲದೇ ಶಾರೀರಿಕ ತರಬೇತಿ ಕೊಡುವದು ಈ ಆಟಗಳ ವೈಶಿಷ್ಟ್ಯ. 'ಆಳಿನೇರಿಕೆ'ಯಲ್ಲಿ ಒಬ್ಬ ಹುಡುಗ ಇನ್ನೊಬ್ಬನ ತೋಳುಗಳನ್ನೇರಿ, ಇನ್ನೊಂದು ಅಂಥದೇ ಜೋಡಿಯೊಡನೆ ಎಳೆದಾಡಿ, ನೆಲಕ್ಕುರುಳಿಸುವಂತೆ ಯತ್ನಿಸುವದು. 'ಹಾರುಗುಪ್ಪೆ'ಯಲ್ಲಿ ಮಳಲ ರಾಶಿಯ ಮೇಲೆ ಕಪ್ಪೆಯಂತೆ ಜಿಗಿಯುತ್ತ ಗುರಿಯ ಗೆರೆಯನ್ನು ಪ್ರಥಮವಾಗಿ ಮುಟ್ಟಲು ಯತ್ನಿಸುವದು, 'ಕೆಡಹುಕುಟ್ಟು' ಆಟದಲ್ಲಿ ಗುದ್ದಾಡುತ್ತ ಪ್ರತಿಸ್ಪರ್ಧಿಯನ್ನು ನೆಲಕ್ಕೆ ಕೆಡಹುವದಿತ್ತು. 'ದಂಡೆಯ' ಸಾಮೂಹಿಕವಾಗಿ ತೆಗೆಯುವ ಸಾಮು(ದಾಂಡ್) ಆಗಿತ್ತು. ಎಲ್ಲರಿಗಿಂತ ಹೆಚ್ಚು ಸಾಮು ತೆಗೆದವನೇ ಜಯಶಾಲಿಯಾಗಿರುತ್ತಿದ್ದ. 'ಗುರಿಯಾಳು ಚೆಂಡಿನ ಹೊಣಕೆ'ಯಲ್ಲಿ ಓಡುವ ಪ್ರತಿಸ್ಪರ್ಧಿಯನ್ನು ಬಟ್ಟೆಯಿಂದ ಮಾಡಿದ ಚೆಂಡಿನಿಂದ ಗುರಿಯಿಟ್ಟು ಹೊಡೆಯಲಾಗುತ್ತಿತ್ತು. 'ಗುತ್ತಿನ ಚೆಂಡು' ಆಟದಲ್ಲಿ ಒಂದು ಗುಂಪಿನವರು ಅಡಗಿಸಿಟ್ಟ ಚೆಂಡನ್ನು ಇನ್ನೊಂದು ಗುಂಪಿನವರು ಹುಡುಕಿ ಅದರಿಂದ ವಿರೋಧಿ ಗುಂಪಿನವರನ್ನು ಸದೆಬಡಿಯುವದಾಗಿತ್ತು. 'ಚಿನಿವೆಂಡು', ಆಟದಲ್ಲಿ ಚಿಕ್ಕ ಚಿಕ್ಕ ಚೆಂಡುಗಳನ್ನು ಎಸೆಯುತ್ತ ಹಿಡಿಯುವದು, 'ಗುಮ್ಮನ ಬಡಿವ ಕತ್ತಲೆಗುದ್ದು' ಆಟವೆಂದರೆ ಅರೆಗತ್ತಲೆಯಲ್ಲಿ ಒಬ್ಬರಿಗೊಬ್ಬರು ಗುದ್ದಿ, ಅಡಗಿ ಕುಳಿತು ಇನ್ನೊಬ್ಬರು ಹುಡುಕುವದಾಗಿತ್ತು. 'ಗುಡುಗು' ಅಥವಾ 'ಸಡುಗುಡ' ಇಂದಿನ 'ಸುರ್ಗುದ್'

ಅಥವಾ 'ಕಬಡ್ಡಿ' ಆಟವಾಗಿತ್ತು.[೧] ಹಲ್ಲೆಯಾಟದಲ್ಲಿ ಕುಂಟುತ್ತ ಇನ್ನಿತರರಿಗೆ ಮುಟ್ಟಲು ಯತ್ನಿಸಬೇಕು. ಮುಟ್ಟಿಸಿಕೊಂಡವನು ಆ ನಂತರ ಕುಂಟು ಹಾರಬೇಕು. ಹುಡುಗಿಯರು 'ಹಿಡಿಗವಡೆ'ಯಾಟವನ್ನು ಕವಡೆಗಳಿಂದ ಆಡುತ್ತಿದ್ದರು. 'ಗಂಭದ ಗಡಣೆ'ಯಲ್ಲಿ ಪ್ರತಿಯೊಬ್ಬಳು ಒಂದೊಂದು ಕಂಬವನ್ನು ತನ್ನದನ್ನಾಗಿ ಮಾಡಿಕೊಂಡು ನಿಲ್ಲಬೇಕು. ಓಡುತ್ತ ಕಂಬಗಳನ್ನು ಅದಲು ಬದಲು ಮಾಡುವಾಗ, 'ಕಳ್ಳಿ'ಯಿಂದ ಮುಟ್ಟಿಸಿಕೊಂಡವಳು 'ಕಳ್ಳಿ'ಯಾಗುತ್ತಿದ್ದಳು.

ದೇಹದಾರ್ಢ್ಯವನ್ನು ಹೆಚ್ಚಿಸುವದನ್ನು ಕಲಿಸುವದಕ್ಕಾಗಿಯೇ ಗರಡಿಮನೆಗಳು ಇರುತ್ತಿದ್ದವು. ಪೈಲ್ವಾನರಾಗಲಿಚ್ಛಿಸುವವರಿಗೂ ಅಕ್ಷರಾಭ್ಯಾಸದ ಅವಶ್ಯಕತೆ ಇದೆಯೆಂಬುದನ್ನು ಮನಗಂಡು ಅಲ್ಲಿಯೇ ಅಲ್ಪ ಸ್ವಲ್ಪ ವಿದ್ಯೆ ಕಲಿಸುವ ವ್ಯವಸ್ಥೆಯಿರುತ್ತಿತ್ತು.[೨] ಗರಡಿಮನೆಯಲ್ಲಿ ಸಾಧನೆ ಮಾಡುತ್ತಿದ್ದ ವಿದ್ಯಾರ್ಥಿಗಳು ಕಟ್ಟುನಿಟ್ಟಾಗಿ ಬ್ರಹ್ಮಚರ್ಯ ಆಚರಿಸಬೇಕಾಗಿತ್ತು. ಪೌಷ್ಠಿಕ ಆಹಾರದ ಸೇವನೆಗಾಗಿ ಸಂಸ್ಥೆಯಿಂದಾಗಲಿ ಅರಸನಿಂದಾಗಲಿ ಧನಸಹಾಯ ಸಿಗುತ್ತಿತ್ತು. ಮುಂಜಾವಿನಲ್ಲಿ ಎದ್ದು ಮೈರಕ್ತದಲ್ಲಿ ಕಾವು ಬರಲು ಒಂದು ಕ್ರೋಶ(ಹರದಾರಿ) ಓಡಬೇಕಾಗಿತ್ತು. ನಂತರ ಬೆವರಿಳಿಸಲು ದಾಂಡ್ ಮತ್ತು ಬೈಠಕ್(ಉಠಾಬಸ್) ಮಾಡಬೇಕಾಗಿತ್ತು. ಸ್ನಾಯುಗಳಲ್ಲಿ ಉಕ್ಕಿನ ಶಕ್ತಿ ಬರಲು ಭಾರವಾದ ಲೋಡುಗಳನ್ನು ಎತ್ತಿ ತಿರುವುವ ವ್ಯಾಯಾಮ ಮಾಡಬೇಕಾಗಿತ್ತು. ಅಲ್ಪ ವಿಶ್ರಾಂತಿಯ ನಂತರ, ಕುಸ್ತಿಯ ಕಣಕ್ಕೆ ಇಳಿಯಬೇಕಾಗಿತ್ತು.[೩] ಹಿರಿಯ ವಿದ್ಯಾರ್ಥಿಗಳು 'ಪೇಚು' ಹಿಡಿಯುವಾಗ ಕಿರಿಯರು ಅವರನ್ನು ಹುರಿದುಂಬಿಸುತ್ತಿದ್ದರು(75). ನಂತರ ಅವರಿಗೂ ಸಮವಯಸ್ಕರ ಜೊತೆ ಸೇರಿಸಿ ಜಗಜೆಟ್ಟಿಗಳನ್ನು ಮಾಡುವ ತರಬೇತಿ ಕೊಡಲಾಗುತ್ತಿತ್ತು(76). ಜಿಡ್ಡು ಲೇಪಿಸಿಕೊಂಡ ವಿರೋಧಿಗೆ ಉಡದ ಹಿಡಿತ ಹಾಕುವದಕ್ಕಾಗಿ ಕೆಮ್ಮಣ್ಣನ್ನು ಕೈಗೆ ಸವರಿಕೊಳ್ಳುತ್ತಿದ್ದರು. ಆಗೊಮ್ಮೆ ಈಗೊಮ್ಮೆ ವಿದ್ಯಾರ್ಥಿಗಳನ್ನು ಎರಡು ಬಣಗಳಲ್ಲಿ ವಿಂಗಡಿಸಿ, ಅವರಲ್ಲಿ ತುರುಸಿನ ಸ್ಪರ್ಧೆ ನಡೆಸಲಾಗುತ್ತಿತ್ತು(77). ದಸರಾ, ನಾಡಹಬ್ಬಗಳಲ್ಲಿ ನಾಡಿನ ವಿವಿಧ ಗರಡಿಗಳ ತಂಡಗಳೊಡನೆ ತುರುಸಿನ ಜಟ್ಟಿ ಕಾಳಗಗಳನ್ನು ಏರ್ಪಡಿಸಲಾಗುತ್ತಿತ್ತು.[೪] ವಿಜೇತರಿಗೆ ಹೂಹಾರ, ಅರಸರ ಸನ್ಮಾನ, ಮೆರವಣಿಗೆಗಳ ಗೌರವ ಸಲ್ಲುತ್ತಿತ್ತು. ಬಿರುದು, ಬಾವಲಿಗಳೊಂದಿಗೆ ಭೂಮಿಯ ಕಾಣಿಕೆ ದೊರೆಯುತ್ತಿತ್ತು. ಜಯಶಾಲಿ ತಂಡಗಳಿಗೆ ಊರೂರು ತಿರುಗಾಡಿ ಪ್ರದರ್ಶನ ಕೊಡಲು ಅವಕಾಶ ದೊರೆಯುತ್ತಿತ್ತಲ್ಲದೇ ರಾಜಧಾನಿಯ ಮಹಾನವಮಿಯ ಶಕ್ತಿ ಪ್ರದರ್ಶನದ ಆಟಗಳು ತರುಣರ ಕನಸಾಗಿತ್ತು. ನಾಡಿನ ಖ್ಯಾತ ಗರಡಿಮನೆಗಳಿಗೆ ವಿದ್ಯಾರ್ಥಿಗಳು ನಾಲ್ದೆಸೆಗಳಿಂದ ಧಾವಿಸಿ ಬರುತ್ತಿದ್ದರು.

ಗರಡಿಮನೆಗಳಲ್ಲಿ ವಿದ್ಯಾರ್ಥಿಗಳ ಅಭಿರುಚಿಗೆ ತಕ್ಕಂತೆ ವಿವಿಧ ಶಸ್ತ್ರಾಸ್ತ್ರಗಳ ತರಬೇತಿಗೆ ಏರ್ಪಾಡಿತ್ತು.[೫] ಲಾಠಿಯನ್ನು ತಿರುವುತ್ತ ವೈರಿಯ ಆಕ್ರಮಣ ಎದುರಿಸಲು ಕಲಿಸಿದಂತೆ ಅವರನ್ನು ಸದೆಬಡೆಯುವ ಹಲವಾರು ಪ್ರಹಾರಗಳ ಭೇದವನ್ನು ಕಲಿಸಲಾಗುತ್ತಿತ್ತು. ಲಾಠಿಯ ಎರಡೂ ಅಂಚಿಗೆ ಉರಿಯುವ ಪಂಜನ್ನು ಕಟ್ಟಿ ಸುದರ್ಶನ ಚಕ್ರದಂತೆ ತಿರುವುವದು, ಒಂದು ಅದ್ವಿತೀಯ ಸಾಧನೆಯಾಗಿತ್ತು. ಕಬ್ಬಿಣದ ಚೆಂಡನ್ನು ಗಾಳಿಯಲ್ಲಿ ತೂರಿ ಭುಜದಿಂದ ಹಿಡಿಯುವದು, ಒಂದು ತೋಳಿನಿಂದ ಇನ್ನೊಂದಕ್ಕೆ ಪುಟಿಸುವದರಿಂದ ವಜ್ರಕಾಯನಾಗಲು ಸಹಾಯವಾಗುತ್ತಿತ್ತು.

ಮಲ್ಲಕಂಭಕ್ಕೆ ಹೆಬ್ಬಾವಿನಂತೆ ಜೋತುಬಿದ್ದು ವ್ಯಾಯಾಮ ಮಾಡುವದು, ನೀರಿನಲ್ಲಿ ಮೀನಿನಂತೆ ಈಜಾಡುವದು, ಉಸಿರಾಟದಲ್ಲಿ ನಿಯಂತ್ರಣ ಸಾಧಿಸುವದು, ಉಕ್ಕಿನ ಸಲಾಕೆಗಳಿಗೆ ಜೋತುಬಿದ್ದು, ಗರಬಡಿದವರಂತೆ ಗರಗರ ತಿರುಗುವದು, ಒಂದು ಬಾರಿನಿಂದ ಇನ್ನೊಂದಕ್ಕೆ ಜಿಗಿಯುವದು, ನೋಡುವದೇ ಕಣ್ಣಿಗೆ ಹಬ್ಬವಾಗಿತ್ತು. ಅದರಂತೆ ವಯೋಮಾನಕ್ಕೆ ಅನುಗುಣವಾಗಿ ವಿವಿಧ ಅಳತೆಯ ಲೋಹದ ಸರಳುಗಳನ್ನು ಮಣಿಸಲು ಕಲಿಸಲಾಗುತ್ತಿತ್ತು. ಕಾಲುಮಣೆಗೆ ಆತುಕೊಂಡು, ಶರೀರದ ಭಾರವನ್ನೆಲ್ಲ ಕೈಗಳ ಮೇಲೆ ಹಾಕಿ, ಕಾಲುಗಳನ್ನು ತಲೆಯ ಮೇಲಕ್ಕೆ ಒಯ್ಯುವದು, ನಂತರ ಒಂದೇ ಕೈ ಮೇಲೆ ಶರೀರವನ್ನು ನಿಲ್ಲಿಸುವದು ಭಾರಿ ಕಸರತ್ತಿನ ಕೆಲಸವಾಗಿತ್ತು.

ದೇಹದ ಬೆಳವಣಿಗೆಗೆ ಮತ್ತು ಚಿತ್ತಸ್ವಾಸ್ಥ್ಯಕ್ಕೆ ಧನುರ್ವಿದ್ಯೆಯನ್ನು ಕಲಿಸಲಾಗುತ್ತಿತ್ತು.[೬] ಕೈ, ಕಣ್ಣುಗಳ ಕ್ರಿಯೆ, ಏಕಕಾಲಕ್ಕೆ ಹೊಂದಿಸಲು ಇದರಿಂದ ಸಾಧ್ಯವಾಗುತ್ತಿತ್ತು. ಸ್ಥಾಯಿ ವಸ್ತುವಿನತ್ತ ಗುರಿಯಿಟ್ಟು ಹೊಡೆಯುವದಕ್ಕಾಗಿ ಪಾದಗಳ ಪಾತ್ರವನ್ನು ಸರಿಯಾಗಿ ಅರಿತುಕೊಂಡು ಅವುಗಳ ಸ್ಥಾನಮಾನಗಳ ಅನುಗುಣವಾಗಿ ಹತ್ತು ಪಾದಾಸನಗಳ ತರಬೇತಿ ನೀಡಲಾಗುತ್ತಿತ್ತು. ವಿದ್ಯಾರ್ಥಿಯ ಶಕ್ತಿ ಸಾಮರ್ಥ್ಯಗಳಿಗೆ ಅನುಗುಣವಾಗಿ, ಅವರಿಗೆ ಬಿಲ್ಲುಬಾಣಗಳನ್ನು ಪೂರೈಸಲಾಗುತ್ತಿತ್ತು. ಬಿಲ್ಲನ್ನು ಬಿದುರು ಇಲ್ಲವೇ ಲೋಹದಿಂದ ಮಾಡಿದರೆ, ಅದಕ್ಕೆ ಕಟ್ಟುವ ಹುರಿ, ಮರದ ಗಟ್ಟಿಯಾದ ತೊಗಟೆಯಿಂದ ಇಲ್ಲವೇ ಪ್ರಾಣಿಗಳ ಕರಳು ಹುರಿಯಿಂದ ನಿರ್ಮಿಸಲಾಗುತ್ತಿತ್ತು. ಬಾಣಗಳನ್ನು ಬೆತ್ತದಿಂದ ತಯಾರಿಸಿ, ಒಂದು ಕಡೆಗೆ ಹಕ್ಕಿಗಳ ಗರಿಗಳನ್ನು ಜೋಡಿಸಿದರೆ, ಪ್ರಯೋಗಭಾಗಕ್ಕೆ ಧಾತುವಿನಿಂದ ಮಾಡಿದ ಚೂಪಾದ ತುದಿಯನ್ನು ಬಿಗಿಯುತ್ತಿದ್ದರು. ಬಳಕೆಗೆ ಅನುಸಾರವಾಗಿ, ಅವುಗಳ ಆಕಾರ ಮತ್ತು ಉದ್ದಳತೆಗಳು ವಿವಿಧ ಪ್ರಕಾರಗಳಲ್ಲಿ ಇರುತ್ತಿದ್ದವು. ಅಚರ ವಸ್ತುಗಳನ್ನು ಚಾಚೂ ತಪ್ಪದೇ ಭೇದಿಸುವದರಲ್ಲಿ ಪರಿಣತಿ ಸಾಧಿಸಿದಾಗ, ಕಂಬಕ್ಕೆ ಕಟ್ಟಿದ, ಸತತವಾಗಿ ಒಂದೇ ಗತಿಯಿಂದ ತಿರುಗುವ ಚೆಂಡನ್ನು ಭೇದಿಸಲು ತರಬೇತಿ ನೀಡುತ್ತಿದ್ದರು. ಇದನ್ನು ಹಿಂಬಾಲಿಸಿ ತೆರೆ ಏಳುವ ನೀರಿನಲ್ಲಿ ಪ್ರತಿಬಿಂಬ ನೋಡಿ, ಮೇಲೆ ತಿರುಗುತ್ತಿರುವ ಮತ್ಸ್ಯಕ್ಕೆ ಗುರಿ ಇಟ್ಟು ಕೆಡವಬೇಕಾಗಿತ್ತು. ಇದರ ನಂತರ ಕುದುರೆಯ ಮೇಲೆ ಸವಾರಿ ಮಾಡುತ್ತ, ನಾಗಾಲೋಟದಿಂದ ಓಡಿಸುತ್ತ ತಿರುಗುವ ಚೆಂಡನ್ನು ಭೇದಿಸಲು ತರಬೇತಿ ಕೊಡಲಾಗುತ್ತಿತ್ತು. ಬಾಣಗಳನ್ನು ಬಿಟ್ಟು ದೂರದಲ್ಲಿ, ವೃಕ್ಷ, ಗೃಹಗಳ ಆಕಾರಗಳನ್ನು ನಿರ್ಮಿಸುವದು ಕುಶಲಕಲೆಯೆಂದು ತಿಳಿಯಲಾಗುತ್ತಿತ್ತು.

ಗರಡಿಮನೆ, ವ್ಯಾಯಾಮಶಾಲೆಗಳಲ್ಲಿ ಶಿಕ್ಷಣ ಪಡೆದವರು, ಮುಂದೆ ತಮ್ಮ ಅಭಿರುಚಿಗೆ ತಕ್ಕಂತೆ, ಯಾವುದಾದರೊಂದು ಕ್ಷೇತ್ರದಲ್ಲಿ ಪರಿಣತಿ ಪಡೆಯುತ್ತಿದ್ದರು. ಮದವೇರಿಸಿದ ಗೂಳಿಯನ್ನು ಬರಿಗೈಯಿಂದ ಕಾಳಗದಲ್ಲಿ ನೆಲಕ್ಕುರುಳಿಸಿ ಸಭಿಕರಿಂದಲೂ, ಅರಸನಿಂದಲೂ ಬೆನ್ನು ತಟ್ಟಿಸಿಕೊಂಡು ಬಹುಮಾನ ಗಿಟ್ಟಿಸುವವರಿದ್ದರು. ಎತ್ತು, ಕೋಣಗಳಿಗೆ ಓಟಕ್ಕೆ ತರಬೇತಿ ಕೊಟ್ಟು ತಮ್ಮೂರಿನಲ್ಲಿ ವಿಜಯಿಗಳಾದಾಗ ನೆರೆಯ ಊರವರಿಗೂ ಈ ಸ್ಪರ್ಧೆಗೆ ಆಹ್ವಾನಿಸುವವರಿದ್ದರು. ಬೆಳೆಗಳನ್ನು ಹಾಳುಗೆಡಹುವ ಕಾಡುಹಂದಿಯನ್ನು ಎದುರು ಹಾಕಿಕೊಂಡು,

ಬರ್ಚಿಯಿಂದ ಇರಿದು ಅದನ್ನು ನರಕಕ್ಕೆ ಕಳಿಸುವವರಿದ್ದರು. ಗೋಭಕ್ಷಕನಾಗುವ ಹುಲಿರಾಯ, ಕಾಡು ಬೆಟ್ಟಗಳಲ್ಲಿ ಅಲೆಯುವಾಗ ಅದರ ಜಾಡು ಹಿಡಿದು, ತನ್ನ ಸುಳುಹು ಹತ್ತದಂತೆ ಮರವೇರಿ, ಅವಕಾಶ ಸಿಕ್ಕಾಗ ನೆಗೆದು, ಕಠಾರಿಯೊಂದರಿಂದಲೇ ಅದನ್ನು ಮಣ್ಣು ಮುಕ್ಕಿಸುವವರು ಇದ್ದರು. ಮದವೇರಿ ಎಲ್ಲರಿಗೂ ಕಳವಳುವುಂಟು ಮಾಡುವ ಆನೆಯನ್ನು ಧೈರ್ಯದಿಂದ ಎದುರಿಸಿ ನೆಲಕ್ಕುರುಳಿಸುವ ಕೆಚ್ಚೆದೆಯವರಿದ್ದರು. ಕಾದಾಟದಲ್ಲಿ ಮಡಿದ ವೀರರಿಗೆ ರಾಜನೂ, ಸಮಾಜದವರೂ ವೀರಗಲ್ಲುಗಳನ್ನು ನಿಲ್ಲಿಸಿ ಗೌರವಿಸುತ್ತಿದ್ದರು. ಇಂಥ ಸ್ಮಾರಕಗಳ ಮೇಲೆ ಚಿತ್ರಿತನಾದ ವೀರನು ಉತ್ತಮ ಶಾರೀರಿಕ ಶಿಕ್ಷಣ ಪಡೆದವನೆಂದು ಬೇರೆ ಹೇಳಬೇಕಿಲ್ಲ.

ದ್ವಂದ್ವಗಳಲ್ಲಿಯೂ ಸಾಮರ್ಥ್ಯದ ಪರೀಕ್ಷೆ ಆಗುತ್ತಿತ್ತು. ಇದಕ್ಕಾಗಿ ಬರಿಗೈಯಲ್ಲಿ ಪ್ರತಿಸ್ಪರ್ಧಿಗಳು ಬರಬಹುದು ಇಲ್ಲವೇ ಢಾಲು, ಕಠಾರಿಗಳನ್ನು ಬಳಸಬಹುದು. ಸಾರ್ವಜನಿಕ ಸ್ಥಳಗಳಲ್ಲಿ ಗಂಡಾಂತರಕಾರಿಯಾದ ಶಕ್ತಿ ಪ್ರದರ್ಶನ ಮಾಡಲಿಕ್ಕೆ ಅರಸನ ಅಥವಾ ಅಧಿಕಾರಿಗಳ ಸಮ್ಮತಿ ಪಡೆಯುವದು ಅತ್ಯವಶ್ಯವಾಗಿತ್ತು.[೬] ಅದಕ್ಕಾಗಿ ಬೇರೊಂದು ಕ್ರೀಡಾಂಗಣ ತಯಾರಿಸಿ ಹುಡಿಮಣ್ಣಿನಿಂದ ತುಂಬಿಸುತ್ತಿದ್ದರು. ಪ್ರೇಕ್ಷಕರಿಗೆ ಎತ್ತರದ ಬೆಂಚುಗಳ ಏರ್ಪಾಡು ಮಾಡಲಾಗುತ್ತಿತ್ತು. ಕುಲದೇವರನ್ನು ಆರಾಧಿಸಿ, ನಿರ್ಣಾಯಕರ ಅಪ್ಪಣೆ ಪಡೆದು, ಕಣಕ್ಕೆ ಇಳಿದು, ಹುಡಿಮಣ್ಣನ್ನು ಹಣೆಗೆ ಹಚ್ಚಿಕೊಳ್ಳುತ್ತಿದ್ದರು. ನಂತರ ಪ್ರತಿದ್ವಂದ್ವಿಗಳು ಕಿರಿಹೆಜ್ಜೆ ಹಾಕುತ್ತ ಮುಂದುವರೆಯುತ್ತಿದ್ದರು. ವೈಯಕ್ತಿಕ ವೈರ, ಕ್ರೌರ್ಯಕ್ಕೆ ಎಡೆ ಮಾಡಿಕೊಡದಂತೆ ನೋಡಿಕೊಳ್ಳುವದು ನಿರ್ಣಾಯಕರ ಹೊಣೆಯಾಗಿತ್ತು. ಯಾವನೊಬ್ಬ ಕಠಾರಿ ಇಲ್ಲವೇ ಢಾಲು ಕಳೆದುಕೊಂಡರೆ, ಇಲ್ಲವೆ ಬೆನ್ನಿಗೆ ಮಣ್ಣು ಮೆತ್ತಿಕೊಳ್ಳುವಂತೆ ಬಿದ್ದರೆ, ಇದಕ್ಕೆ ಕಾರಣನಾದವನು ವಿಜಯಶಾಲಿ ಎಂದು ನಿರ್ಣಯಿಸಲಾಗುತ್ತಿತ್ತು. ಅಪರೂಪಕ್ಕೆ ಅರಸನು ಸೇಡಿನಲ್ಲಿ ಉರಿಯುತ್ತಿದ್ದ ಪ್ರತಿಸ್ಪರ್ಧಿಗಳಿಗೆ ದ್ವಂದ್ವದಲ್ಲಿ ತೊಡಗಲು ಅನುಮತಿ ಕೊಡುತ್ತಿದ್ದ. ಇದು ಒಬ್ಬರ ದುರ್ಮರಣದಲ್ಲಿ ಕೊನೆಗೊಳ್ಳುವದು ಸಾಮಾನ್ಯವಾಗಿತ್ತು. ಅರಸನು ಮೃತನ ಕುಟುಂಬದವರಿಗೆ ಸಹಾಯ ನೀಡುತ್ತಿದ್ದ.

ಓಟಗಾರರು ಆನೆಯೊಂದಿಗೆ ಓಟದ ಸ್ಪರ್ಧೆಗೆ ಇಳಿಯುವ ಕನಸು ಕಾಣುತ್ತಿದ್ದರು. ಇದು ಅತ್ಯಂತ ಅಪಾಯಕಾರಿ ಆಟವಾದ್ದರಿಂದ ಅರಸನ ಅಪ್ಪಣೆ ಪಡೆಯುವದು ದುಷ್ಕರವಾಗಿತ್ತು. ಅಧಿಕಾರಿಗಳು ಪ್ರತಿಸ್ಪರ್ಧಿಯ ಶಕ್ತಿ-ಸಾಮರ್ಥ್ಯಗಳ ಬಗ್ಗೆ ಮೆಚ್ಚಿಗೆ ವ್ಯಕ್ತಪಡಿಸಿದಾಗ ಓಟದ ಏರ್ಪಾಡು ಮಾಡಲಾಗುತ್ತಿತ್ತು. ಊರೆಲ್ಲ ಡಂಗುರ ಸಾರಿ, ಸ್ಪರ್ಧೆಯ ದಿನ, ಮುದುಕರು, ಹುಡುಗರು, ರೋಗಿಗಳು, ಗರ್ಭಿಣಿಯರು ಮನೆಯಿಂದ ಹೊರಗೆ ಬೀಳದಿರಲು ಎಚ್ಚರಿಸಲಾಗುತ್ತಿತ್ತು. ಆನೆಗೆ ಓಟದಲ್ಲಿ ಆಸಕ್ತಿ ಹುಟ್ಟಿಸಲು ಬಗೆಬಗೆಯ ಔಷಧಿಗಳನ್ನು ಕುಡಿಸಲಾಗುತ್ತಿತ್ತು. ಪ್ರೇಕ್ಷಕರಿಗಾಗಿ ಗಟ್ಟಿಮುಟ್ಟಾದ ಮಚಾನಗಳು ಸಿದ್ಧವಾಗುತ್ತಿದ್ದವು. ಎರಡು ದ್ವಾರಗಳಿರುವ ವೈಹಾಳಿ(ಕ್ರೀಡಾರಂಗ) ಆರುನೂರು ಅಡಿ ಉದ್ದ, ಮೂರನೂರ ಅರವತ್ತು ಅಡಿ ಅಗಲವಾಗಿರುತ್ತಿತ್ತು. ರಂಗವನ್ನು ದ್ವಿಪ(ಗಜ) ಭೂಮಿ, ನೃಪಭೂಮಿ ಮತ್ತು ಪರಿಕಾರ ಭೂಮಿಯೆಂದು ವಿಭಾಗಿಸಲಾಗುತ್ತಿತ್ತು. ಈ ಮೂರೂ ವಿಭಾಗಗಳಲ್ಲಿ ಓಟಗಾರನು ಮುಂದೆ

ಇದ್ದರೆ ಅವನು ವಿಜಯಿಯೆಂದು ಸಾರಲಾಗುತ್ತಿತ್ತು. ಅವನು ಅತ್ತಿತ್ತ ಓಡಿದರೆ ಇಲ್ಲವೇ ಆನೆ ಅವನನ್ನು ಹಿಂದೆ ಹಾಕಿದರೆ, ಅವನು ಸೋತಂತೆ.[೮] ಅಪರೂಪಕ್ಕೆ ಅಪರಾಧಿಯೆಂದು ನಿರ್ಧಾರವಾದವನು, ತಾನು ನಿರಪರಾಧಿ ಎಂದು ಸಾರ್ವಜನಿಕವಾಗಿ ಸಿದ್ಧಮಾಡಲು ಆನೆಯೊಡನೆ ಕಾದುವೆನೆಂದು ಅರಸನಿಗೆ ಮನವಿ ಮಾಡಿಕೊಳ್ಳುತ್ತಿದ್ದ. ಇಂಥ ಕಾದಾಟದಲ್ಲಿ ಆನೆ, ಆಪಾದಿತನನ್ನು ತುಳಿದು, ಕೊಂದು ಬಿಡುವದು ವಾಡಿಕೆಯಾದರೂ, ಶಾರೀರಿಕ ಶಿಕ್ಷಣದಿಂದ ಶಿವಶಕ್ತಿ ಪಡೆದವನು ಮದವೇರಿದ ಆನೆಯನ್ನು ಸೋಲಿಸಿದ ಪವಾಡಗಳು ನಡೆದಿವೆ. ಅಂಥ ಪ್ರಸಂಗಗಳಲ್ಲಿ ಆನೆಯನ್ನು ನಿಯಂತ್ರಣದಲ್ಲಿ ತರಲು ಕುದುರೆ ಸವಾರರು ರಂಗವನ್ನು ಸೇರಬೇಕಾಗಿತ್ತು.

ಅಶ್ವಾರೋಹಿಗಳು ಶರೀರದಾರ್ಢ್ಯ ಬೆಳೆಸಿಕೊಳ್ಳುವದರ ಜೊತೆಗೆ ವಿನೋದವನ್ನು ಪಡೆಯುವದಕ್ಕಾಗಿ ಇಬ್ಬಗೆಯ ಚೆಂಡಿನಾಟ ಆಡುತ್ತಿದ್ದರು. ಮೊದಲನೆಯದು, ಇಂದಿನ ಪೋಲೋ ಆಟದ ಮುತ್ತಾತನ ರೂಪ. ನಾನೂರು ಅಡಿಯ ಚಚೌಕಾಕಾರದ ಮೈದಾನಕ್ಕೆ ಎರಡು ಪ್ರವೇಶದ್ವಾರಗಳನ್ನು ನಿಲ್ಲಿಸಿ ಬೇಲಿ ಹಾಕುತ್ತಿದ್ದರು. ಪ್ರೇಕ್ಷಕರಿಗೆ ಕೊಂಚದೂರ ಪ್ರತ್ಯೇಕ ಸ್ಥಳ ನಿರ್ಮಿಸುತ್ತಿದ್ದರು. 'ಪರಿಭದ್ರಕ' ಕಟ್ಟಿಗೆಯಿಂದ ತಯಾರಿಸಿ ಚೆಂಡು ಮತ್ತು ಉದ್ದ ಬ್ಯಾಟು(ಗೆದ್ದಿಕಾ)ಗಳು ಬಹುದೂರದಿಂದ ಕಾಣುವಂತೆ ಕೆಂಪು ಚರ್ಮದ ಹೊದಿಕೆ ಪಡೆದಿರುತ್ತಿದ್ದವು. ಆಟಗಾರರು ಕುದುರೆಗಳ ವೇಗದ ಓಟಕ್ಕೆ ಗಾಳಿಯಿಂದ ಅಡೆ-ತಡೆ ಆಗದಂತೆ, ಮೈಗಂಟುವ ಕೋಟು ಮತ್ತು ಸೊಂಟಪಟ್ಟಿಗಳನ್ನು ಧರಿಸುತ್ತಿದ್ದರು. ಎರಡೂ ಪಕ್ಷಗಳಲ್ಲಿ ಎಂಟೆಂಟು ಆಟಗಾರರಿದ್ದು, ಕೈಯಲ್ಲಿ ಬ್ಯಾಟನ್ನು ಹಿಡಿದು, ಕುದುರೆಯನ್ನು ನಾಗಾಲೋಟದಿಂದ ಓಡಿಸುತ್ತ ನೆಲದ ಮೇಲಿದ್ದ ಚೆಂಡನ್ನು ವಿರೋಧಿಗಳ ಗೋಲಿನತ್ತ ಧಾವಿಸುವಂತೆ ಮಾಡಿದಾಗ, ಆ ತಂಡದವರು ಚೆಂಡನ್ನು ತಮ್ಮ ವಶಕ್ಕೆ ಪಡೆದು, ಗೋಲು ಹೊಡೆಯಲು ಯತ್ನಿಸುತ್ತಿದ್ದರು. ಇದರಿಂದ ಚೆಂಡು, ಎರಡೂ ಗೋಲು ಕಂಬಗಳ ನಡುವೆ ಓಡಾಡುವಂತೆ ಆಗುತ್ತಿತ್ತು. ನಿರ್ದಿಷ್ಟ ಅವಧಿಯಲ್ಲಿ ಹೆಚ್ಚಿನ ಗೋಲು ಹೊಡೆದವರು ವಿಜಯಿಗಳೆಂದು ಘೋಷಿಸಲಾಗುತ್ತಿತ್ತು.[೯]

ದ್ವಿತೀಯ ಪ್ರಕಾರದ ಚೆಂಡಿನಾಟ, ಇಂದಿನ ಗಾಲ್ಫ್ ಆಟದ ಪೂರ್ವಜ. ಇದರ ಆಟದ ಬಯಲು ವರ್ತುಲಾಕಾರದ್ದು. ಆಟಗಾರರು ಕುದುರೆ ಸವಾರಿ ಮಾಡುತ್ತ ಉದ್ದ ಬ್ಯಾಟಿನಿಂದ (ಕೋಲು) ಚೆಂಡನ್ನು(ಗಿರಿಗೆ) ಬಲವಾಗಿ ಹೊಡೆದು, ಮುಂದಿದ್ದ ಕುಳಿಗೆ ಸೇರಿಸಲು ಯತ್ನಿಸುತ್ತಿದ್ದರು. ಇದಕ್ಕಾಗಿ ಅವರು ವಿವಿಧ ಹೊಡೆತ(ಚಾರಣ)ಗಳನ್ನು ಬಳಸುತ್ತಿದ್ದರು. ವಿವಿಧ ದಿಕ್ಕುಗಳಲ್ಲಿ ಬಳಸುವ 'ಚಾರಣ'ಗಳಿಗೆ ಸುಕರ, ದುಷ್ಕರ, ವಿಷಮ ಮತ್ತು ವಿಷಮ-ದುಷ್ಕರಗಳೆಂಬ ಹೆಸರುಗಳಿದ್ದವು. ಇವುಗಳಲ್ಲಿ ಸಿದ್ಧಹಸ್ತನಿಗೆ 'ಎಳಪ ಬೆಡಂಗ' ಎಂದು ಕರೆಯಲಾಗುತ್ತಿತ್ತು. ಒಮ್ಮೆ ಆಡಲಾರಂಭಿಸಿದಾಗ, ಚೆಂಡನ್ನು ಎಷ್ಟು ಸುತ್ತು ಮೈದಾನಿನಲ್ಲಿ ತಿರುವುತ್ತಾರೊ, ಅದರ ಆಧಾರದ ಮೇಲೆ ವಿಜಯವನ್ನು ನಿರ್ಧರಿಸಲಾಗುತ್ತಿತ್ತು. ರಾಷ್ಟ್ರಕೂಟ ಇಂದ್ರರಾಜನು ಒಂದೇ ಆಟದಲ್ಲಿ ಎಂಟು ಹತ್ತು ತಿರುವು ಹಾಕಿಸುತ್ತಿದ್ದನಂತೆ.[೧೦]

ಕಾಡುಪ್ರಾಣಿಗಳ ಸಂತತಿ ಮಿತಿಮೀರಿ ಬೆಳೆದು ಪ್ರಜೆಗಳಿಗೆ ಅವುಗಳ ಕಾಟ

ಸಹಿಸಲಾಗದಿದ್ದಾಗ ಅರಸನಿಗೆ ದೂರಿಕೊಳ್ಳುತ್ತಿದ್ದರು. ಕ್ರೂರಪ್ರಾಣಿಗಳನ್ನು ನಿಯಂತ್ರಿಸುವ ಕೆಲಸ ಸುಲಭ ಸಾಧ್ಯವಲ್ಲದ್ದರಿಂದ ದೊರೆಯು ಧನುರ್ವಿದ್ಯೆಯಲ್ಲಿ ಪರಿಣತರು ಎನಿಸಿಕೊಂಡವರನ್ನು ಆಮಂತ್ರಿಸಿ ಬೇಟೆಯ ತಂಡವನ್ನು ಕಟ್ಟಲು ವಿನಂತಿಸಿಕೊಳ್ಳುತ್ತಿದ್ದನು. ಅವರು ಬಿಲ್ಲು ಬಾಣ, ಢಾಲು, ಕಠಾರಿ, ಬಾಕು, ಬರ್ಚಿ, ಬಲೆಗಳನ್ನು, ಬೇಟೆನಾಯಿಗಳನ್ನು ಹೊಂದಿಸಿ, ಅರಸರ ಪರಿವಾರದೊಂದಿಗೆ ಹೊರಟುಬಿಡುತ್ತಿದ್ದರು. ನೀರಿನ ಪೂರೈಕೆಯಿದ್ದಲ್ಲಿ ಡೇರೆಗಳನ್ನು ನಿಲ್ಲಿಸಿ, ಕಾಡುಪ್ರಾಣಿಗಳಿಂದ ರಕ್ಷಿಸಿಕೊಳ್ಳಲು ಕೊರಕಲುಗಳನ್ನು ಅಗೆಯುತ್ತಿದ್ದರು. ನಂತರ ಕಾಡುಗಳಲ್ಲಿ ಭಯಭೀತಿಯಿಲ್ಲದೇ ಅಲೆದು ಆನೆಯ ಲದ್ದಿ, ಹುಲಿಯ ಹೆಜ್ಜೆ, ಕಾಡುಹಂದಿ, ಬೇರುಗಳಿಗಾಗಿ ಅಗೆದ ನೆಲದ ಗುರುತು ಹಿಡಿದು, ಅವುಗಳ ಚಲನವಲನಗಳನ್ನು ನಿರೀಕ್ಷಿಸಲು ಅಲ್ಲಲ್ಲಿ ಮರವೇರಿ ರಾತ್ರೆ ಕಳೆಯುತ್ತಿದ್ದರು. ಕಾಡಾನೆಗಳು ನೀರಿಗೆ ಹೋಗುವ ದಾರಿಗೆ ಅಡ್ಡವಾಗಿ, ಆಳವಾದ ಗುಂಡಿ ಅಗೆದು, ಕಾಣದಂತೆ ಹಗುರಾಗಿ ಮುಚ್ಚಿ, ಅವು ಸಿಕ್ಕಿ ಹಾಕಿಕೊಂಡಾಗ, ಬಂಧಿಸಿ, ಪಳಗಿಸುವ ಸಲುವಾಗಿ ನಾಡಾನೆಗಳ ಸಹಾಯ ಪಡೆಯುತ್ತಿದ್ದರು. ಕಾಡುಕೋಣಗಳ ಹಿಂಡನ್ನು ಮೂಗಾಳಿಯಿಂದಲೇ ಗುರುತಿಸಿ ನಾಯಿಗಳು ಬೊಗಳಲಾರಂಭಿಸಿದಾಗ, ಧನುರ್ವಿದ್ಯಾ ಪರಿಣತರು ಅತ್ತ ಧಾವಿಸಿ, ಅವುಗಳ ತಲೆಗೆ ಗುರಿಯಿಟ್ಟು ಕೊಲ್ಲುತ್ತಿದ್ದರು. ಹುಲಿಗಾಗಿ ಬೇಟೆಯ ಪ್ರಾಣಿಯಿಟ್ಟು ಅದನ್ನು ಕೊಂದು ತಿಂದು ಮರುದಿನ ಉಳಿದ ಭೋಜನಕ್ಕಾಗಿ ಮತ್ತೆ ಬಂದಾಗ ಮರದ ಆಶ್ರಯದಿಂದ ಅದನ್ನು ಮುಗಿಸುತ್ತಿದ್ದರು. ಕಾಡುಕೋಣಗಳು ಮೈಯಲ್ಲಿ ನಟ್ಟ ಬಾಣಗಳನ್ನು ಲೆಕ್ಕಿಸದೇ ಕೆಲವೊಮ್ಮೆ ಮೇಲೇರಿ ಬಂದಾಗ ಬರ್ಚಿಯಿಂದ ಇರಿದು ಕೊಲ್ಲುತ್ತಿದ್ದರು.[೧೧] ಒಂದೆರಡು ವಾರದ ಪ್ರಾಣಿ ಸಂಹಾರದಿಂದ ಅವುಗಳ ಕಾಟ ಕಡಿಮೆಯಾಗಿದೆ ಎನಿಸಿದಾಗ ತಂಡವು ಮರುಪ್ರಯಾಣ ಬೆಳೆಸುತ್ತಿತ್ತು. ಮೃತ ಪ್ರಾಣಿಗಳ ಕೋಡು, ಹಲ್ಲು, ಚರ್ಮಗಳನ್ನು ಹೊತ್ತೊಯ್ಯುವ ಜವಾಬ್ದಾರಿ ಈ ಬೇಟೆಗಾರರ ಕೊರಳಿಗೇ ಬೀಳುತ್ತಿತ್ತು. ಆದರೆ ಅವರ ಶೌರ್ಯ ಸಾಹಸದ ಕಥೆಗಳು ಎಲ್ಲೆಲ್ಲಿಯೂ ಹಬ್ಬಿ, ಅದೇ ಅವರಿಗೆ ಪಾರಿತೋಷಕ ವಾಗುತ್ತಿತ್ತು.

ಅಂಗಸೌಷ್ಟವ ಸಾಧಿಸುವದರಲ್ಲಿ ಹೆಂಗಳೆಯರೂ ಹಿಂದೆ ಬಿದ್ದಿಲ್ಲ. ಅರಸರ ಜೊತೆಗೆ ಅವರೂ ಬೇಟೆಗೆ ಹೊರಡುತ್ತಿದ್ದರು.[೧೨] ಧನುರ್ವಿದ್ಯೆಯಲ್ಲಿಯೂ ಅವರದು ಎತ್ತಿದ ಕೈ. ಅನೇಕ ಶಿಲ್ಪಗಳಲ್ಲಿ ಧನುರ್ಧಾರಿ ಮಹಿಳೆಯರನ್ನು ಕಾಣಬಹುದು. ಅಂಗಾಂಗಗಳ ಅಂದವನ್ನು ಕಾಯ್ದುಕೊಳ್ಳಲು ರಭಸದ ಕೋಲಾಟ, ಒಳ್ಳೇ ಸಾಧನವೆಂದು ಅವರು ಮನಗಂಡಿರಬೇಕು! ಅಂತೆಯೇ ಕೋಲು ಹಾಕುತ್ತ, ಮೈಮಣಿಸಿ, ಕಾಲು, ಮುಡಿಗೆ ತಾಗಿಸುವ(78) ಕಸರತ್ತುಗಳನ್ನು ಮಾಡುತ್ತಿದ್ದರು. ಈ ಶಾರೀರಿಕ ಚಟುವಟಿಕೆಯನ್ನು ಹತ್ತಾರು ಮಹಿಳೆಯರು ಇದ್ದಾಗಲೂ ಮಾಡಬಹುದಿತ್ತು. ಇಬ್ಬರೇ ಹುಡುಗಿಯರಿದ್ದರೂ, ಕೋಲುಹಾಕಿ ಹಾಡಬಹುದಿತ್ತು(79). ಉದ್ದವಾದ ಕೋಲು ಹಿಡಿದು ಕೋಲುವರಸೆ ಆಡುತ್ತಿದ್ದರು(80). "ಬಂದಿಕೋಲನು ಕೈಯೊಳಾಂತು ಚಂದಚಂದದ ಸಾಧನೆಯಾಡುವ ಪಟುಗಳು" ಅಲ್ಲಲ್ಲಿ ಕಾಣಿಸುತ್ತಿದ್ದರು.[೧೩]

ಶೌರ್ಯ, ಸಾಹಸಗಳಿಗೆ ಹೆಸರಾದ ವಿಜಯನಗರದ ಅರಸು ಕೃಷ್ಣದೇವರಾಯನು,

ತಾನು ಚಿಕ್ಕಂದಿನಲ್ಲಿಯೇ ಮೈಗೂಡಿಸಿಕೊಂಡಿದ್ದ ಅಂಗ ಸಾಧನೆಯನ್ನು ಮುಂದೆ ತನ್ನ ವಿಸ್ತಾರವಾದ ರಾಜ್ಯಾಡಳಿತದ ಬಿಡುವಿಲ್ಲದ ಸಮಯದಲ್ಲೂ ಮುಂದರಿಸಿಕೊಂಡು ಬಂದದ್ದು, ಪೋರ್ಚುಗೀಸ ಪ್ರವಾಸಿ, ಪ್ಯಾಸ್‌ನಿಗೆ ಪರಮಾಶ್ಚರ್ಯವನ್ನುಂಟು ಮಾಡಿತ್ತು. ಅವನು ಸುಮಾರು ೧೫೨೦-೨೨ರಲ್ಲಿ ಬರೆದಿಟ್ಟ ದಿನಚರಿಯಲ್ಲಿ ಅರಸನ ದೈನಂದಿನ ವ್ಯಾಯಾಮದ ವರ್ಣನೆ, ಓದುವವರಿಗೆ ನಿಜವಿದ್ದಿರಬಹುದೇ ಎನಿಸುವಷ್ಟು ಶ್ರಮದಾಯಕವಾಗಿದೆ. ಇನ್ನೂ ಕತ್ತಲೆಯಿದ್ದಾಲೇ ಎದ್ದು ಅಂಗಾಂಗಗಳಿಗೆಲ್ಲ ಔಡಲೆಣ್ಣೆಯನ್ನು ತಿಕ್ಕಿಸಿಕೊಳ್ಳುತ್ತಿದ್ದ. ಬಳಿಕ ಬೆವರು ಬರುವತನಕ ಮಲ್ಲಯುದ್ಧದಲ್ಲಿ ತೊಡಗುತ್ತಿದ್ದ. ಅನಂತರ ಒಂಟಿ ಮತ್ತು ಜೋಡಿ ಕತ್ತಿ ವರಸೆ, ಕಠಾರಿ ತಿರುವುವ ತಾಲೀಮು ನಡೆಯುತ್ತಿತ್ತು. ಇದಾದ ನಂತರ ಅರಬ್ಬೀ ಕುದುರೆ ಹತ್ತಿ ವೇಗವಾಗಿ ಮೂರು ಹರದಾರಿ ಓಡಿಸಿ ಹಿಂದಿರುಗುತ್ತಿದ್ದ. ಲೇಪಿಸಿಕೊಂಡ ಎಣ್ಣೆಯೆಲ್ಲ ಬೆವರಾಗಿ ಹರಿಯುವತನಕ ಅವನ ಅಂಗಸಾಧನೆ ಮುಂದುವರಿಯುತ್ತಿತ್ತು.[೧೪] ಹಾಗೆ ರೂಪಗೊಂಡ ಅವನ ಮೈಮಾಟ, ತಿರುಪತಿಯಲ್ಲಿದ್ದ ಕಂಚಿನ ವಿಗ್ರಹದಿಂದ ತಿಳಿಯುವಂತಿದೆ.

## ಸಂದರ್ಭ ಸೂಚಿ


೧. ಕುಮಾರವ್ಯಾಸ ಭಾರತ: ಅಧ್ಯಾಯ ೭ ಪದ್ಯ ೧, ೨, ಪು ೧೫.
ಎನ್ಕೆ (ಎನ್.ಕೆ. ಕುಲಕರ್ಣಿ): 'ಕುಮಾರವ್ಯಾಸ ಮತ್ತು ಕೃಷ್ಣಕಥೆ', ಬೆಂಗಳೂರು, ೧೯೬೯, ಪು ೨೫-೨೬.

೨. ಸಾಲೆತೊರ್ ಬಿ.ಎ. ಏನ್ಶಂಟ್ ಕರ್ನಾಟಕ: 'ಹಿಸ್ಟರಿ ಆಫ್ ತುಳುವ', ಪು ೫೩೦ ಮತ್ತು ಜ್ಞಾ.ಚ ಸಂಧಿ ೩, ಪದ್ಯ ೧೭೬, ಪು ೩೭.

೩. ಮಾನಸೋಲ್ಲಾಸ II, ಪದ್ಯ ೮೮೦-೯೫೮, ಪು ೨೨೯-೨೩೬.

೪. ಸಿವೆಲ್, ಪು ೨೬೧.

೫. ಮೋಹನ ತರಂಗಿಣಿ:(ಅನಿರುದ್ಧನ ವಿದ್ಯಾಭ್ಯಾಸ), ಸಂಧಿ ೧೭, ಪದ್ಯ ೭೮-೮೩, ಪು ೨೩೩-೩೮.

೬. ಅಗ್ನಿಪುರಾಣ ಅಧ್ಯಾಯ CCL ಪು ೮೯೮ ಮತ್ತು ಮಾನಸೋಲ್ಲಾಸ II, ಪು ೧೬೮, ಪದ್ಯ ೧೫೯.

೭. ಅದೇ: ಅಂಕಕ್ಕೆ ಅನುಮತಿ, ಪು ೨೨೫-೨೬, ಪದ್ಯ ೮೩೨-೪೦.

೮. ಅದೇ: ಪು ೨೦೩, ಪದ್ಯ ೫೫೬-೫೭.

೯. ಅದೇ: 'ವಾಜಿ ವಾಹ್ಯಾಲೀ ವಿನೋದ', ಪು ೨೬೧, ಪದ್ಯ ೨೬೧ff.

೧೦. ಎ.ಕ. II, ಶ್ರವಣಬೆಳ್ಗೊಳ ೧೩೩ ವಿವರಗಳಿಗೆ ನೋಡಿ: ಜಿ.ಎಸ್. ದೀಕ್ಷಿತ್- 'ಬಾಲ್ ಗೇಮ್ಸ್ ಆನ್ ಹಾರ್ಸ್ ಬ್ಯಾಕ್ ಇನ್ ಮಿಡೀವಲ್ ಇಂಡಿಯ', ಕರ್ನಾಟಕ ಭಾರತಿ ಮಾನವಿಕ ಸಂಚಿಕೆ, ೧೯೬೩(ಇಂಗ್ಲಿಷ್), ಪು ೪೦ff ರಿಂದ.

೧೧. ಮಾನಸೋಲ್ಲಾಸ II, ಪು ೨೭೬ ಕೊನೆಯ ಅಧ್ಯಾಯ; ಬಿಲ್ಹಣನ ವಿಕ್ರಮಾಂಕ ದೇವಚರಿತದ ೧೬ನೇ ಅಧ್ಯಾಯವೂ ಮೃಗಯಾವಿಹಾರಕ್ಕೆ ಮೀಸಲಾಗಿದೆ.

೧೨. ಮಾನಸೋಲ್ಲಾಸ II, ಪದ್ಯ ೧೪೬೬, ಪು ೨೭೮.

೧೩. ಜ್ಞಾ.ಚ. ೨, ಪದ್ಯ ೫೨, ಪು ೧೭.

೧೪. ಸಿವೆಲ್, ಪು ೨೬೧.

# ೧೧. ಪ್ರೌಢ ಶಿಕ್ಷಣ

'ಧರ್ಮವೇ ಶಿಕ್ಷಣ, ಶಿಕ್ಷಣವೇ ಧರ್ಮ' ಎಂದು ನಂಬಿದ ಯುಗದ ಕನ್ನಡಿಗರು ಜೀವನದುದ್ದಕ್ಕೂ ಅರಿವಿಗೆ ಮುಕ್ತದ್ವಾರ ತೆರೆದಿದ್ದರು. ಅಂತೆಯೇ ಅವರ ಕಲಿಯುವಿಕೆಗೆ ಕೊನೆಯೆಂಬುದಿರಲಿಲ್ಲ. ಧರ್ಮವನ್ನೇ ಬಾಳಿನ ತಳಹದಿ ಮಾಡಿಕೊಂಡಿದ್ದರಿಂದ ಧನಲೋಭ, ಐಷಾರಾಮಕ್ಕೆ ಹೆಚ್ಚಿನ ಪ್ರಾಶಸ್ತ್ಯ ಇದ್ದಿರಲಿಲ್ಲ. ಹಿಂದಿನ, ಇಂದಿನ ಜೀವನದ ಪಾಪ-ಪುಣ್ಯಗಳಿಗಾಗಿ ತಾವು ಇದಿಷ್ಟಕ್ಕೆ ಬಾಧ್ಯಸ್ಥರು, ಎಂದು ದೃಢವಾಗಿ ನಂಬಿ ತೃಪ್ತಿಯ ಬಾಳು ಬದುಕಲು ಸದಾಕಾಲ ಯತ್ನಿಸಿದರು. ಈ ಧೋರಣೆಯಿಂದಾಗಿ ಶಿಕ್ಷಣ, ಸಾಹಿತ್ಯ, ಕಲೆ, ಧರ್ಮಗಳಲ್ಲಿ ಅಚ್ಚರಿ ಉಂಟುಮಾಡುವಷ್ಟು ಪ್ರಗತಿ ಸಾಧಿಸಿದರು. ಅವರು ನಮಗಾಗಿ ಬಿಟ್ಟುಹೋದ ಅಪಾರ ಧರ್ಮ ನಿಧಿಯನ್ನು ಹಿಗ್ಗಿಸುವ ಬದಲಾಗಿ ಕುಗ್ಗಿಸುತ್ತಿದ್ದೇವೆ. ಇಂದು ನಾವು ಧಾರ್ಮಿಕ ನೆಲೆಗಟ್ಟಿನ ಜೀವನ ತೊರೆದರೂ ವೈಜ್ಞಾನಿಕವಾಗಿಯೂ ವಿಚಾರ ಮಾಡುತ್ತಿಲ್ಲ. ಇತ್ತ ಆಸ್ತೀಕರೂ ಆಗದೇ ಅತ್ತ ನಾಸ್ತಿಕರೂ ಆಗದೇ ತ್ರಿಶಂಕು ಸ್ವರ್ಗದಲ್ಲಿ ಇದ್ದೇವೆ.

ಕನ್ನಡ ನಾಡಿನ ಅರಸರು ಕಟ್ಟಿಸಿ ನಮಗಾಗಿ ಬಿಟ್ಟು ಹೋದ ದೇವಾಲಯಗಳೆಲ್ಲ ಸಚಿತ್ರ ವಿದ್ಯಾಕೇಂದ್ರಗಳು. ಸಕಲ ಅಲಂಕಾರ-ಆಭರಣಗಳನ್ನು ಧರಿಸಿ, ಚಾಮರ ಬೀಸುತ್ತ ಮಹಾದ್ವಾರದ ಎಡಬಲದಲ್ಲಿ ಮಾಟವಾದ ಅಂಗಾಂಗಗಳಿಂದ ಬಳುಕುತ್ತ ನಿಂತ ಕೋಮಲೆಯರು ಒಳ್ಳೆ ಅಭಿರುಚಿಯ ದ್ಯೋತಕವಾಗಿದ್ದಾರೆ. ಶಿಲೆಯಲ್ಲಿ ಕೊನರಿಸಿದ ರಾಮಾಯಣ, ಮಹಾಭಾರತ, ಶಿವಲೀಲಾಮೃತ, ಭಾಗವತಗಳು ಧಾರ್ಮಿಕ ಚಿಂತನೆಗೆ ನೆರವು ಮಾಡುವಂಥವು. ಎಲ್ಲ ಕಪಿಚೇಷ್ಟೆಗಳಲ್ಲಿ ತೊಡಗಿದ ಕುಬ್ಜರು ಜೀವನದಲ್ಲಿ ಹಾಸ್ಯ ಪ್ರವೃತ್ತಿಗೆ ದಾರಿದೀಪ. ನೀತಿ ಕಥೆಗಳು, ಸಾಮಾಜಿಕ ಜೀವನ ರೂಪಿಸುವ ಉಬ್ಬು ಚಿತ್ರಗಳು ಶತಮಾನಗಳಲ್ಲಿ ವೇಷಭೂಷಣಗಳ ಬದಲಾವಣೆಯನ್ನು ವಿವರಿಸುತ್ತವೆ. ಸಂಗೀತ ಸಭೆಯ ಸ್ಥಾನವೂ ಆಗಿದ್ದ ಪೌಳಿಯ ಕಂಭಗಳ ಶಿಲ್ಪಗಳು ಈಗ ಕಣ್ಮರೆಯಾದ ವಾದ್ಯಗಳನ್ನು ಕಣ್ಣೆದುರು ತಂದು ನಿಲ್ಲಿಸುತ್ತವೆ. ಮುಚ್ಚಿಗೆಯಲ್ಲಿದ್ದ ಭಿತ್ತಿಚಿತ್ರಗಳನ್ನು ನೋಡುತ್ತಿದ್ದಂತೆ ಕಲಾವರ್ಗದಲ್ಲಿ ಭಾಗವಹಿಸಿದ ಅನುಭವವಾಗುತ್ತದೆ. ಅಲ್ಲೊಂದು, ಇಲ್ಲೊಂದು ಕಂಡೂ ಕಾಣದಂತೆ ಕೆತ್ತಿದ ಶೃಂಗಾರ ಚಿತ್ರಗಳು, ಸಚಿತ್ರ ಕೋಕಶಾಸ್ತ್ರದ ಇಣುಕುನೋಟ ಒದಗಿಸುತ್ತವೆ. ಪೌಳಿಯಲ್ಲಿ ನಡೆಯುವ ಭಜನೆ, ಭಕ್ತಿಭಾವ ಮೂಡಿಸಿದರೆ, ಕಥಾಕಲಾಕ್ಷೇಪ, ತತ್ವಬೋಧನೆ ಮಾಡುತ್ತದೆ. ಸಾಲಂಕೃತ ಆರಾಧ್ಯದೇವತೆ, ದೀಪದ ಬೆಳಕಿನಲ್ಲಿ ಪ್ರಜ್ವಲಿಸಿ ಸಾಕ್ಷಾತ್ ನಿಂತ ಭಾಸವಾಗಿ ಮೈ ಪುಲಕಗೊಳ್ಳುತ್ತದೆ. ಒಂದೇ

ಸ್ಥಳದಲ್ಲಿ ಇಂಥ ಹಲವಾರು ಅನುಭವ ನೀಡುವ, ಶಿಕ್ಷಣ ಕೊಡುವ ದೇವಾಲಯಗಳಂಥ ಪ್ರಾರ್ಥನಾ ಸ್ಥಳಗಳು ಇತರ ಧರ್ಮಗಳಲ್ಲಿ ಇರುವದು ಕಡಿಮೆ.

ಮಕ್ಕಳಿಗೆ ದೇವಾಲಯಗಳು ಅತ್ಯಂತ ಆಕರ್ಷಕವಾಗಿದ್ದವು. ವಿಶ್ರಮಿಸುತ್ತಿದ್ದ ದೇವರು ಬೆಚ್ಚಿ ಬೀಳುವಂತೆ ಗಂಟೆ, ಜಾಗಟೆಗಳನ್ನು ಬಾರಿಸುವದು, ಕಲ್ಲುಕಂಬಗಳಿಂದ ಸಪ್ತಸ್ವರಗಳನ್ನು ಹೊರಡಿಸುವದು, ಅವರಿಗೆ ವಿಸ್ಮಯಕೊಡುವಂತಹದು. ಜಗಲಿಯಿಂದ ಎತ್ತರ ಜಗಿತ. ಕಂಬಗಳಿಗೆ ಆತುಕೊಂಡು ಮುಟ್ಟಾಟ ಆಡುವದು, ಕಣ್ಣುಮುಚ್ಚಾಲೆ ಆಟಗಳಿಗೆ ಕಂಬಗಳ ದೇವಾಲಯಕ್ಕಿಂತ ಪ್ರಶಸ್ಥ ಸ್ಥಳ ಬೇರಾವದು ಇದ್ದೀತು? ಸಮವಯಸ್ಕರು ಆಡಲು ಸಿಗದಿದ್ದಾಗ ತಾನೇ ವಿವಿಧ ರೀತಿಯಲ್ಲಿ ಕೂಗಿ ತನ್ನ ಪ್ರತಿಧ್ವನಿ ಕೇಳುವದೇ ಮೋಜಾಗಿರುತ್ತದೆ. ಪೂಜಾ ಸಮಯದಲ್ಲಿ ಗಂಟೆ, ತಾಳ, ಶಂಖ ನುಡಿಸುವದರಲ್ಲಿ ಮಕ್ಕಳದೇ ಎತ್ತಿದ ಕೈ. ಮಂಗಳಾರತಿ ಮುಗಿದ ನಂತರ ಸಿಗುವ ಬಾಳೆಹಣ್ಣು, ತೆಂಗಿನಕಾಯಿ ಚೂರು, ಪಂಚಕಜ್ಜಾಯದ ಪ್ರಸಾದಕ್ಕಾಗಿ ಅವರು ಅದೆಷ್ಟು ಕಾದಿರುತ್ತಿದ್ದರೋ! ಹುಡುಗಿಯರು ಆಚೆ-ಈಚೆಗಿನ ಮನೆಗಳ ಹಿತ್ತಲು, ತೋಟಗಳಿಂದ ಹೂ ತಂದು, ದಂಡೆಕಟ್ಟಿ ದೇವರಿಗೇರಿಸುವದರಲ್ಲಿ ಪಾಲುಗೊಳ್ಳುತ್ತಿದ್ದರು. ದೇವಾಲಯದ ವಿಶಾಲವಾದ ಜಗಲಿಯ ಮೂಲೆಯಲ್ಲಿ ಆಣೆಕಲ್ಲು, ಗಜ್ಜುಗ, ಚನ್ನೆಮಣೆ, ಪಗಡೆ ಮುಂತಾದ ಆಟಗಳು ಅವರನ್ನು ಆಕರ್ಷಿಸುತ್ತಿದ್ದವು. ಅಲ್ಲದೇ ಕೈಗಳು ಹತ್ತಿ ಬಿಡಿಸುತ್ತ, ಕಸೂತಿ ಹಾಕುತ್ತ, ಹೂ ಕಟ್ಟುತ್ತ ಇರುವಾಗ, ಕಥೆ-ಹಾಡುಗಳಲ್ಲಿ ಸಮಯ ಕಳೆಯುತ್ತಿತ್ತು. ದೇವಾಲಯದ ಅಲಂಕಾರ, ರಂಗೋಲಿಗಳಲ್ಲಿ ಹೆಂಗಳೆಯರು ಪಾಲು ಪಡೆಯುತ್ತಿದ್ದರು. ಆರತಿ ಬೆಳಗುವಾಗ ಹುಡುಗಿಯರ ತಂಡ, ಹೊಸ ಹೊಸ ದೇವರ ನಾಮಗಳನ್ನು, ಸ್ತೋತ್ರಗಳನ್ನು ಹಾಡುತ್ತಿತ್ತು. ಎಳೆತನದಲ್ಲಿ ಧಾರ್ಮಿಕ, ಸಾಮಾಜಿಕ ಶಿಕ್ಷಣ ನೀಡುವ, ಇದಕ್ಕಿಂತ ಉತ್ತಮವಾದ ಪದ್ಧತಿ ಬೇರಾವುದು ಇದ್ದೀತು?

ದೇವಾಲಯಗಳಲ್ಲಿ ಪುರಾಣ ಓದುವ ಪುರಾಣಭಟ್ಟರು ಅತ್ಯಂತ ಜನಪ್ರಿಯ ಶಿಕ್ಷಕರಾಗಿರುತ್ತಿದ್ದರು. ಅವರಲ್ಲಿ ಕೆಲವರು ಮುಂಜಾವಿನಲ್ಲಿ ಸುತ್ತಮುತ್ತಲಿನ ಹುಡುಗರನ್ನು ಕಲೆಹಾಕಿ ಬಾಲಶಿಕ್ಷಣದ ವರ್ಗ ನಡೆಸುತ್ತಿದ್ದರು. ಅವರಿಗೆ ನೀತಿಬೋಧೆಯ ಕವಿತೆಗಳನ್ನು ರಾಗಬದ್ಧವಾಗಿ ಹಾಡಲು ಕಲಿಸಿ ಅವರೊಂದಿಗೆ ತಾವೂ ಹಾಡುತ್ತಿದ್ದರು. ಸಂಜೆ ಸ್ನಾನ, ಸಂಧ್ಯಾವಂದನೆ, ಪೂಜೆಗಳನ್ನು ಮುಗಿಸಿ ವಯಸ್ಕರಿಗೆ ಪುರಾಣ ಓದಿ ಹೇಳಿ, ಸರಳ ಭಾಷೆಯಲ್ಲಿ ಅದನ್ನು ವಿವರಿಸಿ ನಿತ್ಯಜೀವನದಲ್ಲಿ ಅದರ ಸಂದೇಶವನ್ನು ಅಳವಡಿಸುವ ಕಲೆಯನ್ನು ವಿವರಿಸುತ್ತಿದ್ದರು. ಅರಸನ ಸೇವೆಯಲ್ಲಿದ್ದರೂ ಅಧ್ಯಾತ್ಮಿಕ ಶಿಕ್ಷಣ ಪಡೆಯಲು ಯಾವ ಮುಚ್ಚುಮರೆ ಇಲ್ಲದೇ ಪುರಾಣಭಟ್ಟನ ವಾಕ್ ಪ್ರತಿಭೆಯನ್ನು ಕೇಳಲು ಬಿಡುವಿನ ವೇಳೆಯಲ್ಲಿ ದೇವಾಲಯಗಳಿಗೆ ಧಾವಿಸುತ್ತಿದ್ದರು(81). ವಿವಿಧ ದೇವಾಲಯಗಳ, ಇಲ್ಲವೇ ಊರುಗಳ ಪುರಾಣಭಟ್ಟರು ತಮ್ಮ ವಾಗ್ ವೈಖರಿ ಪ್ರದರ್ಶಿಸಲು, ಜ್ಞಾನಾರ್ಜನೆ ಹೆಚ್ಚಿಸಿಕೊಳ್ಳಲು, ಅವಕಾಶ ದೊರೆತಾಗೆಲ್ಲ ವಿಚಾರ ವಿಮರ್ಶೆ, ವಿನಿಮಯ, ತರ್ಕಗಳಲ್ಲಿ ತೊಡಗುವ ಪರಿಪಾಠ ಬೆಳೆದಿತ್ತು(82). ಮಣ್ಣಿನಲ್ಲಿ ಆಡುವ ಎಳೆಯರು, ಧನ-ಧಾನ್ಯಗಳಿಗೆ ಕೊರತೆ ಇಲ್ಲದ

ತಂದೆ-ತಾಯಿಗಳು, ಅದಾಗಲೆ ಒಂದು ಹೆಜ್ಜೆ ಪರಲೋಕದಲ್ಲಿಟ್ಟ ಅಜ್ಜ- ಅಜ್ಜಿಯರಿಗೆಲ್ಲ ಒಬ್ಬನೇ ಶಿಕ್ಷಕನಿರುವದು ಪುರಾಣಭಟ್ಟನ ಜಾಣ್ಮೆಯ ದ್ಯೋತಕ! ಶಿಲ್ಪ ಒಂದರಲ್ಲಿ ತನ್ನ ಸಮವಯಸ್ಕನಿಗೆ ತಾಳೆಗರಿ ಓದಿಸುವ ಪುರಾಣಭಟ್ಟನ ವೈಖರಿ ನೈಜವಾಗಿ ಚಿತ್ರಿತವಾಗಿದೆ(83). ಸಮಾಜದಲ್ಲಿ ಅವನಿಗೆ ಗೌರವದ ಸ್ಥಾನವಿತ್ತು. ಅವನ ಉದರ ನಿರ್ವಹಣೆಗಾಗಿ ಅರಸರೂ ಇತರರೂ ಉದಾರವಾಗಿ ದಾನ-ದತ್ತಿಗಳನ್ನು ಕೊಡಮಾಡುತ್ತಿದ್ದರು. ವಿಶೇಷ ದಿನಗಳಲ್ಲಿ, ಹಬ್ಬಹುಣ್ಣಿಮೆಗಳಲ್ಲಿ ಅವನನ್ನು ಮನೆಗೆ ಆಮಂತ್ರಿಸಿ ಊಟ-ಉಪಚಾರ- ದಕ್ಷಿಣೆ ಕೊಟ್ಟು ಗೌರವಿಸುತ್ತಿದ್ದರು.[೩] ವಿಜಯನಗರದ ಆಳರಸರ ಕಾಲದ ಶಿಲ್ಪ ಒಂದರಲ್ಲಿ ಸೇನಾಧಿಪತಿಯೋರ್ವನು ತಾಳೆಗರಿ ಗ್ರಂಥಗಳನ್ನು ಪ್ರವಚನ ಮಾಡಿದವನಿಗೆ ದಕ್ಷಿಣೆ ನೀಡುವದನ್ನು ವಿವರವಾಗಿ ಚಿತ್ರಿಸಲಾಗಿದೆ(84). ಇನ್ನೊಂದು ಶಿಲ್ಪದಲ್ಲಿ ಪುರಾಣಭಟ್ಟನು ರಸವತ್ತಾದ ಸನ್ನಿವೇಶವನ್ನು ವಿವರಿಸುವಾಗ ಗೃಹಸ್ಥನು ವಿಸ್ಮಯದಿಂದ ಕೇಳುವದರಲ್ಲಿ ತಲ್ಲೀನನಾಗಿದ್ದಾನೆ(85). ಮಗದೊಂದು ಶಿಲ್ಪದಲ್ಲಿ ಪ್ರೌಢನೊಬ್ಬನು ಗುರುಗಳ ಧರ್ಮಗ್ರಂಥ ವಾಚನವನ್ನು ಭಯಭಕ್ತಿಯಿಂದ ಆಲಿಸುತ್ತಿದ್ದಾನೆ(86).

ಇಂದಿಗೂ ಹಲವಾರು ದೇವಾಲಯಗಳಲ್ಲಿ, ಕಾಶಿಗೆ ಹೋಗಿ ಸಂಸ್ಕೃತ ಅಭ್ಯಸಿಸಿ ಬಂದ ಪಂಡಿತರು ತಮ್ಮ ಅರಿವನ್ನು ಇತರರೊಂದಿಗೆ ಹಂಚಿಕೊಳ್ಳುತ್ತಾರೆ(87). ಅಂಥಲ್ಲಿ ಪ್ರೌಢರು, ತಮ್ಮ ವಯಸ್ಸನ್ನು ಮರೆತು, ಶಾಲಾ ವಿದ್ಯಾರ್ಥಿಯಂತೆ ಓದು-ಬರೆಹದಲ್ಲಿ ತೊಡಗಿದ್ದನ್ನು ಕಾಣಬಹುದು(88). ಈ ಪಂಡಿತರು ಕೇವಲ ವಿದ್ಯಾದಾನದಿಂದ-ಮೋಕ್ಷ ಕಾಣಬಹುದೆಂದು ನಂಬಿಕೆಯಿಟ್ಟವರು. ದೇವಾಲಯಗಳಲ್ಲಿ ನಡೆಯುವ ಹರಿಕಥೆಗಳು ಸರ್ವರಿಗೂ ಆಕರ್ಷಣೆ. ಸರ್ವ ವಿದ್ಯೆಗಳಲ್ಲಿ ಸಂಪನ್ನರಾದ ಹರಿದಾಸರು ಕಾಲಿಗೆ ಗೆಜ್ಜೆ ಕಟ್ಟಿ ಕುಣಿಯಬಲ್ಲವರಾಗಿದ್ದರು. ಎಲ್ಲರನ್ನೂ ನಗಿಸಿ ನಲಿಸಬಲ್ಲವರಾಗಿದ್ದರು. ಪೌರಾಣಿಕ ಸನ್ನಿವೇಶಗಳನ್ನು ಅಭಿನಯಿಸುವದರ ಜೊತೆಗೆ, ಪದಗಳನ್ನು ಸರಾಗವಾಗಿ ಹಾಡಬಲ್ಲವರಾಗಿದ್ದರು.

ಪುರಾಣಭಟ್ಟರೊಂದಿಗೆ ಕಾವ್ಯಗಳನ್ನು ವಾಚಿಸಿ ಹೇಳುವ ಗಮಕಿಗಳಿದ್ದರು.[೪] ಹೆಂಗಳೆಯರೂ ಈ ಕಲೆಯಲ್ಲಿ ಹಿಂದೆ ಬಿದ್ದಿರಲಿಲ್ಲ.[೫] ಎತ್ತರದ ಪೀಠದಲ್ಲಿ ಆರೂಢಳಾಗಿ ಬಲಗೈಯಲ್ಲಿ ಏಕತಾರಿ ಮೀಟುತ್ತ, ಎಡಗೈಯ ಕಾವ್ಯಗ್ರಂಥವನ್ನು ಸುಶ್ರಾವ್ಯವಾಗಿ ಓದಿ ಹೇಳುತ್ತಿದ್ದರು(89). ಕೆಲ ಮಹಿಳಾ ಗಮಕಿಗಳು ವೀಣೆಯಂತಹ ವಾದ್ಯವನ್ನು ಬಳಸುತ್ತಿದ್ದರು(90). ಹರಿಹರದ ಹರಿಹರೇಶ್ವರ ದೇವಾಲಯದಲ್ಲಿ, ಇತ್ತೀಚಿನವರೆಗೂ, ಪ್ರತಿ ಸಂಜೆ ಪುರಾಣ ಶ್ರವಣ ಎಲ್ಲರನ್ನು ಆಕರ್ಷಿಸುವ ಮುಖ್ಯ ಶೈಕ್ಷಣಿಕ ಚಟುವಟಿಕೆಯಾಗಿದ್ದು, ಜಾತಿಯ ಅಂತರ ಮರೆತು ಜನ ಸೇರುತ್ತಿದ್ದರು.[೬] ಆಗಾಗ ಬೇರೆ ಊರಿನಿಂದಲೂ ವಿದ್ವಾಂಸರನ್ನು ಆಮಂತ್ರಿಸಿ ಅವರ ಪಾಂಡಿತ್ಯದ ಲಾಭ, ಊರವರಿಗೆ ಸಿಗುವಂತೆ ಮಾಡುತ್ತಿದ್ದರು.

ಹಲವಾರು ಕಥೆಗಳನ್ನು ಪ್ರಾಸಂಗಿಕವಾಗಿ ನಿರೂಪಿಸಬಲ್ಲರು. ರಾಮಾಯಣ, ಮಹಾಭಾರತ, ಭಾಗವತ, ಕೆಲವಾರು ಪುರಾಣಗಳ ಸನ್ನಿವೇಶಗಳನ್ನು ಸುಲಭ ಭಾಷೆಯಲ್ಲಿ ವಿವರಿಸಿದರೆಂದರೆ ಕಣ್ಣಿಗೆ ಕಟ್ಟಿದಂತಿರುತ್ತಿತ್ತು. ವಿದ್ಯಾರ್ಥಿಗಳು, ಶಾಲಾಗುರುಗಳು ಕಲಿಸಿದ

ಪಾಠಗಳನ್ನು ಮರೆತರೂ, ಹರಿದಾಸರ ರಸವತ್ತಾದ ಕೀರ್ತನೆಗಳನ್ನು ಮರೆಯುತ್ತಿರಲಿಲ್ಲ. ಅವರ ಹಾಡುಗಳನ್ನು ಲಕ್ಷ್ಯಗೊಟ್ಟು ಕೇಳಿ, ಓಣಿಯ ಮಕ್ಕಳೆದುರು, ಹಾಡಿ ಆಡಿ ತೋರಿಸುವದು ಸಾಮಾನ್ಯವಾಗಿತ್ತು. ಪುರಂದರದಾಸರು ಮತ್ತು ಆನಂತರ ಬಂದ ಹಲವಾರು ಹರಿದಾಸರು ಈ ಜನಪ್ರಿಯ ಶಿಕ್ಷಣಕ್ಕೆ ಹೊಸ ತಿರುವು ಕೊಟ್ಟರು. ಅದಕ್ಕೂ ಹಿಂದೆ ದೇವಸ್ಥಾನಗಳಲ್ಲಿ ನಡೆಯುತ್ತಿದ್ದ ಸಂಗೀತ ಸೇವೆ, ಸಂಸ್ಕೃತದಲ್ಲಿದ್ದದ್ದು ಕನ್ನಡಕ್ಕೆ ಪರಿವರ್ತನೆ ಹೊಂದಿತು. ದಾಸರ ಬೋಧನೆಯ ಬಲ, ಅವರ ನೇರ ಮಾತು, ಚಿಕ್ಕ, ಚೊಕ್ಕ, ಸರಳ ಹಾಡುಗಳಲ್ಲಿ ಇತ್ತು. ಹೀಗಾಗಿ ಜನಸಾಮಾನ್ಯರಲ್ಲಿ ಅವು ಬಲು ಬೇಗ ಮೆಚ್ಚಿಗೆಯನ್ನು ಪಡೆದವು. ಡಾಂಭಿಕತೆಗೆ ಜೋತು ಬೀಳದೇ, ಮೌಢ್ಯದ ಪ್ರಕಾರಗಳನ್ನು ಕಳಚಿಹಾಕಿ, ಹಸನಾದ ಬಾಳನ್ನು ಬಾಳುವ ಸಂದೇಶ ಅನಕ್ಷರಸ್ಥರ ಮನಸ್ಸನ್ನು ತಟ್ಟಿತು. ಸುಲಭವಾದ ಹಾಡುಗಳನ್ನು ಎಲ್ಲರೂ ಹಾಡುವಂತಾಯಿತು. ಏಕತಾರಿಯನ್ನೋ ತಂಬೂರಿಯನ್ನೋ ಮೀಟುತ್ತ, ಚಿಟಿಕೆ ಹಿಡಿದು ಹಳ್ಳಿಹಳ್ಳಿ, ಕೇರಿಕೇರಿಗೆ ಭೇಟಿ ಕೊಟ್ಟು ತಮ್ಮ ಬೋಧನೆಯನ್ನು ಹಾಡುಗಾರಿಕೆಯ ಮೂಲಕ ಜನರಿಗೆ ತಲುಪಿಸಿ, ಅರಿವನ್ನು ಹರಡಿದರು. ಜನತಾ ಶಿಕ್ಷಣದ ಅಧ್ವರ್ಯುಗಳಾದರು.

ಹರಿದಾಸರ ಪದಗಳೆಲ್ಲ ಜಾನಪದ ಹಾಡುಗಾರಿಕೆಯ ಪ್ರಕಾರಗಳಾದ ಉದಯರಾಗ, ಲಾಲಿ, ಜೋಗುಳ, ಸುವ್ವಿ, ಸೋಬಾನೆ, ಕೋಲಾಟ, ಕೊರವಂಜಿ ಹಾಡುಗಳ ರೂಪದಲ್ಲಿ ರಚಿತವಾಗಿದ್ದರಿಂದ ಭಾವುಕರಿಗೆ ಕೇಳಿ ಕಲಿಯಲು ಸುಲಭವಾಗಿದ್ದವು. ಮನೆಮನೆಯಲ್ಲಿ ಹೆಂಗಳೆಯರು ಗೃಹಕೃತ್ಯ ಮಾಡುತ್ತ, ಹಾಡುತ್ತ, ಗುಣಗುಣಿಸುತ್ತ ಸಂಸಾರದ ತಾಪತ್ರಯಗಳನ್ನು ಮರೆಯಲು ಸಹಾಯವಾಯಿತು. ಹಬ್ಬ ಹರಿದಿನಗಳಲ್ಲಿ ಮದುವೆ, ಮುಂಜಿ ಇನ್ನಿತರ ಸಮಾರಂಭಗಳಲ್ಲಿ ಸ್ತ್ರೀ ಸಮೂಹ ಹಾಡಿ ಆನಂದಿಸಲಾರಂಭಿಸಿತು.

ಪುರಂದರದಾಸರ ನಂತರ ಅದೇ ಜಾಡಿನಲ್ಲಿ ಕನಕದಾಸರು, ಮಹೀಪತಿದಾಸರು, ಹೆಳವನಕಟ್ಟೆ ಗಿರಿಯಮ್ಮ, ಭೀಮವ್ವ, ಜಗನ್ನಾಥದಾಸರು, ವಿಜಯದಾಸರು ಮೊದಲಾದವರು ಅಸಂಖ್ಯಾತ ಹಾಡುಗಳನ್ನು, ಭಜನೆಗಳನ್ನು ರಚಿಸಿ ಹಾಡಿದರು. ಸರ್ವಜ್ಞನ ತ್ರಿಪದಿಗಳು ಜನರಲ್ಲಿ ಜಾಗೃತಿ ತಂದವು. ಪ್ರತಿಯೊಂದು ಪದ್ಯವೂ ಜೀವನದ ಆಳವಾದ ಅನುಭವ, ಶ್ರದ್ಧೆ ಮತ್ತು ಇತರರಿಗಾಗಿ ಕಳಕಳಿಗಳನ್ನು ಒಳಗೊಂಡಿದ್ದರಿಂದ, ಕಿರಿಯ ತ್ರಿಪದಿ, ಹಿರಿಯ ಸಂದೇಶವನ್ನು ಬೀರುವ ಸಾಧನವಾಯ್ತು. ಕರದಿ ಕಪ್ಪರ ಹಿಡಿದು, ಹಿರಿದಾದ ಈ ನಾಡಿನಲ್ಲಿ ಸಂಚರಿಸಿ, ವಚನಗಳನ್ನು ಬೀರುತ್ತ, "ತಿರಿವರಿಂ ಸಿರಿವಂತರಾರು?" ಎಂದು ಸರ್ವಜ್ಞ ಉದ್ಗರಿಸಿದ್ದಾನೆ.

ಧಾರ್ಮಿಕ ಶಿಕ್ಷಣದಲ್ಲಿ ಶಂಕರಾಚಾರ್ಯರು, ರಾಮಾನುಜಾಚಾರ್ಯರು, ಮಧ್ವಾಚಾರ್ಯರಂತಹ ಗುರುಗಳ ಕೊಡುಗೆ ಹಿರಿದು. ಇವರೆಲ್ಲ ದೇಶದ ಉದ್ದಗಲಕ್ಕೂ ಪ್ರವಾಸ ಕೈಕೊಂಡರಲ್ಲದೇ ಮೋಕ್ಷ ಪಡೆಯುವದರಲ್ಲಿ ತೀರ್ಥಯಾತ್ರೆಯ ಮಹತ್ವವನ್ನು ತಿಳಿಸಿಕೊಟ್ಟರು. ಪ್ರವಾಸವೆಂಬುದು ಸ್ವಾಧ್ಯಾಯದ ಉತ್ತಮ ಶಿಕ್ಷಕನೆಂಬ ತಥ್ಯವನ್ನು ಅರಿತು ಪಾಲಿಸಿ ಮನಗಾಣಿಸಿದ್ದರು. ಕನ್ಯಾಕುಮಾರಿಗೆ ಹೋಗಿ ಅಲ್ಲಿಯ ಭೋರ್ಗರೆಯುವ ಕಡಲು,

ಸುಂದರ ಸೂರ್ಯೋದಯ, ಸೂರ್ಯಾಸ್ತಗಳನ್ನು ಕಂಡಾಗ ದೈವೀ ಸಾಕ್ಷಾತ್ಕಾರದ ಅನುಭವವಾಗದೇ ಇದ್ದೀತೆ? ಅಲ್ಲಿಯ ಮಳಲನ್ನು ಪ್ರಯಾಗದ ತ್ರಿವೇಣಿ ಸಂಗಮಕ್ಕೆ ಸೇರಿಸಲು ಹೊರಟಾಗ ಉತ್ತರಭಾರತದ ಜನಜೀವನದ ನಿಕಟ ಪರಿಚಯ ಆಗುತ್ತಿತ್ತು. ಕೇದಾರನಾಥ, ಬದ್ರಿನಾಥರ ದರ್ಶನಕ್ಕೆ ಹೋದಾಗ, ಹಿಮಾಲಯದ ಉತ್ತುಂಗ ಅನಂತತೆಯ ಅನುಭವ ಆಗುತ್ತಿತ್ತು. ಜೀವನದ ಕ್ಷಣಿಕತೆ, ಮಾನವನ ಸಾಧ್ಯಾಸಾಧ್ಯತೆಗಳ ಪರಿಚಯವನ್ನು ತೀರ್ಥಾಟನವು, ಹಂತಹಂತಗಳಲ್ಲಿ ನೀಡುತ್ತಿತ್ತು. ಹೀಗೆ, ಕಠಿಣ ಯಾತ್ರೆಗಳನ್ನು ಮಾಡಿಬಂದವರ ಬಗ್ಗೆ ಊರವರು ಶ್ರದ್ಧೆ-ಗೌರವಗಳನ್ನು ತಾಳಿರುತ್ತಿದ್ದರು. ಅವರ ಅನುಭವಗಳಲ್ಲಿ ಪಾಲುಗೊಳ್ಳುತ್ತಿದ್ದರು. ಅಂತೆಯೇ ಹೆಚ್ಚೆಚ್ಚು ಕನ್ನಡಿಗರು, ಇಂಥ ಯಾತ್ರೆಗಳನ್ನು ಕೈಕೊಳ್ಳಬೇಕೆಂದು ಧಾರ್ಮಿಕರು ದೂರದೂರದ ಯಾತ್ರಾಸ್ಥಳಗಳಲ್ಲಿ ಧರ್ಮಶಾಲೆ, ಛತ್ರಗಳನ್ನು ಕಟ್ಟಿಸುತ್ತಿದ್ದರಲ್ಲದೇ ಆಳರಸರು ಕೊಡುಗೈಯಿಂದ ಅವಕ್ಕೆ ದಾನ ಮಾಡುತ್ತಿದ್ದರು. ಚಾಲುಕ್ಯರು, ಹೊಯ್ಸಳರು, ಇನ್ನಿತರ ಚಿಕ್ಕಪುಟ್ಟ ಅರಸರು ಸಹ, ವಾರಣಾಸಿ, ದ್ವಾರಕೆ, ಪ್ರಯಾಗ, ಉಜ್ಜಯನಿ, ರಾಮೇಶ್ವರ ಮೊದಲಾದ ಅರವತ್ತು ನಾಲ್ಕು ಸ್ಥಳಗಳಲ್ಲಿ ದಾನಶಾಲೆಗಳನ್ನು ಸ್ಥಾಪಿಸಿದರು. ಜೀವನದಲ್ಲಿ ಒಮ್ಮೆಯಾದರೂ ತೀರ್ಥಯಾತ್ರೆ ಕೈಕೊಳ್ಳಲೇಬೇಕೆಂದು ಪ್ರತಿಯೊಬ್ಬನ ಕನಸಾಗಿತ್ತು. ಆಷಾಢದಲ್ಲಿ ಕಾಲುನಡಿಗೆಯಲ್ಲಿ ಕನ್ನಡ ವಿಠ್ಠಲನ ದರ್ಶನಕ್ಕೆ ಪಂಢರಪುರಕ್ಕೆ ಹೋಗುವ ಧಾರ್ಮಿಕರು ಇಂದು ಇದ್ದಂತೆ ಅಂದೂ ಇದ್ದರು. ತಾಳ ತಂಬೂರಿ ಹಿಡಿದು ವಿಠ್ಠಲನ ಭಜನೆ ಮಾಡುತ್ತ, ಅಲ್ಲಲ್ಲಿ ವಿಶ್ರಮಿಸುತ್ತ, ನೀರಿನ ಅನುಕೂಲವಿದ್ದಲ್ಲಿ ಅಡಿಗೆಮಾಡಿ, ಸಾಮೂಹಿಕವಾಗಿ ಊಟ, ವಿರಾಮಗಳನ್ನು ಮುಗಿಸಿ, ಸಮೀಪದ, ದೂರದ ಯಾತ್ರೆಗಳನ್ನು ಮಾಡುವದಕ್ಕಿಂತ ಒಳ್ಳೆಯ ಸಮಾಜ ಶಿಕ್ಷಣ ಯಾವುದು ತಾನೆ ಇದ್ದೀತು?

ಬಸವೇಶ್ವರರು ಹಾಕಿಕೊಟ್ಟ ಮೇಲ್ಪಂಕ್ತಿಯನ್ನು ಅನುಸರಿಸಿ, ನಂತರದ ಶತಕದಲ್ಲಿ ಅದೆಷ್ಟೋ ಶಿವಶರಣ-ಶರಣೆಯರು ಬಹುಜನರ ಜಾಗೃತಿಗಾಗಿ ಅಪಾರ ದುಡಿದರು. ಕಿನ್ನರಿ ಬೊಮ್ಮಯ್ಯನು "ಶಿವ ಕೊಟ್ಟ ಕಿನ್ನರಿಯ ಭವದೊಳಗೆ ನುಡಿಸುತಲಿ, ಶಿವಬೋಧೆ ಜನಕೆ ಮಾಡುತಲಿ, ಭವಿಗಳಿಗೆ ಶಿವಮಂತ್ರ ಊದಿ" ಊರೂರು ಅಲೆದ. ಬಹುರೂಪಿ ಚೌಡಯ್ಯನು ಎಂಥ ವೇಷ ಬೇಕಾದರೂ ಕ್ಷಣಾರ್ಧದಲ್ಲಿ ಧರಿಸಿ, ತನ್ನ ವೇಷಕ್ಕೆ ಅನುಗುಣವಾಗಿ ಹಾಡಿ, ಕುಣಿದು ಪ್ರೇಕ್ಷಕರಿಗೆ ಮನರಂಜನೆ ಕೊಡುವದರ ಜೊತೆಗೆ, ಧರ್ಮದಲ್ಲಿ ಶ್ರದ್ಧೆ ಮೂಡುವಂತೆ ಮಾಡುತ್ತಿದ್ದ. ಬಹಮನಿ ಅರಸರ ಕಾಲದಲ್ಲಿ ವಚನಗಳನ್ನು ರಚಿಸಿ, ಹಾಡಿ, ಸಮಾಜದ ಮೇಲೆ ವರ್ಚಸ್ಸು ಬೀರಿದ ಸೊಪ್ಪೆಯ ಬಸವನಿಗೆ ಕನ್ನಡವಲ್ಲದೇ ಫಾರಸಿ-ಸಂಸ್ಕೃತ ಭಾಷೆಗಳು ಚೆನ್ನಾಗಿ ಬರುತ್ತಿದ್ದವು. ತನ್ನ ಶಿವಭಕ್ತಿಯಿಂದ ಬಹಮನಿ ಅರಸನನ್ನೂ ಅಚ್ಚರಿಗೊಳಿಸಿದ್ದ. ಢಕ್ಕೆಯ ಮಾರಯ್ಯ, ಜನರನ್ನು ನಗಿಸಿ, ಶಿವತತ್ವಗಳನ್ನು ತಿಳಿಪಡಿಸಿ, ಅವರಿತ್ತ ದಾನ ಸ್ವೀಕರಿಸುತ್ತಿದ್ದ. ಊರೂರು ಅಲೆದು, ಮೈಕೈ ಮಣಿಸಿ, ಕಠಿಣ ದುಡಿಮೆಯಿಂದ ಜನರಿಗೆ ಮನರಂಜನೆ ನೀಡುವ ಡೊಂಬನ ಜೀವನ, ಕವಿ, ಗಮಕಿ, ವಾದಿ, ವಾಗ್ಮಿಗಳಿಗಿಂತ ಯಾವ ರೀತಿಯಲ್ಲೂ

ಕೀಳಲ್ಲವೆಂದು ಉದ್ಗರಿಸಿ ಬಸವೇಶ್ವರರು, ಕೀಳೆಂದು ಪರಿಗಣಿಸಲ್ಪಟ್ಟ ಡೊಂಬನ ವೃತ್ತಿಗೂ ಹಿರಿಯ ಸಾಧನೆಯ ಸ್ಥಾನ ಕಲ್ಪಿಸಿಕೊಟ್ಟಿದ್ದರು.

ಜೀವನದ ಎಲ್ಲ ಆಕರ್ಷಣೆಗಳನ್ನು ತಿರಸ್ಕರಿಸಿ, ಶಿವತತ್ವ ಬೋಧನೆಗಾಗಿಯೇ ತಮ್ಮಲ್ಲಿಗೆ ಬರುತ್ತಿದ್ದ ಶರಣ-ಶರಣೆಯರಿಂದ ಜನ, ತುಂಬ ಪ್ರಭಾವಿತರಾಗುತ್ತಿದ್ದರು. ಅವರ ಹಾಡು ಕೇಳಿ, ವಚನಗಳನ್ನು ಆಲಿಸಿ, ಉಪಚರಿಸಿ ಬೀಳ್ಕೊಡುತ್ತಿದ್ದರು. ಶಿವಮಾಯಿದೇವಿ, ಏಳೇಶ ಕೇತಯ್ಯಗಳು ಊರಿಂದೂರಿಗೆ ಹೋಗಿ ಶರಣರ ಕಥೆಗಳನ್ನು ವಾಚಿಸಿ, ಹೇಳುತ್ತಿದ್ದರು. ವೀರದೇವಮ್ಮ ಕಥಾವಾಚನದಿಂದ ಮಹಿಳೆಯರಲ್ಲಿ ಮೆಚ್ಚಿಗೆ ಪಡೆದಂತೆ, ಅರಸರೆದುರಿಗೂ ವಾಚಿಸಿ, "ಉಗ್ಗಡಿಸುವ ಕನ್ನೆ ವೀರಾದೇವಿ" ಎಂದೇ ಹೆಸರುವಾಸಿಯಾಗಿದ್ದಳು. ಶಿವಶರಣೆ ದೇವಮ್ಮ ನಾಟ್ಯವನ್ನೆ ಕಾಯಕವಾಗಿ ಮಾಡಿಕೊಂಡು, ಶರಣರ ಜೀವನ ಸಂದೇಶಗಳನ್ನು ನಾಟ್ಯದ ಮೂಲಕ ಅರಹುವವಳು. ಸಂಗೀತ, ನೃತ್ಯ, ನಾಟಕ, ಬಯಲಾಟ, ಜಾತಿಗರಾಟ, ಚೌಡಿಕೆ ಬಾರಿಸುವ, ಕಥೆ ಹೇಳುವ ಕಾಯಕಗಳಿಗೆ ಶಿವದೀಕ್ಷೆಯ ಸ್ಥಾನ ದೊರೆತು, ಜನಮನಕ್ಕೆ ನಾಟುವಂತಾಯಿತು. ಇಂದಿನ ಕಿಳ್ಳಿಕ್ಯಾತರು, ಕಲಿಕೇತ ಬೊಮ್ಮಯ್ಯನ ವಂಶಜರೆಂದು ಹೇಳಿಕೊಳ್ಳುತ್ತಾರೆ.

ಕೇಳಿಕೆಯವರು, ಕಥೆ, ಪ್ರಸಂಗ, ಗೀತ, ವಚನ ಇವುಗಳಲ್ಲಿ ಯಾವುದಾದರೂ ಒಂದನ್ನು ಅರಿಸಿ, ಹಾಡುತ್ತ, ನರ್ತಿಸುತ್ತ ಊರೂರು ತಿರುಗುತ್ತಿದ್ದರು. ಈ ಕಲೆಯಲ್ಲಿ ನಿಪುಣರಾದ ಮಹೇಶ್ವರರು ಕನ್ನಡ ನಾಡು ಮತ್ತು ನೆರೆನಾಡುಗಳಲ್ಲಿ ಸಂಚಾರ ಮಾಡುತ್ತ ಕೇಳಿಕೆಯ ಮೂಲಕ ಗ್ರಂಥಗಳ ಪ್ರಚಾರ ಮತ್ತು ಮಾರಾಟ ಮಾಡುತ್ತಿದ್ದರು.[೬]

ಸಿದ್ದೇಶ್ವರ ಯತಿಗಳು, ಮೂರುನೂರು ವರ್ಷಗಳ ಹಿಂದೆ ಕೂಚಿಪುಡಿ ಎಂಬ ಭಾಗವತ ಸಂಪ್ರದಾಯದ ನಾಟ್ಯ ಪದ್ಧತಿಯನ್ನು ತಂದು ಬ್ರಾಹ್ಮಣ ವರ್ಗವೂ ಕಲೆಯನ್ನು ಸಾಧಿಸಬಲ್ಲದು, ಎಂಬುದನ್ನು ತೋರಿಸುವದರ ಜೊತೆಗೆ, ಸಾಮಾಜಿಕ ಅನಿಷ್ಟವಾಗಿ ಬೆಳೆಯುತ್ತಿದ್ದ ದೇವದಾಸಿ ಪದ್ಧತಿಗೆ ತಡೆ ಹಾಕಿದರು. ಪುರುಷರೇ ಸ್ತ್ರೀ ಪಾತ್ರವಹಿಸುತ್ತಿದ್ದ ನೃತ್ಯ ಪದ್ಧತಿ, ಮುಂದೆ 'ಭಾಮಾಕಲಾಪಂ' ಆಗಿ ಬೆಳೆಯಿತು. ವಿಪ್ರವಿನೋದಿನಿ ತಂಡದ ಬ್ರಾಹ್ಮಣರು ಕೆಲವೆಡೆ ವಿವಿಧ ವೇಷಗಳನ್ನು ಧರಿಸಿ ಹಳ್ಳಿಯಿಂದ ಹಳ್ಳಿಗೆ ಸಂಚರಿಸಿ, ಕಥಾನಕಗಳನ್ನು ನಾಟ್ಯರೂಪದಲ್ಲಿ ಪ್ರದರ್ಶಿಸಿ, ಸಂತುಷ್ಟರಾದ ಜನರಿಂದ ಕಾಳು-ಕಡಿ, ಬಟ್ಟೆ ಬರೆಗಳನ್ನು ಸಂಗ್ರಹಿಸಿ ತಮ್ಮ ಗ್ರಾಮಗಳಿಗೆ ಹಿಂದಿರುಗುತ್ತಿದ್ದರು. ಅವರು ಆಳರಸರ ದೌರ್ಬಲ್ಯಗಳನ್ನು, ಕ್ರೌರ್ಯ, ಸ್ವಾರ್ಥಗಳನ್ನು, ಸಾಮಯಿಕ ಘಟನೆಗಳನ್ನು ಸೂಚ್ಯವಾಗಿ ಕಥಾನಾಟಕಗಳಲ್ಲಿ ಅಳವಡಿಸಿಕೊಂಡು, ಜನಜಾಗೃತಿ ಉಂಟುಮಾಡುತ್ತಿದ್ದರು. ಕೆಲವು ತಂಡಗಳು ವೇಷ ಧರಿಸದೇ ವಾಕ್‌ಚಾತುರ್ಯದ ಬಲದಿಂದಲೇ ಜನರನ್ನು ರಂಜಿಸುತ್ತಿದ್ದರು. ಇವರು ಈ ಶತಕದ ಆರಂಭದವರೆಗೂ ಕಾಣಸಿಗುತ್ತಿದ್ದರು.[೭] ಮುಮ್ಮಡಿ ಕೃಷ್ಣರಾಜರ ಕಾಲಕ್ಕೆ ಆಸ್ಥಾನದಲ್ಲಿ ಮನ್ನಣೆ ಪಡೆದ ಯಕ್ಷಗಾನ ಮೇಳಗಳು ಕರಾವಳಿಯ ಜಿಲ್ಲೆಗಳಲ್ಲಿ ಜನಜಾಗ್ರತಿ ಮತ್ತು ಪ್ರೌಢಶಿಕ್ಷಣಕ್ಕೆ ಹಿರಿದಾದ ಕೊಡುಗೆ ನೀಡಿವೆ.

## ಸಂದರ್ಭ ಸೂಚಿ

೧. ಪುರಾಣ ಭಟ್ಟರು ಬಾಲಶಿಕ್ಷೆಯ ಹೊಣೆ ಹೊತ್ತಿದ್ದರು. ಎಸ್.ಐಐ. XX ೭೨ ಪುರಾಣ ಕೇಳಲು ಬಂದವರಿಗೆ ಆತಿಥ್ಯದ ವ್ಯವಸ್ಥೆ: ಎ.ಕ.ತಿ.೪೦.

೨. ಬಿ.ಕೆ.ಐ. I ೫೪, ಪು ೧೩೦.

೩. ಕಂಠೀರವ ನರಸರಾಜ ವಿಜಯ ಸಂಧಿ ೭ ಪದ್ಯ ೩೬, ಪು ೧೪೪

ಭಾರತ ರಾಮಾಯಣ ಪುಣ್ಯ ಕಥೆಯ ವಿ
ಸ್ತಾರವ ಗಾನರಸದಲಿ
ಸಾರತರದೆ ನಲಿದೋದಿ ಮೆರೆವ ಚೆಲ್ವ
ಭಾರತಿಗಳು ರಾಜಿಸಿದರು.

೪. ಅದೇ ಸಂಧಿ ೩, ಪದ್ಯ ೭೦-೭೪, ಪು ೧೪೯-೫೦.

“ಭಾಗವತ ವಿಲಾಸದ ಪುಣ್ಯಕಥೆಗಳ...
ಮತ್ತೋರ್ವಳು ಭಾರತದ ಕಥೆಯ ಬಲು ಬಿತ್ತರದಲಿ...
ರಾಮಾಯಣದ ಪುಣ್ಯಕಥೆಯ...
ಕರದೊಳು ಪಿಡಿದು, ವೀಣೆಯ, ವಾಣಿಯಂದದೆ”

ಜೈನ, ಮಠ, ಬಸದಿಗಳಲ್ಲೂ ತೀರ್ಥಂಕರರ ಪುರಾಣಗಳನ್ನು ವಾಚಿಸುವ ಪರಿಪಾಠವಿತ್ತು (ಧರ್ಮಾಮೃತಂ III ಪದ್ಯ ೮-೯, ಪು ೫೦೮-೯, ವೀರಶೈವರಲ್ಲೂ ಪುಲಿಗೆರೆಯ ಮಾಯಿದೇವ, ಗುಬ್ಬಿಯ ಮಲ್ಲಣಾರ್ಯ ಮುಂತಾದವರು ಪುರಾಣ-ಪ್ರವಚನವನ್ನು ಕಾಯಕವಾಗಿ ಮಾಡಿಕೊಂಡವರು.

೫. ‘ಶ್ರೀ ಹರಿಹರ ದೇವಾಲಯ’ ಪು ೧೧೩.

೬. ದೇವೀರಪ್ಪ ಎಚ್. ‘ಲೇಖನಾಭಿವೃದ್ಧಿ’ ಲೇಖ: ಕರ್ನಾಟಕ ಭಾರತಿ ೧೯೮೩, ಪು ೪೫.

೭. ಈ ಮಾಹಿತಿಯನ್ನು ಪೂರೈಸಿದವರು ಪ್ರಸಿದ್ಧ ಕನ್ನಡ ಮತ್ತು ತೆಲುಗು ವಿದ್ವಾಂಸರೂ, ಮೈಸೂರು ವಿಶ್ವವಿದ್ಯಾಲಯದ ನಿವೃತ್ತ ಪ್ರಾಧ್ಯಾಪಕರೂ ಆಗಿದ್ದ ದಿ. ಪ್ರೊ. ಕೆ. ವೆಂಕಟರಾಮಪ್ಪನವರು.

# ೧೨. ಮಹಮ್ಮದೀಯರಲ್ಲಿ

**ಕ**ನ್ನಡನಾಡಿನ ಉತ್ತರಕ್ಕೆ ಬಹಮನಿಗಳು, ಆದಿಲ್‌ಶಾಹಿಗಳು, ದಕ್ಷಿಣಕ್ಕೆ ಹೈದರ್‌ಅಲಿ, ಟಿಪ್ಪುಸುಲ್ತಾನರು ರಾಜ್ಯವಾಳಿ, ಕರ್ನಾಟಕದ ಇತಿಹಾಸಕ್ಕೆ ತಿರುವು ಕೊಟ್ಟಿದ್ದಾರೆ. ಬಹಮನಿಗಳು ಉತ್ತರದ ಮುಸ್ಲಿಂ ರಾಜ್ಯಗಳಿಂದ ಪ್ರತ್ಯೇಕವಾದ ರಾಜ್ಯ ಕಟ್ಟಿ ಕಲೆ, ತತ್ವಜ್ಞಾನಗಳಿಗೆ ಕೊಡುಗೆ ನೀಡಿದರೆ, ಆದಿಲ್‌ಶಾಹಿಗಳು, ಅತ್ಯಂತ ಬಲಾಢ್ಯವೆನಿಸಿದ ವಿಜಯನಗರ ಸಾಮ್ರಾಜ್ಯವನ್ನು ಮಣ್ಣುಮುಕ್ಕಿಸುವದರಲ್ಲಿ ಪ್ರಧಾನ ಪಾತ್ರವಹಿಸಿದರು. ಹೈದರ್-ಟಿಪ್ಪುರವರಂತೂ ಮರಾಠಾ ಮತ್ತು ಬ್ರಿಟಿಷರಿಗೆ ಸಿಂಹಸ್ವಪ್ನವಾಗಿದ್ದರು. ತಾಳೆಗರಿಗ್ರಂಥ, ಶಿಲಾಶಾಸನಗಳು, ತಾಮ್ರಶಾಸನಗಳು ಮುಂತಾದ ಶಾಶ್ವತ ಬರವಣಿಗೆಯಲ್ಲಿ ಅವರಿಗೆ ವಿಶ್ವಾಸವಿರಲಿಲ್ಲ. ಅಂತೆಯೇ ಪ್ರವಾಸಿಗರ ವರದಿ, ಅರಸರ ದಿನಚರಿ, ಚರಿತ್ರೆ, ಕೈಫಿಯತ್, ಬಖೈರ್‌ಗಳನ್ನು ಪರಿಶೀಲಿಸಿದಾಗ ಅವರ ಶಿಕ್ಷಣ ಕ್ರಮದ ಇಣುಕುನೋಟಗಳು ಮಾತ್ರ ಸಿಗುತ್ತವೆ. ಶಿಕ್ಷಣಕ್ರಮವಿಲ್ಲದೇ ಇವರುಗಳು ರಾಜ್ಯ ಕಟ್ಟಿದರೆಂದು ಮಾತ್ರ ತೀರ್ಮಾನಿಸಲಾಗದು!

ಮುಹಮ್ಮದ ಪೈಗಂಬರರಿಗೆ ಹೆಚ್ಚಿನ ಶಿಕ್ಷಣ ದೊರೆಯದಿದ್ದರೂ ಅವರು ವಿದ್ಯಾಪಕ್ಷಪಾತಿಗಳಾಗಿದ್ದರು. ಪವಿತ್ರ ಖುರಾನಿನಲ್ಲಿ "ಪ್ರತಿಯೊಬ್ಬ ಮುಸಲ್ಮಾನನಿಗೂ ವಿದ್ಯೆಯ ವ್ಯಾಪಕಜ್ಞಾನವೇ ಇಹಪರಗಳಿಗೆ ಸಾಧಕವಾದದ್ದು. ವಿದ್ಯೆ ಮತ್ತು ವಿದ್ಯಾವಂತರನ್ನು ಮನ್ನಿಸುವದು ನನ್ನನ್ನು ಗೌರವಿಸಿದಂತೆ. ಹುತಾತ್ಮನ ರಕ್ತಕ್ಕಿಂತ ವಿದ್ವಾಂಸನ ಬರವಣಿಗೆಯ ಮಸಿ ಹಿರಿದು" ಎಂದು ತಮ್ಮ ವಿದ್ಯಾಪ್ರೇಮವನ್ನು ಸಾರಿದರು. ಇಸ್ಲಾಂ ಧರ್ಮ ಬೇರೆ ಬೇರೆ ದಿಕ್ಕುಗಳಲ್ಲಿ ಹರಡಿದಂತೆ, ಶಿಕ್ಷಣಕ್ಕೂ ಪ್ರೋತ್ಸಾಹ ದೊರೆಯಿತು. ಮಹಮ್ಮದೀಯರು ತಾವು ಗೆದ್ದ ಪ್ರದೇಶಗಳಲ್ಲೆಲ್ಲ ಮತ ಪ್ರಚಾರ ಪ್ರಾರಂಭಿಸಿ ಖುರಾನ್‌ವನ್ನು ಕಡ್ಡಾಯವಾಗಿ ಕಲಿಸಲಾರಂಭಿಸಿದರು. ಅಂತೆಯೇ ಹಬ್ಬ ಹರಿದಿನಗಳಲ್ಲಿ, ಸಭೆ-ಸಮಾರಂಭಗಳಲ್ಲಿ, ಅಭಿನಂದನಾ ಕಾರ್ಯಕ್ರಮಗಳಲ್ಲಿ ಖುರಾನ್ ಪಠಿಸುವದು, ಪುನರುಚ್ಚರಿಸುವದು ಪರಿಪಾಠವಾಗಿ ಬೆಳೆಯಿತು. ಖಲೀಫರ ಆದೇಶದಂತೆ ಆಡಳಿತವರ್ಗಕ್ಕೆಲ್ಲ ಖುರಾನ್ ಕಂಠಪಾಠವಿರಬೇಕೆಂಬ ಕಾನೂನು ಜಾರಿಯಲ್ಲಿ ಬಂದಿತು. ಇದರಿಂದಾಗಿ ಅರಬ್ಬೀ ಭಾಷೆ ಅವರು ಗೆದ್ದ ಪ್ರದೇಶಗಳಲ್ಲಿ ಪ್ರಸಾರಗೊಂಡಿತು.[೧] ಸಾಮ್ರಾಜ್ಯ ವಿಸ್ತಾರದ ಜೊತೆಗೆ, ಇಸ್ಲಾಂ ಧರ್ಮ ಪ್ರಚಾರವೂ ಅವರ ಧ್ಯೇಯವಾಗಿದ್ದರಿಂದ ಎಲ್ಲ ಕಡೆಯಲ್ಲಿ ಸಣ್ಣ-ದೊಡ್ಡ ಮಸೀದಿಗಳು ಏಳಲಾರಂಭಿಸಿದವು. ಇದಕ್ಕಾಗಿ ಗೆದ್ದ ಪ್ರದೇಶಗಳ ಧಾರ್ಮಿಕ ಕಟ್ಟಡಗಳನ್ನು ಹಲವೆಡೆ ನೆಲಸಮ ಮಾಡಲು ಹಿಂದೆ ಮುಂದೆ ನೋಡಲಿಲ್ಲ. ಧರ್ಮ

ಬೋಧನೆಗಾಗಿ, ಮಸೀದೆಯ ಭಾಗವಾಗಿ 'ಮಖ್ತಾಬ್' ಅಥವಾ ಪ್ರಾಥಮಿಕ ಶಾಲೆಗಳನ್ನು ನಡೆಸಲಾರಂಭಿಸಿದರು. ಇಲ್ಲಿ ಖುರಾನ್ ಪಠಣ, ಪ್ರಾರ್ಥನೆ, ಅರಬ್ಬೀ ಭಾಷೆಯ ಪರಿಚಯ, ಅಂಕಗಣಿತಗಳನ್ನು ಹೇಳಿಕೊಡುತ್ತಿದ್ದರು. ಬರುಬರುತ್ತ ಫಾರಸೀ ಭಾಷೆಯನ್ನೂ ಕಲಿಸಲಾರಂಭಿಸಿದರು. ಆಳರಸರಿಂದಾಗಿ ತುರ್ಕಿ ಭಾಷೆಯೂ ಕೆಲಕಾಲ ಬಳಕೆಗೆ ಬಂದು, ತುರ್ಕಿಭಾಷೆಯ ಜ್ಞಾನ ವಿಶೇಷ ಗೌರವಕ್ಕೆ ಪಾತ್ರವಾಗಿತ್ತು. ಉದರ ನಿಮಿತ್ತವಾಗಿ ರಾಜಸೇವೆಗೆ ಸೇರುವ ಸ್ಥಾನೀಯರು ಅರಬ್ಬೀ ಮತ್ತು ಫಾರಸಿ ಭಾಷೆಗಳನ್ನು ಕಡ್ಡಾಯವಾಗಿ ಕಲಿಯಲೇಬೇಕಾಗಿತ್ತು.

ಬಹಮನಿ ಸುಲ್ತಾನರು(ಕ್ರಿ.ಶ.೧೩೪೭ ರಿಂದ ೧೫೩೮) ರಾಜ್ಯವಿಸ್ತಾರದ ಜೊತೆಗೆ ಧರ್ಮಶಿಕ್ಷಣದ ಪ್ರಚಾರ ಪ್ರಾರಂಭಿಸಿದರು.[೨] ಊರಿಗೊಂದು ಇದ್ದ ಮಸೀದೆಗಳ ಸಂಖ್ಯೆ ಜನವಸತಿಯೊಂದಿಗೆ ಬೆಳೆಯಲಾರಂಭಿಸಿತು. ಮಸೀದೆಗಳು ಪ್ರಾರ್ಥನಾ ಸ್ಥಳವಾದರೆ ಹೊಂದಿಯೇ ಇದ್ದ ಮಖ್ತಾಬ್‌ಗಳು ಪ್ರಾಥಮಿಕ ಶಿಕ್ಷಣಕ್ಕೆ ಮೀಸಲಾದವು. ಪ್ರತಿ ಮೊಹಲ್ಲಾ ಮತ್ತು ಹಳ್ಳಿಗಳಿಗೆ ಈ ಸವಲತ್ತನ್ನು ಕೊಡಮಾಡಿದ್ದರಿಂದ, ಮುಂದೆ ಉಚ್ಚ ಶಿಕ್ಷಣದ ಅವಶ್ಯಕತೆ ಅನಿಸಹತ್ತಿತು. ಮದ್ರಸಾಗಳು ಕಾಣಿಸಿಕೊಂಡವು. ವಿಸ್ತಾರಗೊಳ್ಳುತ್ತಲೇ ಇದ್ದ ರಾಜ್ಯದ ಆಡಳಿತಕ್ಕಾಗಿ ಸಿಬ್ಬಂದಿಯ ಕೊರತೆಯಾಗಿ ಇತರ ವಿಷಯಗಳ ಸೇರ್ಪಡೆಯಾಯಿತು. ಅಂಕಗಣಿತ, ಭೂಮಿತಿ, ತರ್ಕಶಾಸ್ತ್ರ, ಇತಿಹಾಸಗಳನ್ನು ಕಲಿಸಲಾರಭಿಸಿದರು. ಜೊತೆಗೆ ಇಸ್ಲಾಂ ಧರ್ಮದ ಸಂಪ್ರದಾಯಗಳು, ಯುನಾನಿ ಔಷಧೋಪಚಾರ ಪದ್ಧತಿಯ ಪರಿಚಯವನ್ನು ಮಾಡಿಕೊಡಲಾಗುತ್ತಿತ್ತು. ಮಖ್ತಾಬ್ ಶಿಕ್ಷಣ ಮುಗಿಸಿದವರಿಗೆ ಮಾತ್ರ ಮದ್ರಸಾಗಳಲ್ಲಿ ಪ್ರವೇಶ ದೊರೆಯುತ್ತಿತ್ತು.

ಪಂಡಿತರಾದ ಮುಲ್ಲಾ, ಮೌಲ್ವಿಗಳು ಸ್ವತಃ ವಿದ್ಯಾಕೇಂದ್ರಗಳನ್ನು ನಡೆಸುತ್ತಿದ್ದರು. ಸೂಟಿಯಾದ ಮಕ್ಕಳನ್ನು ಪಡೆದ ಪಾಲಕರು, ಅವರನ್ನು ಇಂಥ ಶಿಕ್ಷಕರ ಹತ್ತಿರ ಕರೆದೊಯ್ದು(91) ಪರಿಚಯಿಸುತ್ತಿದ್ದರು. ಹಣದ ಆಸೆಯಿಲ್ಲದೇ ವಿದ್ಯಾ ಪ್ರಸಾರಕ್ಕಾಗಿ ಜೀವನವನ್ನು ಮೀಸಲಿಟ್ಟ ಗುರುಗಳು(92) ವಿದ್ಯಾರ್ಥಿಯ ಆಸಕ್ತಿಗಳನ್ನು ಒರೆಗಲ್ಲಿಗೆ ಹಚ್ಚಿಯೇ ಅವರನ್ನು ಸ್ವೀಕರಿಸುತ್ತಿದ್ದರು(93). ಇಂತಹ ವಸತಿ-ವಿದ್ಯಾಲಯಗಳು ಬಹುಮಟ್ಟಿಗೆ ಋಷಿಯ ಆಶ್ರಮವನ್ನು ಹೋಲುತ್ತಿದ್ದವು. ವಿದ್ಯಾರ್ಥಿಗಳೆಲ್ಲ ನಸುಕಿನಲ್ಲಿ ಎದ್ದು ವೈಯಕ್ತಿಕ ಕೆಲಸಗಳೊಂದಿಗೆ ಸಾಮೂಹಿಕ ಪ್ರಾರ್ಥನೆ, ಚಟುವಟಿಕೆ, ಆಟ ಪಾಠಗಳನ್ನೂ ಮುಗಿಸಬೇಕಾಗಿತ್ತು. ಶಾಲೆಯ ಶುಚಿ, ಬಟ್ಟೆಬರೆಗಳ ಸ್ವಚ್ಛತೆಗಳನ್ನು ಕೈಕೊಂಡು ಪಾಠ-ಪ್ರವಚನಗಳತ್ತ ಗಮನ ಹರಿಸಬೇಕಾಗಿತ್ತು. ಹಸ್ತಪ್ರತಿಯ ಕೆಲವೇ ಪುಸ್ತಕಗಳು, ಪ್ರತಿಗಳು ಲಭ್ಯವಿದ್ದು, ಎಲ್ಲರಿಗೂ ಜೊತೆಯಾಗಿಯೇ ಓದಿಸಲಾಗುತ್ತಿತ್ತು(94). ಖುರಾನ್, ಕಂಠಪಾಠ ಮಾಡಿಸಲಾಗುತ್ತಿತ್ತು(95). ಸನಿಹದಲ್ಲಿ ಗುರುಹಿರಿಯರು ಇಲ್ಲದಿದ್ದಾಗ ಕೀಟಲೆ, ಧಾಂದಲೆ ಮಾಡಲು ಏನೇನೂ ಕೊರತೆ ಮಾಡಿಕೊಳ್ಳುತ್ತಿರಲಿಲ್ಲ(96). ಮಾಡಿದ ಅಪರಾಧಕ್ಕೆ ಅನುಗುಣವಾಗಿ ವಿವಿಧ ಶಿಕ್ಷೆಯನ್ನು ಕೊಡುತ್ತಿದ್ದರು. ಕಿವಿಗಳನ್ನು ಕೈಗಳಿಂದ ಹಿಂಡಿಕೊಳ್ಳುತ್ತ ತಲೆಕೆಳಗೆ ಮಾಡಿ ನಿಲ್ಲಿಸುವದು(97) ಸರ್ವೇಸಾಧಾರಣವಾಗಿತ್ತು.

ಹಸನಗಂಗೂ ಬಹಮನಿ(ಕ್ರಿ.ಶ.೧೩೪೭-೫೮)ಯನ್ನು ಬಹಮನಿ ರಾಜ್ಯ ಸಂಸ್ಥಾಪಕನಾದ ಮೊದಲನೆ ಅಲ್ಲಾವುದ್ದೀನ್ ಎಂದು ಇತಿಹಾಸಕಾರರು ಗುರುತಿಸುತ್ತಾರೆ. ತೀರ ಬಡತನದಲ್ಲಿ ಬೆಳೆದ ಅವನಿಗೆ ಅಕ್ಷರಾಭ್ಯಾಸ ಸಿಗುವ ಸಾಧ್ಯತೆಯೇ ಇಲ್ಲದ್ದರಿಂದ ಮುಂದೆ ಅರಸನಾದಾಗ ಶಿಕ್ಷಣದ ಮಹತ್ವವನ್ನು ಚೆನ್ನಾಗಿ ಅರಿಯುವಂತೆ ಆಯಿತು. ರಾಜಧಾನಿಯಾದ ಗುಲ್ಬರ್ಗದಲ್ಲಿ ಮಖ್ತಾಬ್-ಮದ್ರಸಾಗಳನ್ನು ಸ್ಥಾಪಿಸಿದ. ಅವನ ಮೊಮ್ಮಗ ಮುಹಮ್ಮದ ಶಹನು (ಕ್ರಿ.ಶ.೧೩೭೫-೭೮) ಅನಾಥಮಕ್ಕಳಿಗಾಗಿ ಶಾಲೆ, ಮದ್ರಸಾಗಳನ್ನು ಪ್ರಾರಂಭಿಸಿ ಹೊಟ್ಟೆ-ಬಟ್ಟೆಗೂ ಪೂರೈಸಿದ. ಗುಲಬರ್ಗಾ, ಬೀದರ, ಕಂದಹಾರ, ಎಲಿಚಪುರ್, ದೌಲತಾಬಾದ, ದಾಭೋಳ ಮೊದಲಾದ ಕಡೆಗಳಲ್ಲಿ ಇಂಥ ಶಾಲೆಗಳಿದ್ದವು. ಮೇಲು ವರ್ಗದವರ ಮಕ್ಕಳಿಗಾಗಿ ಒಂದು ಸೈನಿಕ ಶಾಲೆಯನ್ನು ಪ್ರಾರಂಭಿಸಿದ. ಸ್ವತಃ ಕವಿಯಾಗಿದ್ದು ಸರಳ ಜೀವನ ನಡೆಸುತ್ತಿದ್ದ.

ಫಿರೋಜಶಾಹನು (ಕ್ರಿ.ಶ.೧೩೯೮-೧೪೨೨) ಪ್ರತಿವರ್ಷ ತನ್ನ ಹಡಗುಗಳನ್ನು ಗೋವಾ ಬಂದರದಿಂದ ಪರ್ಶಿಯಾ, ತುರ್ಕಸ್ತಾನ, ಈಜಿಪ್ತಗಳಿಗೆ ಕಳಿಸಿ ಅಲ್ಲಿಯ ಪ್ರಸಿದ್ಧ ವಿದ್ವಾಂಸರನ್ನು ತನ್ನ ರಾಜ್ಯಕ್ಕೆ ಬರಮಾಡಿಕೊಂಡು ಅವರಿಗೆ ಸಕಲ ಸವಲತ್ತುಗಳನ್ನು ಕೊಡಮಾಡಿ ಶಿಕ್ಷಣದ ಮಟ್ಟವನ್ನು ಏರಿಸಿದ. ಕಾಲಕಾಲಕ್ಕೆ ಅವರನ್ನು ಕಂಡು ವಿಚಾರ ವಿಮರ್ಶೆ ನಡೆಸಿ ರಾಜ್ಯಾಡಳಿತವನ್ನು ದಕ್ಷ ರೀತಿಯಲ್ಲಿ ನಡೆಸಲು ಸಲಹೆ-ಸೂಚನೆಗಳನ್ನು ಪಡೆಯುತ್ತಿದ್ದ. ಪಟ್ಟವೇರಿದ ನಂತರ ತನ್ನ ಓದು-ಬರೆಹಗಳಿಗೆ ತಿಲಾಂಜಲಿ ಕೊಡದ ವಿರಳ ರಾಜರಲ್ಲಿ ಒಬ್ಬನಾಗಿದ್ದ. ವಾರಕ್ಕೆ ಮೂರು ದಿನ ಸಸ್ಯಶಾಸ್ತ್ರ, ಭೂಮಿತಿ, ತರ್ಕಶಾಸ್ತ್ರಗಳ ಮೇಲಿನ ಚರ್ಚೆಗೆ ಮೀಸಲು ಇಟ್ಟಿದ್ದ. ಹಗಲು ಸಮಯ ದೊರೆಯದಿದ್ದರೆ ರಾತ್ರೆ ಅವಕ್ಕೆ ಮೀಸಲು. ಹಲವಾರು ಭಾಷೆಗಳಲ್ಲಿ ಬಲ್ಲಿದನಿದ್ದು ಆಸ್ಥಾನಕ್ಕೆ ಬರುತ್ತಿದ್ದ ವಿದೇಶೀಯರೊಡನೆ ಅವರ ಭಾಷೆಯಲ್ಲಿಯೇ ಸಂಭಾಷಣೆ ನಡೆಸುವ ಹಂಬಲ ಅವನದಾಗಿತ್ತು. ಅರಬ್ಬೀ, ತುರ್ಕಿ, ಫ್ರೆಂಚ್, ಬಂಗಾಲಿ, ಗುಜರಾಥಿ, ತೆಲಂಗಣ(ತೆಲುಗು), ಮರಾಠಿ ಭಾಷೆಗಳಲ್ಲಿ ಅವನಿಗೆ ಪರಿಶ್ರಮವಿತ್ತೆಂದು ಹೇಳಲಾಗಿದೆ.[೩] ಈ ಭಾಷಾ ಪ್ರೇಮದಿಂದಾಗಿಯೋ ಏನೋ ವಿವಿಧ ರಾಜ್ಯ, ದೇಶಗಳ ಸುಂದರಿಯರನ್ನು ತನ್ನ ಝನಾನಕ್ಕೆ ಬರಮಾಡಿಕೊಂಡಿದ್ದು, ಅವರವರ ಭಾಷೆಯಲ್ಲಿಯೇ ಸರಸಸಲ್ಲಾಪ ನಡೆಸುತ್ತಿದ್ದನಂತೆ! ವಿರಾಮ ಸಿಕ್ಕಾಗ ಶಹಾನಾಮಾ ಓದುವದು, ಚರಿತ್ರೆ ಓದಿಸಿ ಕೇಳುವದು, ಮತ್ತು ಪರ್ಶಿಯನ್ ಕಾವ್ಯಶಾಸ್ತ್ರ-ವಿನೋದದಲ್ಲಿ ಸಮಯ ಕಳೆಯುತ್ತಿದ್ದ. ನಾಲ್ಕು ದಿನಕ್ಕೊಮ್ಮೆ ಖುರಾನಿನ ಹದಿನಾರು ಪುಟಗಳನ್ನು ಪ್ರತಿ ಮಾಡುತ್ತಿದ್ದ.[೪] ಒಳ್ಳೆಯ ಕವಿಯೂ ಆಗಿದ್ದ. ಪ್ರಸಿದ್ಧ ಖಗೋಲ ಮತ್ತು ಜ್ಯೋತಿಷ್ಯಶಾಸ್ತ್ರಜ್ಞ ಗಿಲಾನಿಯ ನೇತೃತ್ವದಲ್ಲಿ ನಕ್ಷತ್ರ ವೀಕ್ಷಣಾಲಯವೊಂದನ್ನು ದೌಲತಾಬಾದದಲ್ಲಿ ಕ್ರಿ.ಶ.೧೪೦೭ರಲ್ಲಿ ಕಟ್ಟಿಸಲು ಪ್ರಾರಂಭಿಸಿದ. ಆದರೆ ಗಿಲಾನಿಯ ಅಕಾಲ ಮರಣದಿಂದ ಅರ್ಧಕ್ಕೇ ಅದು ನಿಂತಿತು. ಈ ಕಾಲಕ್ಕೆ ಅಹಮ್ಮದನಗರದಲ್ಲಿ ಈತ ಕಟ್ಟಿಸಿದ ಗ್ರಂಥಾಲಯವನ್ನು ಚರಿತ್ರಕಾರ ಫೆರಿಶ್ತಾ ೧೭ನೇ ಶತಮಾನದಲ್ಲಿ ನೋಡಿದಾಗ ಸುಸ್ಥಿತಿಯಲ್ಲೇ ಇತ್ತು.[೫] ಇಮ್ಮಡಿ ಮುಹಮ್ಮದ ಶಹನೂ ಕವಿಯಾಗಿದ್ದು ಗಣಿತಶಾಸ್ತ್ರದಲ್ಲಿ ಪ್ರವೀಣನಾಗಿದ್ದ.

ಖ್ವಾಜಾ, ಸದ್ರುದ್ದೀನ ಮುಹಮ್ಮದ ಹುಸೇನಿ ಅಥವಾ ಬಂದಾನವಾಝ್, ಗೇಸಸು ದರಾಝ್, ಜನಸಾಮಾನ್ಯರಿಗೆ ಹಜರತ್ ಬಂದಾನವಾಝ್ ಎಂದು ಸುಪರಿಚಿತನಿರುವ ಸೂಫಿಸಂತ (ಕ್ರಿ.ಶ.೧೩೨೧-೧೪೨೨) ದಿಲ್ಲಿಯಲ್ಲಿ ಹುಟ್ಟಿದ ಈತ ದೌಲತಾಬಾದಕ್ಕೆ ಹೋಗಿ ಶಿಕ್ಷಣ ಮುಂದರಿಸಿದ. ಗ್ವಾಲೇರ, ಗುಜರಾಥಗಳಲ್ಲಿದ್ದು ನಂತರ ಗುಲಬರ್ಗಾಕ್ಕೆ ಬಂದ. ಮುಸ್ಲಿಂ ಸಂಪ್ರದಾಯಗಳು ಮತ್ತು ಧರ್ಮಶಾಸ್ತ್ರಗಳ ಮಿಗಿಲಾದ ಪಂಡಿತನಿದ್ದು ಈತನ ಖುರಾನಿನ ಮೇಲಿನ ಮತ್ತು ಹಾಡಿತ್(ಸಂಪ್ರದಾಯಗಳು)ಗಳ ಟೀಕು ಕೃತಿಗಳು ಪರ್ಶಿಯನ್ ಭಾಷೆಯಲ್ಲಿ ಪ್ರಮಾಣ ಗ್ರಂಥಗಳಾಗಿದ್ದವು.

ಬಂದಾನವಾಝ್ ಗುಲಬರ್ಗಾದಲ್ಲಿ ನೆಲೆಸಿದ್ದು, ಆಗತಾನೆ ರೂಪಗೊಳ್ಳುತ್ತಿದ್ದ 'ದಖ್ಖನಿ' ಭಾಷೆಗೆ ಹೆಚ್ಚಿನ ಬಲ ಬಂದಿತು. ಗುಜರಾಥಿ, ಮರಾಠಿ, ಫಾರಸಿ ಭಾಷೆಯ ಮಿಶ್ರಣದ ಈ ದಖ್ಖನಿ 'ಹಿಂದವಿ', ಉತ್ತರ ಭಾರತದ ಹಿಂದಿ ಅಥವಾ ಹಿಂದಿಗಿಂತ ಕೊಂಚ ಬೇರೆಯಾಗಿದ್ದು ಜನಸಾಮಾನ್ಯರ ಭಾಷೆಯಾಗಿತ್ತು. ಫಾರಸಿ ಅಥವಾ ಪರ್ಶಿಯನ್ ಭಾಷೆ, ಆಡಳಿತ ಭಾಷೆಯಾಗಿ ಮುಂದರಿದಿತ್ತು. ಜನಸಾಮಾನ್ಯರ ಭಾಷೆಯನ್ನೇ ಬಂದಾ ನವಾಝ್, ಬೋಧ ಭಾಷೆಯಾಗಿ ಬಳಸಿ, ಗದ್ಯ ಪದ್ಯದ ಕೃತಿಗಳನ್ನು ದಖ್ಖನಿಯಲ್ಲಿ ಬರೆದ ಆತನ "ಮೇರಾಜುಲ್ ಆಷಿಕಿನ್" ಮುಖ್ಯ ಮತ್ತು ಜನಪ್ರಿಯ ಕೃತಿಯಾಗಿದೆ. ಬಹಮನಿಗಳ ರಾಜಗುರುವಾಗಿದ್ದಂತೆ ಜನಸಾಮಾನ್ಯರ ಪ್ರೀತಿ-ವಿಶ್ವಾಸಗಳನ್ನೂ ಗಳಿಸಿದ. ಗುಲಬರ್ಗಾದ ಆತನ ದರ್ಗಾ ಹಿಂದು-ಮುಸಲ್ಮಾನರಿಗೆ ಕೂಡಿಯೇ ಪವಿತ್ರಸ್ಥಳವಾಗಿದೆ. ದಖ್ಖನಿ ಭಾಷೆಯಲ್ಲಿ ಆದಿಕರ್ತೃವನ್ನು ಪಡೆದ ಹೆಮ್ಮೆ ಕರ್ನಾಟಕದ್ದು.

ಬಂದಾ ನವಾಝನಿಂದಾಗಿ ಸೂಫಿ ತತ್ವಜ್ಞಾನ ದಖ್ಖನಿನಲ್ಲಿ ಪ್ರಸಾರವಾಗಲಾರಂಭಿಸಿ ಬಹಮನಿ ರಾಜರಿಗೆ ಹೆಚ್ಚಿನ ನೈತಿಕ ಬಲ ಒದಗಿಸಿತು. ಸಾಮಾಜಿಕ ಅಂತರಗಳನ್ನು ಅಳಿಸಿ ಹಾಕುವದು, ಮಾನವ ಸಮಾನತೆಯನ್ನು ಬೋಧಿಸುವದು ಮತ್ತು ದೀನ ವರ್ಗದವರಿಗೆ ಸಾಂತ್ವನ ನೀಡುವದು ಮುಖ್ಯ ಉದ್ದೇಶವಾಗಿ ಸೂಫಿ ಸಂತರು, ಬಲುಬೇಗ ಜಾತಿ-ಮತಗಳ ಭೇದವಿಲ್ಲದೇ ಎಲ್ಲರ ಪ್ರೀತಿ-ಆದರಗಳಿಗೆ ಪಾತ್ರರಾದರು. ಗುಲಬರ್ಗಾ, ದೌಲತಾಬಾದ, ಬುರ್ಹಾನ್‌ಪುರ, ಔರಂಗಾಬಾದಗಳು ಈ ಪಂಥದ ಕೇಂದ್ರಗಳಾಗಿ ಬೆಳೆದವು.[೬]

ವ್ಯಾಪಾರಿಯಾಗಿ ಭಾರತಕ್ಕೆ ಬಂದಿದ್ದ ಪರ್ಷಿಯದ ಮಹಮ್ಮದ್ ಗವಾನನು ಕ್ರಿ.ಶ.೧೪೫೩ರಲ್ಲಿ ಬೀದರದಲ್ಲಿ ಇಳಿದ ನಂತರ ಬಹಮನಿಗಳ ಶಿಕ್ಷಣ ಪದ್ಧತಿಗೆ ಹೊಸ ಜೀವಕಳೆ ಬಂದಂತಾಯಿತು. ಚಿಕ್ಕಂದಿನಿಂದಲೇ ಅಧ್ಯಯನಶೀಲನಾಗಿದ್ದ ಆತ ಗಣಿತ, ಇಸ್ಲಾಂ ಧರ್ಮಶಾಸ್ತ್ರ ಮತ್ತು ಪರ್ಷಿಯನ್ ಭಾಷೆಗಳಲ್ಲಿ ಮಧ್ಯಪೂರ್ವದ ರಾಜ್ಯಗಳಿಂದ ಮನ್ನಣೆಗೆ ಪಾತ್ರನಾಗಿದ್ದ. ಆತನ ಪಾಂಡಿತ್ಯದ ಬಗ್ಗೆ ಬಹಮನಿ ಬಾದಶಹರಲ್ಲಿ ಆಸಕ್ತಿ-ಗೌರವ ಮೂಡಿ, ಕೂಡಲೆ ರಾಜಸೇವೆಯಲ್ಲಿ ನೇಮಿಸಿಕೊಂಡರು. ತನ್ನ ದುಡಿಮೆ, ಸೌಜನ್ಯ, ಸರಳತೆ, ಚಾಣಾಕ್ಷತನ ಮತ್ತು ಬುದ್ಧಿಮತ್ತೆಗಳಿಂದಾಗಿ ಬಲುಬೇಗ ಅಲ್ಲಾಉದ್ದೀನ್ ದೊರೆಯ ಆಪ್ತನಾಗಿ ಮೇಲಧಿಕಾರವಹಿಸಿಕೊಂಡ. ಮುಂದೆ ಹುಮಾಯೂನ್ ದೊರೆಯ(೧೪೫೮-೬೧)

ಪ್ರಧಾನಮಂತ್ರಿಯಾದ. ನಂತರ ಪಟ್ಟವೇರಿದ ಮೂರನೆಯ ಮುಹಮ್ಮದ್(೧೪೬೩-೮೨) ಎಳೆಯ ಬಾಲಕನಾಗಿದ್ದಾಗಿನಿಂದಲೂ ಅವನ ವಿದ್ಯಾಭ್ಯಾಸದ ಸಂಪೂರ್ಣ ಜವಾಬ್ದಾರಿಯನ್ನು ಗವಾನನೇ ವಹಿಸಿಕೊಂಡ. ರಾಜ್ಯದ ಪ್ರಧಾನಿ, ಭಾವೀ ರಾಜನಿಗೆ ಶಿಕ್ಷಕನಾದದ್ದು ಒಂದು ಅಪೂರ್ವ ಐತಿಹಾಸಿಕ ಘಟನೆ. ಮುಹಮ್ಮದ ಶಾಹ ಬಹಮನಿ, ಗವಾನನಲ್ಲಿ ಸಂಪೂರ್ಣ ವಿಶ್ವಾಸ ಮತ್ತು ಪೂಜ್ಯಭಾವನೆಗಳನ್ನು ಇರಿಸಿಕೊಂಡಿದ್ದ.

ಗವಾನನು ಬುದ್ಧಿಮತ್ತೆಯಿಂದ ಖಾಸಗಿ ವ್ಯಾಪಾರದಲ್ಲಿ ಹಣ ತೊಡಗಿಸಿದ್ದರಿಂದ ಅಂದಿನ ದಿನಗಳಲ್ಲಿಯೂ ಆತನಿಗೆ ಇಪ್ಪತ್ತಾರು ಲಕ್ಷ ರೂಪಾಯಿಗಳ ಆಸ್ತಿಯಿತ್ತು. ಗವಾನನ ನಿವಾಸವನ್ನು ಒಂದು ನೂರು ಸಶಸ್ತ್ರ ಸೈನಿಕರು, ಹತ್ತು ದೀಪಧಾರಿಗಳು ಕಾವಲು ಇಡುತ್ತಿದ್ದರು ಎಂದು ರಷಿಯನ್ ಪ್ರವಾಸಿ ನಿಕಿಟಿನ್ ಬರೆದಿಟ್ಟಿದ್ದಾನೆ. ಆದರೆ ತನ್ನ ಸಂಪತ್ತನ್ನೆಲ್ಲ ಗವಾನ್, ವಿದ್ಯಾಪ್ರಸಾರಕ್ಕೆ ಮೀಸಲಿಟ್ಟಿದ್ದ. ಅಂದಿನ ವಿಶ್ವವಿಖ್ಯಾತ ಮುಸ್ಲಿಂ ವಿದ್ಯಾಕೇಂದ್ರಗಳಾದ ಖೊರಾಸಾನ್, ರಬ್ಬತ್‌ಗಳಲ್ಲಿಯಂಥವುಗಳ ಮಾದರಿಯ ಮದ್ರಸಾವನ್ನು ಬೀದರ್ ನಗರದಲ್ಲಿ ಕ್ರಿ.ಶ.೧೪೭೨ರಲ್ಲಿ ಕಟ್ಟಿಸಲಾರಂಭಿಸಿದ. ಹಣದ ಹೊಳೆಯನ್ನೆ ಹರಿಸಿ ಮೂರು ವರ್ಷಗಳ ನಂತರ ನಿಲ್ಲಿಸಿದ ಭವ್ಯ ಕಟ್ಟಡ ಬೀದರದ ಕಣ್ಣಗೊಂಬೆಯಾಯಿತು. ಪ್ರಶಸ್ತವಾದ ಸ್ಥಳದಲ್ಲಿ ವಿಸ್ತಾರವಾದ ಹೊರಾಂಗಣವನ್ನು ಹೊಂದಿ ಇದು ಮೂರು ಅಂತಸ್ತಿನ ಎತ್ತರ ಪಡೆದಿದೆ. ನಾಲ್ಕೂ ಮೂಲೆಗೆ ನೂರು ಅಡಿಯೆತ್ತರದ ಮಿನಾರ್(ಗೋಪುರ)ಗಳಿದ್ದವು. ಮೂವತ್ತಾರು ಕೊಠಡಿಗಳು ವಿದ್ಯಾರ್ಥಿಗಳಿಗೆ, ಆರು ಕೊಠಡಿಗಳು ಪ್ರಾಧ್ಯಾಪಕರಿಗೆ ಮೀಸಲಾಗಿದ್ದು ದೊಡ್ಡ ವ್ಯಾಖ್ಯಾನ ಶಾಲೆ ಮತ್ತು ಪ್ರಾರ್ಥನಾ ಮಂದಿರಗಳು ಈ ಮದ್ರಸಾದಲ್ಲಿದ್ದವು.[೬] ಮದ್ರಸಾದ ಗೋಡೆಗಳಲ್ಲಿ ಖುರಾನದೊಳಗಿನ ಬೋಧಪ್ರದ ವಾಕ್ಯಗಳನ್ನು ಬಣ್ಣಬಣ್ಣದ ಹಂಚುಗಳಲ್ಲಿ ಬಹು ದೂರದವರೆಗೆ ಕಾಣುವಂತೆ ಕೆತ್ತಲಾಗಿತ್ತು. ಸಂಸ್ಥೆಯ ಪ್ರಾಚಾರ್ಯ ಸ್ಥಾನಕ್ಕೆ ಪರ್ಷಿಯದಿಂದ ಹಲವು ವಿದ್ವಾಂಸರನ್ನು ಗವಾನ್, ಆಮಂತ್ರಿಸಿದನು. ಆದರೆ ಕಠಿಣ ಪ್ರಯಾಣ, ಆಯಾಸ, ವಯಸ್ಸುಗಳ ಕಾರಣದಿಂದಾಗಿ ಯಾರೂ ಬರಲಿಲ್ಲ. ಅಂತೆಯೇ ಸ್ಥಳೀಯ ವಿದ್ವಾಂಸ ಶೇಖ್ ಇಬ್ರಾಹಿಂ ಮುಲ್ತಾನಿಯನ್ನು ಪ್ರಾಚಾರ್ಯನಾಗಿ ನೇಮಿಸಿದ. ನಂತರ ಇಬ್ರಾಹಿಂ, ಸಹಸ್ರಾರು ಯುವಕರಿಗೆ ವಿದ್ಯಾದಾನದ ವ್ಯವಸ್ಥೆ ಮಾಡಿದನಲ್ಲದೇ ರಾಜ್ಯದ ಮುಖ್ಯ ಕಾಜಿಯೂ ಆದ. ಈ ಮದ್ರಸಾದಲ್ಲಿ ಮೂರು ಸಹಸ್ರ ಗ್ರಂಥಗಳ ವಾಚನಾಲಯವಿತ್ತು.[೭] ಗವಾನನ ಲೇಖಗಳು ಪರ್ಷಿಯ ಮತ್ತಿತರ ದೇಶಗಳಲ್ಲಿ ಪ್ರಕಟವಾಗುತ್ತಿದ್ದವು. ವಿರಾಮ ಸಿಕ್ಕಾಗ ಮದ್ರಸಾಕ್ಕೆ ಹೋಗಿ ಬೋಧನೆ, ಅಧ್ಯಯನ, ಸಂಶೋಧನೆಗಳಲ್ಲಿ ಗವಾನ್ ತೊಡಗಿರುತ್ತಿದ್ದ. "ದಿವಾನಿ-ಅಶ್ರ" ಗ್ರಂಥವನ್ನು ರಚಿಸಿದನು.

* * *

ಗವಾನನ ವರ್ಚಸ್ಸಿನಿಂದ ಸ್ಥಾನೀಯ ಮುಸಲ್ಮಾನರಿಗೆ ಈರ್ಷೆ ಉಂಟಾಯಿತು. ಅವನು ಮಹಮ್ಮದೀಯ ಪಕ್ಷಪಾತಿಯಿದ್ದುದರಿಂದ ಹಿಂದುಗಳೂ ಅಸಂತುಷ್ಟರಾಗಿದ್ದರು. ಅಂತೆಯೇ

"ಈ ವಿದೇಶೀಯ"ನು ಒಳಾಡಳಿತದಲ್ಲಿ ಹೆಚ್ಚೆಚ್ಚು ಹಸ್ತಕ್ಷೇಪ ಮಾಡುತ್ತಿದ್ದಾನೆಂದು ಗುಲ್ಲೆಬ್ಬಿಸಿದರು. ಸ್ಥಳೀಯ ದಖ್ಖನಿಗಳ ಮುಖಂಡ, ಮಲಿಕ ಹುಸೇನನು ಒಳಸಂಚು ಹೂಡಿ, ಗವಾನನು ಓಡಿಸ್ಸದ ಅರಸನಿಗೆ ಬಹಮನಿಗಳ ಮೇಲೆ ದಂಡೆತ್ತಿ ಬರಲು ವಿನಂತಿಸಿದನು, ಎಂಬ ಖೊಟ್ಟಿ ಪತ್ರ ತಯಾರಿಸಿ, ಗವಾನನ ಮುದ್ರೆಯನ್ನೂ ಒತ್ತಿಸಿ ದೊರೆ ಮುಹಮ್ಮದನ ಕೈಸೇರುವಂತೆ ನೋಡಿಕೊಂಡನು. ಕುಡಿದು ಅಮಲೇರಿದ ದೊರೆ ಅದರ ಸತ್ಯಾಂಶವನ್ನು ಅರಿತುಕೊಳ್ಳುವ ಗೋಜಿಗೆ ಹೋಗದೇ, ಗವಾನನಿಗೆ ಹೇಳಿಕಳಿಸಿ, "ರಾಜದ್ರೋಹಕ್ಕೆ ಏನು ಶಿಕ್ಷೆ?" ಎಂದು ವಿಚಾರಿಸಿದ. ಪ್ರಶ್ನೆಯ ಹಿನ್ನೆಲೆ ಅರಿಯದ ಗವಾನನು "ಮರಣ ದಂಡನೆ" ಎಂದು ಉತ್ತರಿಸಿದ. ಪತ್ರವನ್ನು ತೋರಿಸಿದ ಅರಸನಿಗೆ ಮೊಹರು ತನ್ನದು ಎಂದು ಒಪ್ಪಿಕೊಂಡರೂ, ಒಕ್ಕಣಿಕೆಯ ಬಗ್ಗೆ ತನಗೆ ಏನೂ ಗೊತ್ತಿಲ್ಲವೆಂದು ತಿಳಿಸಿದರೂ, ಪರಾಮರ್ಶಿಸಿ ನೋಡುವ ಸ್ಥಿತಿಯಲ್ಲಿ ಮುಹಮ್ಮದನು ಇರಲಿಲ್ಲ. ಖಡ್ಗಧಾರಿಯು ರುಂಡ ಹಾರಿಸಲು ಬಂದಾಗ ಮಹಮ್ಮದ ಗವಾನನು "ಈ ಮುದಿಯನಿಗೆ ಮರಣ, ಮಹೋತ್ಸವದಂತೆ. ಆದರೆ ಅರಸನಾದವನು ನ್ಯಾಯ-ಅನ್ಯಾಯಗಳನ್ನು ಇಷ್ಟೊಂದು ಲಘುವಾಗಿ ಅಳವಡಿಸಿಕೊಳ್ಳಬಾರದು" ಎಂದು ಕೊನೆಯುಸಿರು ಎಳೆದ. ಗವಾನನ ಸ್ನೇಹಿತ ಸೈಯದ್‌ಖಾನ್ ಗಿಲಾನಿಗೂ ಮರಣ ದಂಡನೆ ವಿಧಿಸಲಾಯಿತು. ಆಸ್ತಿಯನ್ನು ನಿರೀಕ್ಷಿಸಿ ಗವಾನನ ಮನೆಯನ್ನು ಶೋಧಿಸಿದಾಗ ದೊರೆತದ್ದು ಕೆಲ ಮಣ್ಣಿನ ಮಡಕೆಗಳು, ಚಾಪೆ ಮತ್ತು ಆತ ಬರೆದ ನೂರನಾಲವತ್ತನಾಲ್ಕು ಪತ್ರಗಳು ಮಾತ್ರ. ಮುಂದೆ ಈ ಪತ್ರಗಳು 'ರೌಝುತ್-ಉಲ್-ಇನ್ಶಾ' ಎಂಬ ಹೆಸರಿನಲ್ಲಿ ಪ್ರಸಿದ್ಧವಾದವು. ಗವಾನನ ಮದ್ರಸಾಕ್ಕೆ ಗ್ರಹಣ ಹಿಡಿಯಿತು. ದೊರೆಯ ಕ್ರೌರ್ಯದಿಂದಾಗಿ ಕಲಿಯುವವರು, ಕಲಿಸುವವರು ದೂರವಾದರು. ಔರಂಗಜೇಬನು ಕ್ರಿ.ಶ.೧೬೫೭ರಲ್ಲಿ ಬೀದರ್‌ನ್ನು ಗೆದ್ದುಕೊಂಡಾಗ ಈ ಕಟ್ಟಡವನ್ನು ಮದ್ದು-ಗುಂಡುಗಳ ಗೋದಾಮು ಎಂದು ಬಳಸಿದ! ದುರ್ದೈವದಿಂದ ಹೊಡೆದ ಮಿಂಚಿನಿಂದ ಮದ್ದುಗುಂಡಿಗೆ ಬೆಂಕಿಬಿದ್ದು ಮದ್ರಸಾದ ಹೆಚ್ಚಿನ ಭಾಗ ಮತ್ತು ಮೂರು ಸ್ತಂಭಗಳು ನೆಲಸಮವಾದವು.[೯] ಈಗ ಒಂದೇ ಮಿನಾರ್ ಮತ್ತು ಕೆಲ ಕೊಠಡಿಗಳು ಉಳಿದುಕೊಂಡಿವೆ(98).

ಬಹಮನಿಗಳಂತೆ ವಿಜಾಪುರದ ಆದಿಲ್‌ಶಾಹಿಗಳ ಆಳಿಕೆಯಲ್ಲಿ(ಕ್ರಿ.ಶ.೧೪೮೯-೧೬೮೬) ಮಸೀದೆಗಳ ಅಂಗವಾಗಿ ಮಖ್ತಾಬ್‌ಗಳನ್ನು ಕಟ್ಟುವದು ಮುಂದರಿಯಿತು. ಹೆಚ್ಚಿನವುಗಳಿಗೆ ರಾಜಾಶ್ರಯವಿದ್ದಂತೆ, ಸರದಾರರೂ, ಧನಿಕರೂ, ವ್ಯಾಪರಿಗಳೂ, ಧಾರ್ಮಿಕ ಮನೋಭಾವನೆಯಿಂದಲೋ, ವರ್ಚಸ್ಸು ಬೀರಲೆಂದೋ ಕೆಲ ಮಖ್ತಾಬ್‌ಗಳಿಗೆ ಧನಸಹಾಯ ನೀಡುತ್ತಿದ್ದರು. ದಾನಿಗಳೊಂದಿಗೆ ಊರ್ಜಿತಾವಸ್ಥೆ ಹೊಂದಿದ ಇಂಥವು ಅವರೊಂದಿಗೇ ಮಣ್ಣಾಗುತ್ತಿದ್ದವು.

ಮಖ್ತಾಬ್‌ಗಳಲ್ಲಿ ಪ್ರಾಥಮಿಕ ಶಿಕ್ಷಣಾಭ್ಯಾಸವಾಗುತ್ತಿತ್ತು. ಮಗುವಿಗೆ ನಾಲ್ಕು ವರ್ಷ, ನಾಲ್ಕು ತಿಂಗಳು, ನಾಲ್ಕು ದಿನ ತುಂಬಿದಾಗ ಅಕ್ಷರಾಭ್ಯಾಸ ಪ್ರಾರಂಭಿಸುವ 'ಬಿಸ್ಮಿಲ್ಲಾ' ವಿಧಿಯಿರುತ್ತಿತ್ತು. ವಿದ್ಯಾರ್ಥಿಗೆ ಜರಿಟೋಪಿ, ಮಖಮಲ್ಲಿನ ಬಟ್ಟೆ ತೊಡಿಸಿ, ಆಪ್ತೇಷ್ಟರನ್ನು ಆಮಂತ್ರಿಸಿ, ಊಟ ಹಾಕಿಸುತ್ತಿದ್ದರು. ಊರ ಮುಲ್ಲಾನು ಖುರಾನ್ ಪಠಿಸಿ, ಮಗುವಿಗೆ

'ಬಿಸ್ಮಿಲ್ಲ' ಹೇಳಿಸುತ್ತಿದ್ದ. ಆಗ ಖುರಾನದ ಕೆಲ ವಾಕ್ಯಗಳನ್ನು ಹೇಳಿಸುವದು ವಾಡಿಕೆ. ಮಗು ಅತ್ತು ರಂಪ ಮಾಡಿದರೆ, ಬರೇ ಬಿಸ್ಮಿಲ್ಲ ಹೇಳಿಸಿ, ವಿದ್ಯಾದೀಕ್ಷೆ ಕೊಡಿಸುತ್ತಿದ್ದರು. ಮರುದಿನದಿಂದ ಹತ್ತಿರದ ಮಖ್ತಾಬಿಗೆ ಕಳಿಸುತ್ತಿದ್ದರು. ಅಲ್ಲಿ ಫಾರಸಿ ಪದ್ಯ, ನೀತಿ ಕಥೆಗಳಾದ ಗುಲಿಸ್ತಾನ್ ಮತ್ತು ಬುಸ್ತಾನ್‌ಗಳಿಂದ ಪಾಠ ಪ್ರಾರಂಭವಾಗುತ್ತಿತ್ತು. 'ಫತಹ' ಗೀತೆಗಳನ್ನು ರಾಗವಾಗಿ ಹಾಡಿಸುತ್ತಿದ್ದರು. ನಂತರ ಫಾರಸಿ ಅಕ್ಷರಗಳನ್ನು ಕಲಿಸುತ್ತಿದ್ದರು. ಅತ್ಯಂತ ಸುಂದರವಾಗಿ ಬರೆಯುವವನಿಗೆ ಮೆಚ್ಚಿಗೆ ಕಾದಿರುತ್ತಿತ್ತು. ಅಸಡ್ಡೆ ಮಾಡಿದವನಿಗೆ ಶಿಕ್ಷೆ ಕಟ್ಟಿಟ್ಟಿದ್ದೇ. ಅಂಕಗಣಿತ, ಪರಿವರ್ತನೆಯ ವಿಧಾನ, ಅರ್ಜಿ ಬರೆಯುವದು, ಪತ್ರವ್ಯವಹಾರ, ಆಡಳಿತ ಪರಿಭಾಷೆಯ ಪರಿಚಯ, ಫಾರಸಿ ಭಾಷೆಯ ವ್ಯಾಕರಣ, ಕೆಲವೊಮ್ಮೆ ಅರಬ್ಬಿ ಭಾಷೆಯ ಸ್ಥೂಲ ಪರಿಚಯವಾದಾಗಲೇ ಪ್ರಾಥಮಿಕ ಶಿಕ್ಷಣ ಮುಕ್ತಾಯವಾಗುತ್ತಿತ್ತು.[೧೦]

ಮದರಸಾಗಳಲ್ಲಿ ಸಂಗೀತ, ಕಲೆ, ಭಾಷೆಗಳಿಗೆ ಪ್ರಾಧಾನ್ಯ ಬಂದಿತು. ಬಲದಿಂದ ಎಡಕ್ಕೆ ಬರೆಯುವ ಫಾರಸೀ ಅಕ್ಷರಮಾಲೆ, ಸುಂದರ ವಿನ್ಯಾಸಕ್ಕೆ ಹೇಳಿಮಾಡಿಸಿದಂಥಾದ್ದು. ನದಿಯಂತೆ ಉಗಮದಲ್ಲಿ ಕಿರಿದಾಗಿಸಿ ಆಮೇಲೆ ಹಿಗ್ಗಿಸುತ್ತ ಹೋಗಬಹುದು. ದುಂಡುದುಂಡಾಗಿ ಗಂಟುಗಳನ್ನು ಹೆಣೆಯಬಹುದು. ಹತ್ತಾರು ಶಬ್ದಗಳನ್ನು ಒತ್ತಾಗಿ ಬರೆಯಬಹುದು. ಇಲ್ಲವೇ ಒಂದೇ ಒಂದು ಶಬ್ದವನ್ನು ಮಾರುದ್ದವಾಗಿಯೂ ಹಿಗ್ಗಿಸಬಹುದು. ಪರಿಣಿತನು ರೂಪಿಸಿದ ಅಕ್ಷರವಿನ್ಯಾಸ, ಚಿತ್ರಕಲೆಯಷ್ಟೇ ಆಕರ್ಷಕವಾಗಿರುತ್ತದೆ. ಧರ್ಮಿಷ್ಠರು ಖುರಾನದ ನೂರಾ ಹದಿನಾಲ್ಕು 'ಶರಬ್'ಗಳನ್ನು ಅಲ್ಲಾ ಮೆಚ್ಚುವಂತೆ ಬರೆಯಲು ಯತ್ನಿಸಿದರೆ, ರಸಿಕರು ಉಮರಖಯ್ಯಾಮನ ರುಬಾಯತ್‌ಗಳಂತೆ ಮತ್ತೇರಿಸುವಂತೆ ತಮ್ಮ ಅಕ್ಷರ ವಿನ್ಯಾಸವಿರಬೇಕೆಂದು ಕನಸು ಕಾಣುತ್ತಿದ್ದರು. ಕಾಲಾಂತರದಲ್ಲಿ ಮುಸ್ಲಿಂ ಅಕ್ಷರ ವಿನ್ಯಾಸದಲ್ಲಿ ಏಳು ಶೈಲಿಗಳು ಕಾಣಿಸಿಕೊಂಡವು. ಖುರಾನ್ ಸಂದೇಶಗಳನ್ನು ಬರೆಯಲು 'ಖುಫಿ' ಶೈಲಿಯನ್ನು ಬಳಸಿದರೆ, 'ನಸ್ಕ್' ಮಾದರಿಯನ್ನು ಹಿಗ್ಗಿಸಿ ಬರೆಯುವ ಅನುಕೂಲದಿಂದಾಗಿ ಎಲ್ಲರಿಗೂ ಬಳಸಲು ಸಾಧ್ಯವಾಗಿತ್ತು. 'ತುಲುಪ್' ಶೈಲಿಯನ್ನು ವೀರರ, ಮೃತರ ಹಿರಿಮೆ ಸಾರುವದಕ್ಕೆ ಬಳಸುವದು ಹೆಚ್ಚು. ಈ ಅಕ್ಷರಗಳನ್ನು ಬರೆಯಲು ಬಿದಿರಿನ ದಪ್ಪ ಲೇಖನಿ ಮತ್ತು ಕರಿ ಇಲ್ಲವೇ ನಾಸಿಪುಡಿ ಮಸಿಯನ್ನು ಬಳಸಲಾಗುತ್ತಿತ್ತು. ಆಕರ್ಷಣೆ ಹೆಚ್ಚಿಸಲು ಬೆಳ್ಳಿ, ಬಂಗಾರದ ಗಿಲೀಟನ್ನೂ ಉಪಯೋಗಿಸುತ್ತಿದ್ದರು. ಈ ಕಲೆಯನ್ನು ಕರಗತ ಮಾಡಿಕೊಂಡವರಿಗೆ 'ಖಾಸನವೀಸ್' (ಖಾಸನೀಸ್) ಎಂದು ಗುರುತಿಸಿ ತುಂಬ ಗೌರವದಿಂದ ನೋಡಿಕೊಳ್ಳುತ್ತಿದ್ದರು. ವಿಜಾಪುರದ ಆದಿಲ್‌ಶಾಹಿಗಳ ಕಾಲದಲ್ಲಿ ಕೋಟೆ-ಕೊತ್ತಳ, ಎತ್ತರದ ಕಟ್ಟಡಗಳು, ಮಿನಾರ್‌ಗಳು, ಬೆಳ್ಳಿ ಬಂಗಾರ ಹಿತ್ತಾಳೆ ಪಾತ್ರೆಪಡಗ, ನಾಣ್ಯಗಳು ಅಕ್ಷರ ವಿನ್ಯಾಸದಿಂದ ಕೂಡಿರುತ್ತಿದ್ದವು. ಶಿಕ್ಷಣದಲ್ಲಿ ಕಂಠಪಾಠದ ಮಹತ್ವ ಒಂದಿಷ್ಟು ಕಡಿಮೆಯಾಗದಿದ್ದರೂ, ಕಾಗದದ ಬಳಕೆ ರೂಢಿಯಲ್ಲಿ ಬಂದು ಸುಂದರವಾದ ಕೈ ಬರೆಹದ ಪುಸ್ತಕಗಳು, ಆತ್ಮ ಚರಿತ್ರೆ, ಕವಿತೆ, ಚರಿತ್ರೆಯ ರೂಪಗಳನ್ನು ಅಳವಡಿಸಿಕೊಂಡು ಉಳ್ಳವರ ಕೈಗಳಲ್ಲಿ ನಲಿಯತೊಡಗಿದವು. ಇಬ್ರಾಹಿಂ ಆದಿಲ್‌ಶಾಹನು ತನ್ನ ಪ್ರಸಿದ್ಧ ಸಂಗೀತಶಾಸ್ತ್ರದ ಕೃತಿ, ಕಿತಾಬ್-ಏ-ನವರಸ್ ಗ್ರಂಥಕ್ಕೆ ಸುಂದರ

ಅಕ್ಷರವಿನ್ಯಾಸ ಮತ್ತು ಚಿತ್ರಗಳನ್ನು ರಚಿಸಿಕೊಟ್ಟ ಮೀರ್ ಖಲಿಯಸ್ ಶಹನನ್ನು ತನ್ನ ಸಿಂಹಾಸನದ ಮೇಲೆ ಕುಳ್ಳಿರಿಸಿ ಗೌರವಿಸಿದ್ದನಂತೆ!

ವಿದ್ಯಾರ್ಥಿಗಳು ಪರ್ಶಿಯನ್ ಭಾಷೆಯಲ್ಲಿ ಪಾಠಗಳನ್ನು ಉರುಹಾಕಿದರೂ ಅದು ವ್ಯಕ್ತಿ ವಿಕಾಸಕ್ಕೆ ತಕ್ಕ ಮಾಧ್ಯಮವಲ್ಲವೆಂದು ಮನಗಂಡ ಆದಿಲ್‌ಶಹ ಅರಸರು, ಸ್ಥಳೀಯ ಭಾಷೆ, ದಖ್ಖನಿ ಹಿಂದಿಗೆ ಪ್ರೋತ್ಸಾಹವಿತ್ತರು. ಇಷ್ಟು ಹೊತ್ತಿಗೆ ಉತ್ತರದಿಂದ ಬಂದು ಠಾಣ್ಯ ಹಾಕಿದ ಸೈನಿಕರು ಅರಬ್ಬೀ, ಫಾರಸಿ, ತುರ್ಕಿ ಮಿಶ್ರಿತ ಹಿಂದಿಯನ್ನು ಬಳಕೆಯ ಭಾಷೆಯಾಗಿ ರೂಢಿಯಲ್ಲಿ ತಂದು ಬಿಟ್ಟಿದ್ದರು.[೧೧] ವ್ಯಾಪಾರಿ ವರ್ಗದ ಪ್ರೋತ್ಸಾಹವೂ ಇದಕ್ಕೆ ದೊರೆತು ಉರ್ದು(=ಠಾಣ್ಯ) ಭಾಷೆ ರೂಪ ತಾಳಿತು. ಫಾರಸಿ ಪ್ರಭಾವ ಹೆಚ್ಚಿದ್ದರೂ ಉರ್ದು, ಭಾರತೀಯ ವ್ಯಾಕರಣದ ಚೌಕಟ್ಟನ್ನು ಹೊಂದಿದೆ. ಲಿಪಿ ಮಾತ್ರ ಅರಬ್ಬಿ. ಬಲದಿಂದ ಎಡಕ್ಕೆ ಬರೆಯಲಾಗುತ್ತಿದೆ.

ಸಾಹಿತ್ಯಿಕ ಭಾಷೆಯಾಗಿ ದಖ್ಖನಿ, ಹೊಸ ಆಯಾಮವನ್ನು ಪಡೆಯಿತು. ಬಿಜಾಪುರದಲ್ಲಿ ಮೊದಲ ಬಾರಿಗೆ ಜನ್ಮ ತಾಳಿದ ಮುಶಾಯರಾ ಅಥವಾ ಕವಿಮೇಳಗಳನ್ನು ಸ್ಪರ್ಧೆಯ ರೂಪದಲ್ಲಿ ಏರ್ಪಡಿಸಿದ ಶ್ರೇಯಸ್ಸು ಆದಿಲ್‌ಶಾಹಿಗಳಿಗೆ ಸಲ್ಲುತ್ತದೆ. ರಸಿಕರಿಗೆ, ಧನಿಕರಿಗೆ, ಅಧಿಕಾರಿಗಳಿಗೆ ಜನಸಾಮಾನ್ಯರಿಗೆ ಮನರಂಜನೆಯ ಜೊತೆಗೆ ಶೈಕ್ಷಣಿಕ ಸುಧಾರಸವನ್ನೂ ನೀಡಿ ಶೀಘ್ರವೇ ಜನಪ್ರಿಯವಾಯಿತು. ಉತ್ತರಕ್ಕೂ ಮುಶಾಯರಾ, ಬಲುಬೇಗ ತಲುಪಿ ದಖ್ಖನಿ ಭಾಷೆಯ ದೃಢತೆ, ಹಿತಮಿತ ಲಾಲಿತ್ಯಗಳನ್ನು ಗಮನಿಸಿ ತಮ್ಮ ಸಾಹಿತ್ಯವೇ ಉತ್ತಮವೆಂದು ನಂಬಿದ ಔತ್ತರೇಯರು, ಮೆಚ್ಚಿಕೊಳ್ಳುವಂತಾಯಿತು.

ಮುಶೈರಾಗಳಲ್ಲಿ ಪ್ರೇಕ್ಷಕರೂ ಪಾಲುಗೊಂಡು, ವಾಹವಾ, ಖೂಬ್! ಸುಬಾನ್, ಮರ್ಹಬಾ! ಮುಖರ್ರರ್! ಎಂದೆಲ್ಲ ಕವಿಗಳಿಗೆ ಸ್ಫೂರ್ತಿ ಕೊಡುತ್ತಾರೆ. ತಾವೂ ಪುನರುಚ್ಚರಿಸಿ ಆಶುಕವಿಗಳನ್ನು ಹುರಿದುಂಬಿಸುತ್ತಾರೆ. ದಖ್ಖನಿ ಭಾಷಾಪ್ರಕಾರ ಕವಿತೆ, ಸಂಸ್ಕೃತಿಯ ಪ್ರಚಾರ ಮಾಧ್ಯಮವಾಗಿ ಹಬ್ಬಿತು. ಮೊಗಲ್ ಸಾಮ್ರಾಜ್ಯದಲ್ಲಿ ಕೇವಲ ಆಡುಭಾಷೆಯಾಗಿದ್ದ ಉರ್ದು, ಆದಿಲ್‌ಶಾಹಿಗಳ ಕಾಲದಲ್ಲಿ ಪರಿಪೂರ್ಣ ಸಾಹಿತ್ಯಭಾಷೆಯಾಯಿತು. ಮೊಗಲರೂ ನಿಧಾನವಾಗಿ ಪರ್ಶಿಯನ್ ಭಾಷೆ ತ್ಯಜಿಸಿ ಶಿಕ್ಷಣ, ಸಂಸ್ಕೃತಿ ಪ್ರಸಾರಕ್ಕೆ ಉರ್ದುವನ್ನು ಸ್ವೀಕರಿಸಿದರು.

ಆದಿಲ್‌ಶಾಹಿಗಳು ಚಿತ್ರಕಲೆಯನ್ನೂ ಪ್ರೋತ್ಸಾಹಿಸಿದರು. ದಖ್ಖನಿ ಶೈಲಿ ರೂಪುಗೊಂಡಿತು. ಇಮ್ಮಡಿ ಇಬ್ರಾಹಿಂ ಆದಿಲ್‌ಶಾಹನ (ಕ್ರಿ.ಶ.೧೫೮೦-೧೬೨೭) ಸಂಗೀತ ಮತ್ತು ಕಲಾಪ್ರೇಮದಿಂದ ಕಲಾವಿದರಿಗೆ ತುಂಬ ಪ್ರೋತ್ಸಾಹ ದೊರೆಯಿತು.[೧೨] ಕಿತಾಬ್-ಎ-ನವರಸ್, ಗಣಪತಿ ಮತ್ತು ಸರಸ್ವತಿ ಸ್ತುತಿಯಿಂದ ಪ್ರಾರಂಭವಾಗುತ್ತದೆ. ಜಾತೀಯತೆಯನ್ನು ಮೀರಿ ನಿಂತ ಇಮ್ಮಡಿ ಇಬ್ರಾಹಿಂ, "ಜಗದ್ಗುರು ಬಾದಶಹ"ನೆಂದೇ ಪ್ರಸಿದ್ಧನಾಗಿದ್ದಾನೆ.

ಆದಿಲ್‌ಶಾಹಿಗಳು ಪುಸ್ತಕಪ್ರೇಮಿಗಳಾದ್ದರಿಂದ ಬೃಹತ್‌ಗ್ರಂಥ ಭಾಂಡಾರಕ್ಕಾಗಿ "ಅಸಾರಿಮಹಲ್" ನಿರ್ಮಿಸಿದ್ದರು.[೧೩] ಬಿಜಾಪುರವನ್ನು ಗೆದ್ದ ಔರಂಗಜೇಬನು ಅಲ್ಲಿಯ ಅತ್ಯುತ್ತಮ ಅರಬ್ಬೀ ಮತ್ತು ಫಾರಸಿ ಗ್ರಂಥಗಳನ್ನು ಆರುಬಂಡಿಗಳಲ್ಲಿ ಹೇರಿ ತನ್ನ ಠಾಣ್ಯಕ್ಕೆ ಸಾಗಿಸಿದನೆಂದು ಚರಿತ್ರೆ ಹೇಳುತ್ತದೆ.[೧೪] ಅಳಿದುಳಿದ ಗ್ರಂಥಗಳು ಹತ್ತೊಂಭತ್ತನೆಯ ಶತಕದವರೆಗೆ

ಈ ಕಟ್ಟಡದಲ್ಲಿಯೇ(99) ಇದ್ದವು. ಇಂದು ಬಿಕೋ! ಎಂದು ನಿಂತ ಅಸಾರಿ ಮಹಲ್‌ದೊಳಗಿನ ಹೆಚ್ಚಿನ ಅಮೂಲ್ಯ ಗ್ರಂಥಗಳು ಎಲ್ಲಿ ಹೋದವೆಂದು ಹೇಳುವದು ಕಷ್ಟ!

ಕನ್ನಡದ ಗಂಡು ಮೆಟ್ಟಿನ ಮೈಸೂರು ಸೀಮೆಯಲ್ಲಿ ಕೂಡ ಉರ್ದು, ಫಾರಸಿಗಳು ಹೈದರ್‌ಅಲಿಯ ಕಾಲದಲ್ಲಿ ಬೇರು ಬಿಡಲಾರಂಭಿಸಿದವು. ಟಿಪ್ಪುಸುಲ್ತಾನನು ಅರಬ್ಬಿ, ಫಾರಸಿ ಭಾಷೆಗೆ ಪ್ರೋತ್ಸಾಹ ಕೊಡಲು ಪ್ರತಿ ಹಳ್ಳಿಗೆ ಮಸೀದೆ, ಮಖ್ತಾಬ್ ಕೊಡಿಸಿದ. ಅವನ ಖಾಸಗಿ ಗ್ರಂಥಾಲಯದಲ್ಲಿ ಎರಡು ಸಹಸ್ರಕ್ಕೂ ಮಿಕ್ಕಿದ ಗ್ರಂಥಗಳಿದ್ದವು. ಟಿಪ್ಪು, ವಿಜ್ಞಾನದಲ್ಲಿ ವಿಶೇಷ ಆಸಕ್ತಿ ತಳೆದಿದ್ದ. ಕೆಲವರ್ಷಗಳ ನಂತರ ಕನ್ನಡದ ಬದಲಿಗೆ ಫಾರಸಿಯನ್ನೆ ರಾಜ್ಯಭಾಷೆಯಾಗಿ ಸ್ವೀಕರಿಸಿ ಆ ಭಾಷಾ-ಶಾಲೆಗಳಿಗೆ ಪ್ರೋತ್ಸಾಹ ನೀಡಿದ.

ಮಖ್ತಾಬ್ ಮತ್ತು ಮದ್ರಸಾಗಳಲ್ಲಿ ಹುಡುಗರಿಗಷ್ಟೇ ಪ್ರವೇಶವಿದ್ದುದರಿಂದ ಮಹಮ್ಮದೀಯರಲ್ಲಿ ಸ್ತ್ರೀ ಶಿಕ್ಷಣವಿರಲಿಲ್ಲವೆಂದು ತೀರ್ಮಾನಕ್ಕೆ ಬರುವದು ಸರಿಯಲ್ಲ. ಸ್ತ್ರೀಯರನ್ನು ಪರಪುರುಷರಿಂದ ದೂರ ಇಡುವ ಅವರ ಧೋರಣೆಯಿಂದಾಗಿ ಕುಮಾರಿಯರನ್ನು ಶಾಲೆಗೆ ಕಳಿಸುವ ಪರಿಪಾಠ ಬೆಳೆದುಬರಲೇ ಇಲ್ಲ. ಬದಲಿಗೆ ಮನೆಯಲ್ಲೇ ಹೆಣ್ಣುಮಕ್ಕಳಿಗೆ ನಿತ್ಯಜೀವನಕ್ಕೆ ಬೇಕಾದ ಶಿಕ್ಷಣವನ್ನು ತಂದೆತಾಯಿಗಳು ಕೊಡುತ್ತಿದ್ದರು. ಅಥವಾ ವಯಸ್ಸಾದ ದಾದಿಯರಿಂದ ಗೃಹಶಿಕ್ಷಣ ಕೊಡಿಸುತ್ತಿದ್ದರು. ಹತ್ತಾರು ಧನಿಕರು ಸೇರಿ ಒಬ್ಬ ಶಿಕ್ಷಕಿಯನ್ನು ನೇಮಿಸಿ ತಮ್ಮ ಹುಡುಗಿಯರಿಗೆ ಬೇಕಾದ ಕಲೆಗಳನ್ನು ಕಲಿಸುತ್ತಿದ್ದರು.

ಅರಸರು ಅಥವಾ ಸುಬೇದಾರರು ಮೌಲ್ವಿಗಳನ್ನು ಮಹಲಿಗೆ ಬರಮಾಡಿಕೊಂಡು ರಾಜಕುಮಾರಿಯರಿಗೆ ಶಿಕ್ಷಣ ಕೊಡಿಸುತ್ತಿದ್ದರು. ಗುರುವಾಗಿ ಮನೆಗೆ ಬರುವವನು ಹಣ್ಣು ಮುದುಕನಾಗಿರುವದು ಅತಿ ಮುಖ್ಯವಾಗಿತ್ತು. ಅರಮನೆಯ ಸೇವೆಯಲ್ಲಿದ್ದ ಮಹಿಳೆಯರಿಗೂ ಶಿಕ್ಷಣ ದೊರಕುವಂತೆ ನೋಡಿಕೊಳ್ಳುತ್ತಿದ್ದರು. ಅವರೆಲ್ಲ ಫಾರಸಿ ಭಾಷೆ, ಗಣಿತ, ಸಂಗೀತ, ಚಿತ್ರಕಲೆ, ಯುನಾನಿ-ಚಿಕಿತ್ಸಾ ಪದ್ಧತಿಗಳನ್ನು ಕಲಿಯುತ್ತಿದ್ದರು. ವೀರರಮಣಿ ಚಾಂದ್‌ಬೀಬಿ, ಗಂಡು ಹುಡುಗರಂತೆಯೇ ಸೈನ್ಯ ಶಿಕ್ಷಣ ಪಡೆದದ್ದರಿಂದ ಮೊಗಲ ಸೇನೆಯೊಂದಿಗೆ ಹೋರಾಡುವ ಪರಾಕ್ರಮ ತೋರಿದಳು. ಇದಲ್ಲದೇ ಅವಳು ಅರಬಿ, ಫಾರಸಿ, ತುರ್ಕಿ ಭಾಷೆಗಳಲ್ಲಿ ಪ್ರವೀಣೆ. ಹಾಡುತ್ತಿದ್ದಳು, ಸಿತಾರ್ ನುಡಿಸುತ್ತಿದ್ದಳು, ಹೂಗಳನ್ನು ಚಿತ್ರಿಸುವದು ಅವಳ ಇಷ್ಟದ ರಂಜನೆಯಾಗಿತ್ತು. ಜೊತೆಗೆ ಹಿಂದಿ, ಮರಾಠಿ, ಕನ್ನಡಗಳನ್ನೂ ಕಲಿತಿದ್ದಳು, ಎಂದು ಅರಿತಾಗ ಅಚ್ಚರಿಯಾಗದಿರದು.

೧೩ನೇ ಶತಕದಲ್ಲಿ ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರದಲ್ಲಿ ಇಪ್ಪತ್ತೇಳು ಹುಡುಗರ ಶಾಲೆಗಳನ್ನು, ಹದಿಮೂರು ಹುಡುಗಿಯರ ಶಾಲೆಗಳನ್ನು ಕಂಡ ಅರಬ್ ಪ್ರವಾಸಿ ಇಬ್ನ್ ಬತೂತನು ಇಂಥ ಶಾಲೆಗಳನ್ನು ತಾನೆಲ್ಲೂ ಕಂಡಿರಲಿಲ್ಲವೆಂದು ಉದ್ಗರಿಸಿದ್ದಾನೆ. ಹುಡುಗಿಯರು ಮೂಗಿನಲ್ಲಿ ಬುಲಾಕು ಧರಿಸುತ್ತಾರೆ, ಸುಂದರಿಯರಿದ್ದಾರೆ. ಅವರೆಲ್ಲ ಖುರಾನ್‌ನನ್ನು ಕಂಠಪಾಠ ಹೇಳುತ್ತಾರೆ, ಎಂಬುದನ್ನು ಗಮನಿಸಿದ್ದ.[೪] ಈ ವರ್ಣನೆಯಿಂದ ಆ ಶಾಲೆಗಳು ಪ್ರಾರ್ಥನೆ ಮತ್ತು ಖುರಾನ್‌ಗಳನ್ನು ಕಲಿಸುವ ಮಖ್ತಾಬ್‌ಗಳಿದ್ದು ಆ ಮಹಿಳೆಯರೆಲ್ಲ ಹೊಸದಾಗಿ ಇಸ್ಲಾಂ ಸ್ವೀಕರಿಸಿ ಇನ್ನೂ ಬುರ್ಖಾ ಪದ್ಧತಿ ರೂಢಿಸಿಕೊಂಡಿರಲಿಲ್ಲವೆಂದು

ತೋರುತ್ತದೆ. ಅಲ್ಲದೇ ಆ ಪ್ರದೇಶದಲ್ಲಿ 'ಮೂರ್' ವಂಶಸ್ಥರಾದ ನವಾಯತ್ ಮುಸಲ್ಮಾನರು ಬೀಡುಬಿಟ್ಟಿದ್ದರು. ಅವರು ಸಲ್ಲದ ಮಡಿವಂತಿಕೆಯಲ್ಲಿ ವಿಶ್ವಾಸ ಇಟ್ಟವರಲ್ಲ. ಆದ್ದರಿಂದ ಸಾರ್ವಜನಿಕ ಶಾಲೆಗೆ (ಮಖ್ತಾಬ್‌ಗಳಿಗೆ) ಹುಡುಗಿಯರು ಹೋಗುವ ಪದ್ಧತಿ ಪ್ರಚಲಿತವಿದ್ದಿರಲು ಸಾಕು.

ಹೈದರ್‌ಅಲಿ, ತನ್ನ ಝನಾನಾದಲ್ಲಿ ಲಾಹೋರ್, ಅಬ್ದಾಲಾ, ಕಾಬೂಲ್, ಕಂದಹಾರ್, ಕಾಶ್ಮೀರ್, ಗುಜರಾತ್, ಅರಬಸ್ತಾನಗಳಿಂದ ತರಿಸಿದ ಸುಂದರಿಯರಲ್ಲಿ ಜಾಣೆಯರನ್ನು ಗುರುತಿಸಿ ಭರತಶಾಸ್ತ್ರ ಪ್ರವೀಣ, ನಾಟಕ ಶಾಲೆಯ ಮುಖ್ಯಸ್ಥರಾದ ಕುಪ್ಪಯ್ಯನವರ ತಂದೆಯ ಮೇಲ್ವಿಚಾರಣೆಯಲ್ಲಿ ಅವರಿಗೆ ನೃತ್ಯ, ಹಾಡುಗಾರಿಕೆ, ವಾದ್ಯ ನುಡಿಸುವಿಕೆ ಮತ್ತು ಅಭಿನಯಗಳ ಶಿಕ್ಷಣದ ಏರ್ಪಾಡು ಮಾಡಿದ್ದ.[೧೫] ಇದಲ್ಲದೇ ಅನೇಕ ಕಡೆಗಳಲ್ಲಿ ಮಹಮ್ಮದೀಯ ಸ್ತ್ರೀಯರಿಗೆ ಶಿಕ್ಷಣ ಕೊಡಿಸುವ ಏರ್ಪಾಡು ಇದ್ದಿರಬೇಕು. ಆದರೆ ಅವುಗಳ ವಿವರಗಳು ಸಿಗುತ್ತಿಲ್ಲ.

### ಸಂದರ್ಭ ಸೂಚಿ


೧. ಝಹುರುದ್ದೀನ್ ಅಹ್ಮದ್ ಎಮ್.ಎಮ್. 'ಪ್ರೆಜೆಂಟ್ ಡೇ ಪ್ರಾಬ್ಲೆಮ್ಸ್ ಆಫ್ ಇಂಡಿಯನ್ ಎಜ್ಯುಕೇಶನ್', ಪು ೨೧ (ಅಹ್ಮದ್).

೨. ಜಾಫರ್ ಎಸ್.ಎಮ್. 'ಎಜ್ಯುಕೇಶನ್ ಇನ್ ಮುಸ್ಲಿಮ್ ಇಂಡಿಯಾ', ಪು ೭೩. ರಾಜಕುಮಾರರಿಗೆ ಯುಕ್ಲಿಡ್(ಭೂಮಿತಿ), ಗಣಿತ, ಮುಸ್ಲಿಂ ಧರ್ಮಶಾಸ್ತ್ರಗಳನ್ನು ಪಠ್ಯದಲ್ಲಿ ಅಳವಡಿಸಲಾಗಿತ್ತು.
ಲಾ-ಎನ್.ಎನ್. ಪ್ರೊಮೋಶನ್ ಆಫ್ ಲರ್ನಿಂಗ್ ಇನ್ ಮುಸ್ಲಿಂ ಇಂಡಿಯಾ, ಪು ೮೧(ಲಾ).

೩. ಪೂರ್ವೋಕ್ತ: ಪು ೮೪-೮೫.

೪. ಅದೇ, ಪು ೮೫.

೫. ಅದೇ, ಪು ೯೦.

೬. ಶೆರ್ವಾನಿ ಎಚ್.ಕೆ. ಮತ್ತು ಜೋಶಿ ಪಿ.ಎಂ. ಹಿಸ್ಟರಿ ಆಫ್ ಮಿಡೀವಲ್ ಡೆಕ್ಕನ್: ಸಂಪುಟ ೨, ಪು ೧೮೭-೮೮ (ಡೆಕ್ಕನ್).

೭. ಯಾಝ್ದಾನಿ ಜಿ. ಬಿದರ, ಇಟ್ಸ್ ಹಿಸ್ಟರಿ ಎಂಡ್ ಮೊನ್ಯುಮೆಂಟ್, ಪು ೨೪.

೮. ಲಾ, ಪು ೮೯.

೯. ಅದೇ, ಪು ೮೯.

೧೦. ಅಹ್ಮದ್, ಪು ೨೬-೨೭.

೧೧. ಡೆಕ್ಕನ್, ಪು ೨೨.
ಕ್ರಿ.ಶ. ೧೩೫೦ರ ಹೊತ್ತಿಗೆ ಡಖ್ಖನೀ ರೂಪ ತಾಳಿದ ಈ ಹಿಂದೀ ಭಾಷೆಯನ್ನೇ ಬಂದಾನವಾಝ ಬೋಧನೆಗೆ ಬಳಸಿದ.

೧೨. ಡೆಕ್ಕನ್, ಪು ೮೧.

೧೩. ಈ ವಾಚನಾಲಯಕ್ಕೆ ಹೊಂದಿ ಪ್ರತಿಗಳನ್ನು ಮಾಡುವ ಶಾಲೆಯೇ ಇದ್ದಿತು. ಅಲ್ಲಿ ೬೦ ಜನ ಪ್ರತಿ ಮಾಡುವವರು, ಲೇಪನ ಮಾಡುವವರು, ಮತ್ತು ಕಟ್ಟುವವರು (ಬುಕ್-ಬ್ಯಾಂಡರ್ಸ್) ಇದ್ದು ಇಡೀ ದಿನ ಕೆಲಸ ಮಾಡುತ್ತಿದ್ದರು.

೧೩ಅ) ಲಾ ೯೪: ಡೆಕ್ಕನ್ I ಪು ೩೯೭.

೧೪. ಹುಸೇನ ಮಹದಿ: ದಿ ರೆಹೆಲ್ಲಾ ಆಫ್ ಇಬ್ನ್ ಬತೂತಾ, ಪು ೧೭೦.

೧೫. ಶರ್ಮಾ ತಿ. ತಾ: ಚಾರಿತ್ರಿಕ ದಾಖಲೆಗಳು: ಪು ೧೪೦.

# ೧೩. ಏರಿಳಿತ

**ಕ**ನ್ನಡನಾಡಿನ ವಿದ್ಯಾಪದ್ಧತಿ ನಡೆದುಬಂದ ದಾರಿಯನ್ನು ಅವಲೋಕಿಸಿದಾಗ, ಶತಮಾನಗಳಲ್ಲಿ ಜನರ ಅವಶ್ಯಕತೆಗಳ ಅನುಗುಣವಾಗಿ ಅದು ರೂಪತಾಳಿ, ವಿಕಾಸಗೊಂಡದ್ದು ಅರಿವಾಗುವದು. ಯಾರಿಂದಲೋ ಎರವಲು ತಂದು, ಕೃತ್ರಿಮ ಗೊಬ್ಬರ ಪೂರೈಸಿ, ಕ್ರಿಮಿನಾಶಕ ಸಿಂಪಡಿಸಿ, ಬೆಳೆಸಿದ ಗುಲಾಬಿ ಗಿಡವಲ್ಲ ಅದು. ನಿಸರ್ಗದ ಸಕಲ ನಿಯಮಗಳನ್ನು ಪಾಲಿಸಿ, ಹುಲುಸಾಗಿ ಬೆಳೆದ ಅಶ್ವತ್ಥಮರ. ದಾರಿಹೋಕರಿಂದ ಹಿಡಿದು ರಣಹದ್ದು, ನಿಶಾಚರ ಪಕ್ಷಿಗಳಿಗೂ ಈ ಮರ, ತಂಗುದಾಣವಾಗುವಂತೆ ವಿದ್ವಾಂಸರು, ಧಾರ್ಮಿಕರು, ಅರಿಯದವರು, ಅರಿವು ಬೆಳಸಲೆಳಸುವವರು, ಎಲ್ಲರಿಗೂ ಈ ವ್ಯವಸ್ಥೆಯಲ್ಲಿ ಆಶ್ರಯವಿತ್ತು. ಬೌದ್ಧ, ಜೈನ, ವೈದಿಕ ಶಿಕ್ಷಣಗಳ ಸಂಘಟನೆ ತೀರ ಭಿನ್ನವಾಗಿ ಕಂಡರೂ ಅವುಗಳ ಹಿಂದೆ ಇರುವ ಏಕರೂಪತೆ ಗಮನಾರ್ಹ. ವಿದ್ಯೆಯ ಗುರಿ, ಆತ್ಮೋನ್ನತಿಯೇ ಹೊರತು, ಉದರ ನಿರ್ವಹಣೆಯಲ್ಲವೆಂದು ಸಕಲ ಧರ್ಮಗಳೂ ಒಪ್ಪಿಕೊಂಡಿದ್ದವು. ಅಂತೆಯೇ ಧರ್ಮಗಳ ಆಳ ಅಭ್ಯಾಸ, ಭಾಷೆ, ವ್ಯಾಕರಣ, ವಾದ-ವಿವಾದಗಳಿಗೆ ಹೆಚ್ಚಿನ ಪ್ರಾತಿನಿಧ್ಯ ಕೊಡಲಾಗಿತ್ತು. ಪ್ರಯೋಗ, ಪರೀಕ್ಷೆಗಳಿಗೆ ಹೆಚ್ಚಿನ ಮಹತ್ವವಿರುತ್ತಿರಲಿಲ್ಲ. ತನ್ನ ಅಧ್ಯಯನವನ್ನು ಎಷ್ಟರಮಟ್ಟಿಗೆ ಅರಗಿಸಿಕೊಂಡು, ಇನ್ನಿತರ ಜ್ಞಾನಾರ್ಜನೆಗೆ ಬಳಸಿಕೊಳ್ಳಲಾಗುತ್ತಿತ್ತೋ ಅದೇ ಶಿಕ್ಷಣದ ಅಳತೆಗೋಲಾಗಿತ್ತು. ಅಂತೆಯೇ ವಿದ್ಯಾರ್ಥಿಗಳಲ್ಲಿ, ವಿದ್ಯಾರ್ಜನೆಗೆ ಅಪಾರ ಹಸಿವು ಇರುವದು ಅತಿ ಅವಶ್ಯವಾಗಿತ್ತು. ಐಷಾರಾಮಗಳು ಅಂದಿನ ಜೀವನದ ಧ್ಯೇಯವಾಗಿರಲಿಲ್ಲವಾದ್ದರಿಂದ, ಅವರು ನಿತ್ಯದ ಅವಶ್ಯಕತೆಗಳನ್ನು ಸುಲಭವಾಗಿ ಈಡೇರಿಸಿಕೊಳ್ಳಬಹುದಾಗಿತ್ತು.

ಶಿಷ್ಯರಾದವರು ಕಷ್ಟಕಾರ್ಪಣ್ಯಗಳನ್ನು ಸಹಿಸಿ, ತಮ್ಮ ವಿದ್ಯಾಸಕ್ತಿಯನ್ನು ಗುರುಗಳಿಗೆ ಮನಗಾಣಿಸಿ ಕೊಡುವದು ಅತಿ ಮುಖ್ಯವಾಗಿತ್ತು. ಅವರ ದುಡಿಮೆ, ತ್ಯಾಗಗಳು, ಸ್ವಾತಂತ್ರ್ಯ ಹೋರಾಟದ 'ತ್ಯಾಗಿ'ಗಳಿಗಿಂತ ಹಿರಿದಾಗಿದ್ದವು. ಅದಕ್ಕಾಗಿ ಶಿಷ್ಯವೃಂದ ಯಾವುದೇ ಪ್ರತಿಫಲ ಅಪೇಕ್ಷಿಸುತ್ತಿರಲಿಲ್ಲ. ಹೆಚ್ಚಿನವರು ಗುರುಗೃಹ, ಮಠ, ಅಗ್ರಹಾರಗಳಲ್ಲಿ ವಾಸವಾಗಿದ್ದು ದಿನವಿಡೀ ಶಿಕ್ಷಣಕ್ಕೆ ಮೀಸಲಿಡುತ್ತಿದ್ದರು. ಸೂರ್ಯೋದಯಕ್ಕೂ ಮೊದಲೇ ಎದ್ದು, ಪ್ರಾತರ್ವಿಧಿಗಳನ್ನು ಮುಗಿಸಲೇಬೇಕು. ಇದಕ್ಕಾಗಿ ಸ್ವಚ್ಛತೆಗೆ ಪರಮಸ್ಥಾನ ಕೊಟ್ಟು, ರಸ್ತೆ, ಕೊಟ್ಟಿಗೆ, ನದಿದಂಡೆ, ಹೊಂಡ, ಬಾವಿಗಳ ಪರಿಸರ, ಗಿಡಮರಗಳ ನೆರಳು, ಅರಣ್ಯ- ದೇವಾಲಯಗಳ ಪರಿಸರ, ಕೃಷಿ ಮಾಡಿದ ಭೂಮಿ, ಉದ್ಯಾನ, ರಸ್ತೆಗಳು ಕೂಡುವ ಸ್ಥಳ, ಗುರು, ಹಿರಿಯರು, ಸ್ತ್ರೀಯರು

ಇರುವ ನೆರೆಕೆರೆಗಳು ಶೌಚಕ್ಕೆ ನಿಷಿದ್ಧವಿದ್ದವು. ಗುರುವಿನ ದರ್ಶನಕ್ಕೆ ಕೈ-ಕಾಲು ಮುಖಗಳನ್ನು ಶುಚಿಮಾಡಿಕೊಂಡೇ ಹೋಗಬೇಕು. ಛತ್ರಿ, ಪಾದರಕ್ಷೆ, ಹೂವು, ಸುಗಂಧದ್ರವ್ಯ ಉಪ್ಪು, ಮಾಂಸ, ವೀಳ್ಯಗಳು ಸಂಪೂರ್ಣ ತ್ಯಾಜ್ಯ. ಗಗನ ಮಂಡಲದಲ್ಲಿ ಸೂರ್ಯನು ಇರುವಾಗ ನಿದ್ರಿಸಕೂಡದು. ಸ್ತ್ರೀ ಸಹವಾಸ ಸಲ್ಲದು. ವಿದ್ಯಾಭ್ಯಾಸ ಮುಗಿಸಿ, ಸ್ವಗೃಹಕ್ಕೆ ಮರಳಿ, ವಿವಾಹವಾಗುವವನನ್ನು 'ಉಪಕುರ್ವಾಣ'ನೆಂದು ಗುರುತಿಸಿದರೆ, ವಿದ್ಯಾರ್ಜನೆಗೆ ಜೀವನವನ್ನೆ ಮುಡುಪಾಗಿಟ್ಟು ಬ್ರಹ್ಮಚರ್ಯ ಪಾಲಿಸುವವನಿಗೆ 'ನೈಷ್ಠಿಕ ಬ್ರಹ್ಮಚಾರಿ' ಎನ್ನುತ್ತಿದ್ದರು. ಇಂಥ ಕಠಿಣ ಜೀವನ ನಡೆಸಿದರೆ ಮಾತ್ರ ವಿದ್ಯೆ ಲಭ್ಯವಿದ್ದರೆ, ಇಂದಿನ ಕೆಲ ವಿದ್ಯಾರ್ಥಿಗಳಾದರೂ ಸೆರೆಕುಡಿತ, ಸ್ತ್ರೀಯರ ಸಹವಾಸ, ಡ್ರಗ್‌ವ್ಯಸನಗಳ ದಾಸರು ಆಗುತ್ತಿರಲಿಲ್ಲವೇನೋ!

ಶಿಕ್ಷಣವೆಂದರೆ ಸಿರಿವಂತರ ಮಕ್ಕಳ ಸೊತ್ತಾಗಕೂಡದೆಂದು ಸಮಾಜ ಮುಂಜಾಗ್ರತೆ ವಹಿಸಿತ್ತು. ಶಾಲೆಗಳ ಮತ್ತು ವಿದ್ಯಾದಾನದ ಸ್ವಾತಂತ್ರ್ಯಕ್ಕೆ ಧಕ್ಕೆ ಬಾರದಂತೆ ಸರ್ವರೂ ಸಹಕರಿಸುತ್ತಿದ್ದರು. ವರ್ಷ ವರ್ಷವೂ ಸಹಾಯ ಸಲ್ಲಿಸುತ್ತಿದ್ದ ಅರಸನೂ ಅವುಗಳ ಆಡಳಿತದಲ್ಲಿ ಎಂದೂ ಹಸ್ತಕ್ಷೇಪ ಮಾಡುತ್ತಿರಲಿಲ್ಲ. ದಾನ-ದತ್ತಿಗಳನ್ನು ಕೊಟ್ಟವರು ಅವುಗಳ ಲೆಕ್ಕ-ಪತ್ರ ಕೇಳುವ ಪ್ರಸಂಗ ಬರಲಿಲ್ಲ. ಶಾಲೆಯನ್ನು ನಡೆಸುವವರು ಹಣಕ್ಕಾಗಿ ಪರದಾಡಿದವರಲ್ಲ. ಬರುವ ಅಲ್ಪ ಉತ್ಪನ್ನದಲ್ಲಿ ಎಲ್ಲರಿಗೂ ವಿದ್ಯೆ, ಅನ್ನ, ಆಚ್ಛಾದನಗಳನ್ನು ಪೂರೈಸಲು ಹೆಣಗುತ್ತಿದ್ದರೆ, ಇಂಥದಕ್ಕೆ ಸಹಾಯ ನೀಡುವದು ತಮ್ಮ ಕರ್ತವ್ಯವೆಂದು ಗ್ರಾಮಸ್ಥರು, ಊರ ಹಿರಿಯರು ನಂಬಿದ್ದರು. ಇದರಿಂದ ದೊರೆಯುವ ಸಮಯವನ್ನೆಲ್ಲ ಗುರುಗಳು ಮತ್ತು ವಿದ್ಯಾರ್ಥಿಗಳು ಲಾಭದಾಯಕವಾಗುವಂತೆ ಬಳಸಿಕೊಳ್ಳಲು ಅನುಕೂಲವಾಯಿತು. ಅಂದಿನ ವಿದ್ಯಾರ್ಥಿಗಳ ಪ್ರತಿದಿನದ ಚಟುವಟಿಕೆಗಳು ಹೇಗಿರುತ್ತಿದ್ದವೆಂದು ಇಂದಿನವರಿಗೆ ವಿವರಿಸಿದರೆ, ಅವರು ವಿಸ್ಮಯಪಡುವಂತಿದೆ. ಸಾಧಾರಣವಾಗಿ ಅಧ್ಯಯನ ನಿರತರ ದಿನಚರಿ ಹೀಗಿರುತ್ತಿತ್ತು. ಸ್ನಾನ, ಜಪ, ಪೂಜೆ, ಶಾರೀರಿಕ ಚಟುವಟಿಕೆ, ಭೋಜನಗಳಿಗೆ ಎರಡೆರಡು ಗಳಿಗೆ(ಒಂದು ಗಳಿಗೆ=೨೪ ನಿಮಿಷ) ಮೀಸಲಿಟ್ಟರೆ ಪಾಠ, ಪ್ರವಚನಗಳಿಗೆ ಇಪ್ಪತ್ತು ಗಳಿಗೆ ಮೀಸಲು. ಸೂರ್ಯಾಸ್ತದ ಸಂಧ್ಯಾವಂದನೆ, ಪೂಜಾದಿಗಳಿಗೆ ಎರಡು, ಪುಸ್ತಕಾವಲೋಕನಕ್ಕೆ ಎಂಟು ಗಳಿಗೆ ಮೀಸಲಿಡಬೇಕಾಗಿತ್ತು. ದಿನ ಒಂದಕ್ಕೆ ಹದಿನಾಲ್ಕು ಗಳಿಗೆಗಳಿಗಿಂತ ಹೆಚ್ಚಿನ ಸಮಯ ನಿದ್ರೆ ಮಾಡಬಾರದೆಂಬ ನಿರ್ಬಂಧವಿತ್ತು. ಈ ನಿಯಮಗಳನ್ನು ಸಕಲ ವಿದ್ಯಾರ್ಥಿಗಳು ಪಾಲಿಸಲೇಬೇಕಾದ್ದರಿಂದ ಅವರನ್ನು ಶಿಕ್ಷಿಸಬೇಕಾದ ಸಂದರ್ಭಗಳು ಕ್ವಚಿತ್ತಾಗಿ ಬರುತ್ತಿದ್ದವು. ತೆಳುವಾದ ನಾಗಬೆತ್ತದ ಏಟುಗಳಿಗೆ, ಶಾರೀರಿಕ ಶಿಕ್ಷೆಗೆ ಮಣಿಯದಿದ್ದವರನ್ನು ಶಾಲೆಯಿಂದ ಹೊರಹಾಕಿಬಿಡುತ್ತಿದ್ದರು. ಹೀಗೆ ಹೊರ ಹಾಕಿದವರನ್ನು ಸಮಾಜ ಗೌರವದಿಂದ ಕಾಣುತ್ತಿರಲಿಲ್ಲವಾದ್ದರಿಂದ ಅಂಥ ಪರಿಸ್ಥಿತಿ ಬಾರದಂತೆ, ಅವರು ಸದಾಕಾಲ ಎಚ್ಚರವಾಗಿಯೇ ನಡೆದುಕೊಳ್ಳುತ್ತಿದ್ದರು.

ಅಂದಿನ ಶಿಕ್ಷಕರು, ಲೌಕಿಕ ಸುಖಗಳಿಂದ ದೂರವಿದ್ದು ಗುರುಗಳ ಸ್ಥಾನದಲ್ಲಿ ಇದ್ದುದರಿಂದ ಅವರನ್ನು ಕಂಡು ಗೌರವ ಸಲ್ಲಿಸಲು, ಸಲಹೆ ಪಡೆಯಲು, ಆಳರಸರು, ಅಧಿಕಾರಿಗಳು

ಅವರಲ್ಲಿ ಧಾವಿಸಿ ಬರುತ್ತಿದ್ದರು. ಅವರ ಜೀವನದ ಏಕಮೇವ ಧ್ಯೇಯ, ಜ್ಞಾನಸಂಪಾದನೆ ಮತ್ತು ಅದರ ವಿತರಣೆ. ಅಧ್ಯಯನ, ಅಧ್ಯಾಪನಗಳಲ್ಲಿ ಮೂರೂ ಹೊತ್ತು ತೊಡಗಿದವರು ಸಂಬಳ ಸವಲತ್ತುಗಳಿಗೆ ತಲೆಕೆಡಿಕೊಳ್ಳುತ್ತಿರಲಿಲ್ಲ. ನಾಡಿನಾದ್ಯಂತ ದಾನಿಗಳು ಕೊಡಮಾಡಿದ ಭೂಮಿದಾನದ ವೈವಿಧ್ಯ-ವಿಷಮತೆಗಳೇ ಈ ಮಾತಿಗೆ ಸಾಕ್ಷಿ. ಪ್ರಾಥಮಿಕ ಶಿಕ್ಷಕ ಮತ್ತು ವೇದ, ಶಾಸ್ತ್ರಗಳ ಉಚ್ಚಶಿಕ್ಷಣದ ಅಧ್ಯಾಪಕರಿಗೆ ಹೆಚ್ಚುಕಡಿಮೆ ಅಷ್ಟೇ ಸಂಬಳವಿದ್ದ ಉದಾಹರಣೆಗಳೂ ಇವೆ! ಯತಿ-ಗುರುಗಳು ಭಿಕ್ಷಾಟನೆಗೂ ಹೋಗುತ್ತಿದ್ದರು. ಹೀಗಾಗಿ ವಿದ್ಯಾದೇವತೆಯ ವಿನಾ ಅವರು ಬೇರಾರಿಗೂ ಮಣಿಯಬೇಕಾಗಿರಲಿಲ್ಲ. ಹೆಸರುವಾಸಿ ಶಿಕ್ಷಕರು, ತಮ್ಮ ರಾಜ್ಯದಲ್ಲಿ ಇರುವದು ಅಭಿಮಾನದ ಸಂಗತಿ ಎಂದು ಅರಿತ ಅರಸರು, ಅವರನ್ನು ಆಗಾಗ ಬರಮಾಡಿಕೊಂಡು ರಾಜ್ಯಾಡಳಿತದಲ್ಲಿ ಸಾಮಾಜಿಕ, ಧಾರ್ಮಿಕ ಸಂದರ್ಭಗಳಲ್ಲಿ ಅವರ ಸಲಹೆ-ಸೂಚನೆಗಳನ್ನು ಪಡೆದು ಹಾಗೆಯೇ ನಡೆದುಕೊಳ್ಳುತ್ತಿದ್ದರು. ಆಜನ್ಮ ಕಡುವೈರಿಗಳಾದ ಅರಸರು, ಒಬ್ಬ ಗುರುವನ್ನೆ ಗೌರವಿಸಿ, ಅವರ ನಿರ್ದೇಶನದಂತೆ ನಡೆದುಕೊಳ್ಳುವದು ಅಂದಿನ ಶಿಕ್ಷಣದ ವೈಶಿಷ್ಟ್ಯವಾಗಿತ್ತು. ಜನಸಾಮಾನ್ಯರೂ ಅಧ್ಯಾಪಕರಲ್ಲಿ ದೈವೀಶಕ್ತಿಯನ್ನು ಗುರುತಿಸಿ, ಭಯ, ಭಕ್ತಿ, ಗೌರವಗಳಿಂದ ಅವರನ್ನು ಕಾಣುತ್ತಿದ್ದರು. ವಾಮಶಕ್ತಿ, ಅಚಲಪ್ರಕಾಶ ಸ್ವಾಮಿ, ಅನಂತವೀರ್ಯಮುನಿಗಳಂತಹ ಗುರುಗಳು ಆ ವೃತ್ತಿಯನ್ನು ಪೂಜ್ಯಸ್ಥಾನದಲ್ಲಿ ಇಡುವಂತೆ ಮಾಡಿದ್ದರು.

ಸ್ವಯಂಪೂರ್ಣವಾಗಿ, ಸಾಮಾಜಿಕ ವ್ಯವಸ್ಥೆಯ ಅನ್ಯೋನ್ಯ ಭಾಗವಾಗಿ, ಪ್ರತಿ ವ್ಯಕ್ತಿಯನ್ನೂ ಒಂದೊಂದು ಉದ್ಯೋಗದಲ್ಲಿ ಪರಿಣತರನ್ನಾಗಿ ಮಾಡುವಂತಹ ಅನುಕೂಲತೆಯನ್ನು ಒದಗಿಸಿಕೊಟ್ಟ ಶಿಕ್ಷಣಕ್ಷೇತ್ರದಲ್ಲಿ ಅಲ್ಲೋಲಕಲ್ಲೋಲವನ್ನುಂಟು ಮಾಡುವದರಲ್ಲಿ, ಆಳರಸರ ದ್ವೇಷ, ಮತ್ಸರ, ಕಾದಾಟ, ಲೂಟಿಗಳು, ಹಿರಿಯ ಪಾತ್ರವಹಿಸಿವೆ. ದೇವಾಲಯ ಧ್ವಂಸಕ, ಮೂರ್ತಿಭಂಜಕ ಮಹಮ್ಮದೀಯ ದಾಳಿಗಾರರು, ಅವುಗಳ ಆಶ್ರಯದಲ್ಲಿ ನಡೆಯುತ್ತಿದ್ದ ಶಿಕ್ಷಣ ಸಂಸ್ಥೆಗಳನ್ನು ನೆಲಸಮ ಮಾಡುವದರಲ್ಲಿ ನೆರವಾದರು. ಖಡ್ಗ ಮತ್ತು ಕಿಚ್ಚುಗಳಿಂದ ರಾಜ್ಯ ನಡೆಸುವ ಪೋರ್ಚುಗೀಸರು, ಭಾರತದ ಶಿಕ್ಷಣ ಕ್ರಮವನ್ನು ಅರ್ಥ ಮಾಡಿಕೊಳ್ಳದ ಬ್ರಿಟಿಷರು, ಅದರ ಅಧೋಗತಿಗೆ ಸಕ್ರಿಯ ಸಹಾಯ ಒದಗಿಸಿದರು. ಬಹಮನಿ ಆಳರಸರು ಮಹಮ್ಮದೀಯ ಸಂಸ್ಕೃತಿ ಹಬ್ಬಿಸುವ ಹಂಬಲದಲ್ಲಿ ದೇವಾಲಯಗಳನ್ನು ದೋಚಿ ಧ್ವಂಸ ಮಾಡಲು ಹಿಂದೆ ಮುಂದೆ ನೋಡಲಿಲ್ಲ. ದಿಲ್ಲಿಯ ಮೊಗಲ ಚಕ್ರವರ್ತಿ ಔರಂಗಜೇಬನು, ಸಾಮ್ರಾಜ್ಯದಾಹದಿಂದಾಗಿ, ಉತ್ತರ ಕರ್ನಾಟಕದ ರಾಜ್ಯಗಳನ್ನೆಲ್ಲ ಸೂರೆ ಮಾಡಿದನು. ಧ್ವಂಸ ಮಾಡಿದ ದೇವಾಲಯಗಳ ಸಾಮಗ್ರಿ ಬಳಸಿ ಮಸೀದೆ ಕಟ್ಟಿಸಿದ ಗೌರವ, ಅವನದಾಗಿತ್ತು. ಜೊತೆಗೆ ಕನ್ನಡನಾಡಿನ ಮಹಮ್ಮದೀಯರ ಮದರಸಾಗಳನ್ನೂ ಹಾಳುಗೆಡವುದರಲ್ಲಿ ಹಿಂದೆ ಮುಂದೆ ನೋಡಲಿಲ್ಲ. ಕೇವಲ ಕೋತಿ ಕಾಳಗಗಳಿಂದ ತಮ್ಮ ವರ್ಚಸ್ಸು ವಿಸ್ತರಿಸುವದರಲ್ಲಿ ಆಸಕ್ತರಾಗಿದ್ದ ಮರಾಠರು ನಮ್ಮ ವಿದ್ಯಾಕೇಂದ್ರಗಳನ್ನು ಮಣ್ಣು ಮುಕ್ಕಿಸುವದರಲ್ಲಿ ಹಿಂಜರಿಯಲಿಲ್ಲ. ಕ್ರಿ.ಶ.೧೫೬೦ರಲ್ಲಿ ಗೋವಾದ ವ್ಹಾಯಿಸ್‌ರಾಯನಾದ ಡೊಮ್-ಫ್ರಾನ್ಸಿಸ್ಕೊ ಡಿ ಆಲಮೇಡಾನು

ಹೊನ್ನಾವರ(ಉತ್ತರ ಕನ್ನಡ) ಪಟ್ಟಣವನ್ನು ಸುಟ್ಟು ಭಸ್ಮ ಮಾಡಿಬಿಟ್ಟ. ಇದರೊಂದಿಗೆ ಹಿಂದು-ಮುಸ್ಲಿಂ ಶಿಕ್ಷಣ ಸಂಸ್ಥೆಗಳೆಲ್ಲ ನಾಶವಾದವೆಂದು ಹೇಳಬೇಕಾಗಿಲ್ಲ. ಕ್ರಿ.ಶ.೧೫೪೨ರಲ್ಲಿ ಗೋವಾದ ಪೋರ್ಚುಗೀಸ ಗವರ್ನರ ಮಾರ್ಟಿನ್ ಅಲ್ಫಾನ್ಸೊ ಡಿಸೋಜನು ಭಟಕಳ ನಗರವನ್ನು, ಅಲ್ಲಿಯ ಸಾಂಸ್ಕೃತಿಕ ಜೀವನವನ್ನು ಉಧ್ವಸ್ತಗೊಳಿಸಿದ. ಹದಿನೇಳನೆ ಶತಕದ ಅಂತ್ಯದಲ್ಲಿ ಕೆಳದಿ ಅರಸರು ಗೇರಸಪ್ಪಾ ರಾಜ್ಯವನ್ನು ಗೆದ್ದುದರಿಂದ ಅಲ್ಲಿದ್ದ ಖ್ಯಾತ ಜೈನ ವಿದ್ಯಾಲಯಗಳು ರಾಜಾಶ್ರಯ ತಪ್ಪಿ ನೆಲಸಮವಾದವು. ಜಾತಿ-ಮತ ಭೇದ ಮಾಡದೇ ಮಠ, ಬಸದಿಗಳಿಗೆ ಕೊಡುಗೆ ಕೊಟ್ಟ ಸ್ವಾದಿ ಅರಸುಮನೆತನವನ್ನು ಹೈದರಲಿ ಇಲ್ಲವಾಗಿಸಿದ. ತನಗೆ ಸೋಲು ಖಚಿತವೆಂದು ಮನವರಿಕೆಯಾದಾಗ, ವೈರಿರಾಜ್ಯ ಸುಟ್ಟುಬಿಡುವದು ಟಿಪ್ಪುವಿನ ಪದ್ಧತಿಯಾಗಿತ್ತು. ಅವನು ಹೊತ್ತಿಸಿದ ಜ್ವಾಲೆಯಲ್ಲಿ ಉರಿದುಹೋದ ಸಂಸ್ಥೆಗಳೆಷ್ಟೋ!

ಕರಾವಳಿಯಿಂದ ಕರ್ನಾಟಕಕ್ಕೆ ಆಗಮಿಸಿದ ಈಸ್ಟ್ ಇಂಡಿಯಾ ಕಂಪನಿ, ವ್ಯಾಪಾರ ಮಾಡಿ, ಬೊಕ್ಕಸ ತುಂಬಿಸಿಕೊಳ್ಳುವದರಲ್ಲಿ ಆಸಕ್ತಿ ತಳೆದಿತ್ತೇ ವಿನಾ ಸ್ಥಾನೀಯರ ಶಿಕ್ಷಣಾವಕಾಶಗಳನ್ನು ಬೆಳೆಸುವದರಲ್ಲಿ ಅಲ್ಲ. ಆದರೆ ಅವರೊಂದಿಗೆ ಬಂದ ಮಿಶನರಿಗಳಿಗೆ, ಕನ್ನಡಿಗರನ್ನು ಹೆಚ್ಚೆಚ್ಚು ಸಂಖ್ಯೆಯಲ್ಲಿ ಕ್ರೈಸ್ತರನ್ನಾಗಿ ಮಾಡುವ ಹಂಬಲವಿದ್ದುದರಿಂದ ಸ್ಥಳೀಯರ ಸಾಮಾಜಿಕ ಜೀವನ, ಶಿಕ್ಷಣಕ್ರಮಗಳನ್ನು ಅಭ್ಯಸಿಸಿದರು. ಇಲ್ಲಿಯ ಖರ್ಚಿಲ್ಲದ ವಿದ್ಯಾಪದ್ಧತಿ ನೋಡಿ ಅತ್ಯಂತ ವಿಸ್ಮಯಪಟ್ಟರು. ಗವರ್ನರ್ ಜನರಲ್‌ನ ಆದೇಶದ ಮೇರೆಗೆ ೧೯ನೇ ಶಮಾನದ ಪ್ರಾರಂಭದಲ್ಲಿ ಜಿಲ್ಲಾಧಿಕಾರಿಗಳು ಕೈಕೊಂಡ ಮುಂಬೈ, ಮದ್ರಾಸ ಪ್ರಾಂತಗಳ ಸರ್ವೆಗಳು ಶತಕಗಳಿಂದ ನಡೆದು ಬಂದ ಶಿಕ್ಷಣ ಕ್ರಮದ ಮೇಲೆ ಬೆಳಕು ಚೆಲ್ಲುತ್ತವೆ.

ಹಳ್ಳಿಯ ಜನ ಸಾಮೂಹಿಕವಾಗಿ ಕಾಳುಕಡಿ ಕೊಟ್ಟೋ ಧನಸಹಾಯ ಮಾಡಿಯೋ ನಡೆಸುವ ಏಕೋಪಾಧ್ಯಾಯ ಶಾಲೆಗಳು ಮತ್ತು ಜಾಣ ವಿದ್ಯಾರ್ಥಿಗಳನ್ನು ಹಿರೇಮಾಣಿಯಾಗಿ ನೇಮಿಸಿ ಇತರ ವಿದ್ಯಾರ್ಥಿಗಳಿಗೆ ಬೋಧಿಸುವ ಕ್ರಮ, ಅದ್ವಿತೀಯವಾದದ್ದೆಂದು ಬ್ರಿಟಿಷರು ಒಪ್ಪಿಕೊಂಡರು. ಮಗ್ಗಿ, ಕವಿತೆ, ಕೋಷ್ಟಕಗಳನ್ನು ಸಾಮೂಹಿವಾಗಿ ಕಂಠಪಾಠ ಮಾಡುವದು, ಮೇಲಿನ ವರ್ಗದವರು, ಕೆಳಗಿನ ವರ್ಗದವರಿಗೆ ಕಲಿಸುವದು, ಜಾಣನಿಂದ, ಓದಿನಲ್ಲಿ ಹಿಂದುಳಿದವನನ್ನು ತಿದ್ದಿ ತೀಡಿಸವ ಕೆಲಸ ಮಾಡಿಸುವದು ಮುಂತಾದವು ಅತ್ಯಂತ ಪ್ರಭಾವಶಾಲಿ ಶಿಕ್ಷಣ ಕ್ರಮಗಳೆಂದು ಹೊಗಳಿದರು. ಡಾ। ಎಂಡ್ರ್ಯೂಬೆಲ್ ಎಂಬಾತನು, ನಮ್ಮ ಹಿರೇಮಾಣಿ ಅಥವಾ ಮಾನಿಟರ್ ಪದ್ಧತಿಯನ್ನು ಇಂಗ್ಲಂಡಿನಲ್ಲಿ ಬಳಕೆಗೆ ತಂದನೆಂದರೆ ಅದರ ಹಿರಿಮೆಯ ಅರಿವಾಗದೇ ಇರದು! ಆದರೆ ಈ ಪ್ರಚಲಿತ ಪದ್ಧತಿಯಿದ್ದ ರಾಜ್ಯಗಳು, ಪ್ರದೇಶಗಳು, ಸಣ್ಣಪುಟ್ಟ ಸಂಸ್ಥಾನಗಳೆಲ್ಲ ಬ್ರಿಟಿಷರ ಕೈ ಸೇರಲಾರಂಭಿಸಿದ್ದರಿಂದ ಮತ್ತು ದಾನ, ಧರ್ಮ ಮಾಡುತ್ತಿದ್ದ ಧರ್ಮಿಷ್ಠರು ಬಡವರಾದ್ದರಿಂದ, ಹಿಂದಿನ ಅಧಿಕಾರಿಗಳು ಜನಸಾಮಾನ್ಯರಾದ್ದರಿಂದ, ವ್ಯಾಪಾರವನ್ನೆಲ್ಲ ಕಂಪನಿಯವರು ಸೆಳೆದುಕೊಳ್ಳಲಾರಂಭಿಸಿದ್ದರಿಂದ, ಶಿಕ್ಷಣವೆಂಬ ಮಹಾವೃಕ್ಷದ ಒಂದೊಂದೇ ಬೇರು ಕೊಳೆತು, ಮರ ಬೆಂಡಾಯಿತು.

ಈಸ್ಟ್ ಇಂಡಿಯಾ ಕಂಪನಿಯ ಶೋಷಣೆ ಹೆಚ್ಚಾಗಿ, ಕ್ಷೋಭೆ ಉಂಟಾಗಬಹುದೆಂದು

ಬ್ರಿಟಿಷ್ ಸರಕಾರಕ್ಕೆ ತೋರಿದಾಗ, ಹಲವು ನಿರ್ಬಂಧಗಳನ್ನು ಕಂಪನಿಯ ಮೇಲೆ ಹೇರಿತು. ಸ್ಥಳೀಯರಿಗೆ ಯೋಗ್ಯ ಶಿಕ್ಷಣ ಕೊಡಬೇಕೆಂದು ಮನಗಂಡು, ಅವುಗಳಿಗೆ ಕೊಡಮಾಡುವ ಸೌಕರ್ಯಗಳನ್ನು ನಮೂದಿಸಿತು. ಆದರೆ ವಂಶಪರಂಪರೆಯಿಂದ ಬಂದ ದಾನ-ದತ್ತಿಗಳನ್ನು ಮುಂದುವರಿಸಿದ್ದರಿಂದ ಅವಿದ್ಯಾವಂತ ತಲೆಮಾರಿನವರು, ಅದನ್ನು ತಮ್ಮ ಸ್ವಾರ್ಥಕ್ಕೆ ಬಳಸಿಕೊಳ್ಳಲಾರಂಭಿಸಿದರೇ ವಿನಃ ಶಿಕ್ಷಣ ಕೊಡಮಾಡುವದರಲ್ಲಿ ಪ್ರಯತ್ನಿಸಲಿಲ್ಲ. ಹಿಂದೆ ಉಚ್ಚ ಶಿಕ್ಷಣ ನೀಡಲು ಯಾರೊಬ್ಬರ ಮುಂದೆಯೂ ಕೈಯೊಡ್ಡದವರು, ಈಗ ನೆರವಿಗಾಗಿ ಸರಕಾರಕ್ಕೆ ಸಲಾಮು ಹೊಡೆಯುವ ಪ್ರಸಂಗ ಬಂದಿತು. ಆದರೆ ಸರಕಾರ ಮುಕ್ತವಾಗಿ ಸಹಾಯ ನೀಡುವದರ ಬದಲಾಗಿ ಅದರಲ್ಲಿ ಕಡಿತ ಮಾಡಲಾರಂಭಿಸಿತು. ಇದರಿಂದಾಗಿ ಶಿಕ್ಷಣಕ್ಕಾಗಿ ಜೀವನವನ್ನು ಮುಡಿಪಾಗಿಟ್ಟ ಶಿಕ್ಷಕರ ಸ್ಥಾನದಲ್ಲಿ, ಸರಕಾರದಿಂದ ಪೋಷಿತ ಶಿಕ್ಷಕರ ತಂಡ ಅಸ್ತಿತ್ವಕ್ಕೆ ಬಂದಿತು. ಈ ವರ್ಗದ ಶಿಕ್ಷಾರ್ಹತೆ ಗಮನಿಸಬೇಕಾಗಿದ್ದ ಸಾರ್ವಜನಿಕರಾಗಲೇ ತಮ್ಮ ಹೊಣೆ ಮರೆತುಬಿಟ್ಟಿದ್ದರಿಂದ, ಶಿಕ್ಷಣ ಅಧೋಗತಿ ಹಿಡಿಯಿತು. ವಿದ್ಯಾರ್ಥಿಗಳು ಎಲ್ಲವನ್ನೂ ಕಂಠಪಾಠ ಒಪ್ಪಿಸಬಲ್ಲವರಾಗಿದ್ದರೇ ವಿನಃ ಮೇಧಾವಿಗಳಾಗಲಿಲ್ಲ. ಶಾಲೆಗಳ ಸಂಖ್ಯೆ ಕುಸಿಯಿತು. ವಿದ್ಯಾರ್ಥಿಗಳಾಗಬೇಕಾಗಿದ್ದವರು, ಕೂಲಿ ಕೆಲಸ ಮಾಡಲಾರಂಭಿಸಿದರು. ಹಲವಾರು ವಿಷಯಗಳನ್ನು ಅರಿಯುವದಿರಲಿ, ನಿರಕ್ಷರಿಗಳ ಸಂಖ್ಯೆ ಹಿಂದೆಂದೂ ಇಲ್ಲದಷ್ಟು ಬೆಳೆಯಿತು. ಹೆಚ್ಚಿನ ವ್ಯಾಪಾರವೆಲ್ಲ ಈಸ್ಟ್ ಇಂಡಿಯಾ ಕಂಪನಿಯಲ್ಲಿ ಕೇಂದ್ರೀಕೃತವಾಗಿ, ಜನಸಾಮಾನ್ಯರ ಉದರ ನಿರ್ವಹಣೆಯೇ ದುಷ್ಕರವಾದಾಗ ಶಿಕ್ಷಣಕ್ಕಾಗಿ ತಲೆ ಕೆಡಿಸಿಕೊಳ್ಳುವವರು ಯಾರು?

ಈಸ್ಟ್ ಇಂಡಿಯ ಕಂಪನಿಯಿಂದ ಬ್ರಿಟಿಷ್ ಸರಕಾರ ರಾಜ್ಯಾಡಳಿತವನ್ನು ವಹಿಸಿಕೊಂಡಾಗ, ನಮ್ಮ ಶಿಕ್ಷಣ ಪದ್ಧತಿ ಸಂಪೂರ್ಣ ನೆಲಸಮವಾಗಿ ಹೋಗಿತ್ತು. ಅದಕ್ಕೆ ಜೀವಕಳೆ ತುಂಬಲು, ದೇಶೀಯ ಶಿಕ್ಷಣ ಪದ್ಧತಿ ಹೇಗಿತ್ತು, ಎಂದು ಕೂಲಂಕಷವಾಗಿ ಅಭ್ಯಸಿಸಿ, ವರದಿ ಒಪ್ಪಿಸಲು ಜಿಲ್ಲಾಧಿಕಾರಿಗಳಿಗೆ ಆದೇಶ ನೀಡಲಾಗಿತ್ತಷ್ಟೆ? ಹೆಚ್ಚಿನ ಅಧಿಕಾರಿಗಳಿಗೆ ಇಲ್ಲಿಯ ವಿದ್ಯಾಪದ್ಧತಿಯ ಬಗ್ಗೆ ಸಂಪೂರ್ಣ ಅಜ್ಞಾನವಿದ್ದುದರಿಂದ, ಅವರು ತಮ್ಮ ದೇಶದಲ್ಲಿಯಂತೆ, ಶಾಲಾ ಕಟ್ಟಡಗಳು(!), ಅವುಗಳ ವಿಸ್ತಾರ, ಶಿಕ್ಷಕ-ವಿದ್ಯಾರ್ಥಿಗಳ ಪ್ರಮಾಣ, ವಾಚನಾಲಯಗಳ ಸೌಲಭ್ಯ, ಲಭ್ಯವಿರುವ ಧನಸಹಾಯ ಮುಂತಾದವುಗಳನ್ನು ಅಳತೆಗೋಲು ಮಾಡಿಕೊಂಡು, ಹೆಚ್ಚಿನ ಜಿಲ್ಲೆಗಳಲ್ಲಿ ಹೆಸರಿಸಬಹುದಾದಂತಹ ಶಿಕ್ಷಣ ಸಂಸ್ಥೆಗಳು ಇಲ್ಲವೆಂದು ವರದಿ ಮಾಡಿದರು! ಆದರೆ ಬಳ್ಳಾರಿ ಜಿಲ್ಲೆಯ ಕಲೆಕ್ಟರರು ಮಾತ್ರ, ಅಪಾರ ಪರಿಶ್ರಮದಿಂದ ದೇಶೀಯ ಶಿಕ್ಷಣ ಪದ್ಧತಿಯನ್ನು ಸಮಗ್ರವಾಗಿ ಅಭ್ಯಸಿಸಿ, ಸ್ಥಳೀಯರು ಬುದ್ಧಿವಂತರೂ, ಕುಶಾಗ್ರಮತಿಗಳೂ ಆಗಿದ್ದು ಅವರಿಗೆ ಶಿಕ್ಷಣ ಸೌಕರ್ಯಗಳನ್ನು ಕೊಡಮಾಡಿದರೆ ಅದರ ಸಂಪೂರ್ಣ ಲಾಭ ಪಡೆಯುವಂತಿದ್ದಾರೆ! ಎಂದು ನೈಜಸ್ಥಿತಿಯ ವರದಿ ಮಾಡಿದರು. (ನೋಡಿ: ಅನುಬಂಧ ೩) ಆದರೆ ಸರಕಾರವು ಇಂಥ ವರದಿಗಳನ್ನು ಅಲಕ್ಷ್ಯ ಮಾಡಿದ್ದರಿಂದ ಜನರು, ಹಣಕಾಸಿನಂತೆ ವಿದ್ಯೆಯಲ್ಲಿಯೂ ಕಡುಬಡವರಾದರು.

ಬ್ರಿಟಿಷ್ ಸರಕಾರವು, ರಾಜ್ಯಾಡಳಿತಕ್ಕೆ ಸಹಾಯಕರನ್ನು ಪಡೆಯುವದಕ್ಕಾಗಿ ಇಂಗ್ಲಂಡಿನ ಮಾದರಿಯ ಶಿಕ್ಷಣವನ್ನು ಇಲ್ಲಿಯೂ ಪ್ರಾರಂಭಿಸಿತು. ಆದರೆ ಇದು ಖರ್ಚಿನದ್ದಾದ್ದರಿಂದ,

ಕೇವಲ ಉಳ್ಳವರ ಸೊತ್ತಾಯಿತು. ಸರ್ವತೋಮುಖ ಶಿಕ್ಷಣದ ಬದಲಾಗಿ, ಪರೀಕ್ಷಾಕ್ರಮಕ್ಕೆ ಹೆಚ್ಚು ಪ್ರಾಧಾನ್ಯ ಸಿಕ್ಕಿತು. ಧನಸಹಾಯಕ್ಕಾಗಿ ಶಿಕ್ಷಣ ಸಂಸ್ಥೆಗಳು ಸರಕಾರವನ್ನು ಅವಲಂಬಿಸಿದ್ದರಿಂದ, ಅವು ಆಡಳಿತ ಸ್ವಾತಂತ್ರ್ಯವನ್ನು ಕಳೆದುಕೊಂಡವು. ಕೆಲವು ಧೀಮಂತರು ಉಚ್ಚಶಿಕ್ಷಣಕ್ಕಾಗಿ ಇಂಗ್ಲಂಡಿಗೆ ತೆರಳುವಂತೆ ಆದರೂ, ದೇಶದಲ್ಲಿ ನಿರಕ್ಷರತೆ ಬೆಳೆಯಲಾರಂಭಿಸಿತು. ಈ ದೀನಸ್ಥಿತಿಯನ್ನು ಕುರಿತು ಮಹಾತ್ಮಾ ಗಾಂಧಿಯವರು ಕ್ರಿ.ಶ.೧೯೩೧ರಲ್ಲಿ ಇಂಗ್ಲಂಡಿನಲ್ಲಿ ನಡೆದ ದುಂಡುಮೇಜಿನ ಪರಿಷತ್ತಿನಲ್ಲಿ, ಬ್ರಿಟಿಷ್ ಸರಕಾರದ ಲಕ್ಷ್ಯಕ್ಕೆ ತಂದ ಮುದ್ದೆಗಳು ಅತ್ಯಂತ ಗಮನಾರ್ಹವಾಗಿದ್ದವು. "ಭಾರತದಲ್ಲಿ ಐವತ್ತು ಅಥವಾ ನೂರು ವರ್ಷಗಳ ಹಿಂದೆ ಇದ್ದುದಕ್ಕಿಂತ ಈಗ, ಹೆಚ್ಚಿನ ಸಂಖ್ಯೆಯಲ್ಲಿ ನಿರಕ್ಷರಿಗಳಿದ್ದಾರೆ. ಬ್ರಿಟಿಷ್ ಆಡಳಿತಗಾರರು ಭಾರತದಲ್ಲಿ ಕಾಲಿಟ್ಟಾಗ ಇದ್ದ ಸ್ಥಿತಿಯನ್ನು ಹಾಗೆಯೇ ಉಳಿಸುವ ಬದಲಾಗಿ, ಮಣ್ಣನ್ನು ಅಗೆದು, ಬೇರನ್ನು ಪರೀಕ್ಷಿಸಿ ಹಾಗೇ ಬಿಟ್ಟು ಎಲ್ಲವನ್ನೂ ಮರೆತರು. ಇದರಿಂದ ನಾವು ನೆಟ್ಟಿದ್ದ ಸುಂದರ ವೃಕ್ಷವೊಂದನ್ನು ಹಾಳುಗೆಡವಿದರು. ಅವರಿಗೆ ಗ್ರಾಮೀಣ ಶಾಲೆಗಳು ಅರ್ಥವಾಗಲಿಲ್ಲ. ತಮ್ಮ ಮಾದರಿಯ ಶಾಲೆಗಳನ್ನು ಕಟ್ಟುವ ಕನಸು ಕಂಡರು. ಆದರೆ ನನ್ನ ಬಡದೇಶಕ್ಕೆ ಇಂಥ ದುಬಾರಿ ಶಿಕ್ಷಣ ನಡೆಸುವ ತ್ರಾಣವಿಲ್ಲ. ದೇಶವು ಸ್ವತಂತ್ರವಾದ ನಂತರ, ಹಳೆಯ ದೇಶೀ ಶಾಲಾ ಶಿಕ್ಷಣವನ್ನು ಪುನಃ ಆಚರಣೆಯಲ್ಲಿ ತಂದು ಹಳ್ಳಿಗೊಂದು ಶಾಲೆಯನ್ನು ಇಟ್ಟು ಹುಡುಗ ಹುಡುಗಿಯರಿಗೆ ಕೂಡಿಯೇ ಶಿಕ್ಷಣದ ಏರ್ಪಾಡು ಮಾಡುವೆವು" ಎಂದು ಉದ್ಗರಿಸಿದ್ದರು.

ಇಂಗ್ಲಿಷ್ ಪದ್ಧತಿಯ ಶಿಕ್ಷಣ ಪಡೆದ ಬಾಪೂಜಿಯವರಿಗೆ ಅದರ ನ್ಯೂನತೆಗಳ ಪರಿಚಯ ಚೆನ್ನಾಗಿದ್ದಿತು. ಶತಕಗಳಿಂದ ನಡೆದು ಬಂದ ವೃತ್ತಿಮೂಲ ಶಿಕ್ಷಣವನ್ನು ಪರಿಷ್ಕರಿಸಿ ಈ ನಾಡಿನ ನೆಲಕ್ಕೆ ಅನುಗುಣವಾಗಿ, ಅವಶ್ಯಕತೆಗಳಿಗನುಸಾರವಾಗಿ ರೂಪಿಸಬೇಕು, ಎನ್ನುವದು ಅವರ ಕನಸಾಗಿತ್ತು. ಸ್ವಾತಂತ್ರ್ಯ ಪ್ರಾಪ್ತವಾಗಿ ಆರು ದಶಕಗಳು ಕಳೆದಿವೆ. ಬಾಪೂಜಿಯವರು ಸೂಚಿಸಿದ ದೇಶೀ ಪದ್ಧತಿಯ ವೃತ್ತಿಮೂಲ ಶಿಕ್ಷಣವನ್ನು ನಾವು ಪುನಶ್ಚೇತನಗೊಳಿಸಲಿಲ್ಲ. ಪಾಶ್ಚಾತ್ಯರ ಸ್ವಾವಲಂಬನೆಯ ವ್ಯಕ್ತಿತ್ವ ವಿಕಸನಕ್ಕೆ ಸಹಾಯಮಾಡುವ ಶಿಕ್ಷಣವನ್ನೂ ರೂಪಿಸಿಕೊಳ್ಳಲಿಲ್ಲ. ಎಲ್ಲರನ್ನೂ ಒಂದೇ ಅಚ್ಚಿಗೆ ಹೊಯ್ದು ಸಾಮೂಹಿಕ ನಿರುದ್ಯೋಗಿಗಳ ತಂಡವನ್ನು ವರ್ಷ ವರ್ಷ ಹೆಚ್ಚಿಸುತ್ತಿದ್ದೇವೆ. ಬ್ರಿಟಿಷ್ ಮಾದರಿಯ ಶಿಕ್ಷಣವನ್ನು ಇಲ್ಲಿ ಪ್ರಾರಂಭಿಸಿದ್ದಕ್ಕಾಗಿ ಅವರನ್ನು ದೂರಿ ದೂರಿ ದಣಿದ ನಾವು ನಮ್ಮ ಶ್ರೀಮಂತ ಶಿಕ್ಷಣ ಪದ್ಧತಿಯನ್ನು ಗೋರಿಮಾಡಿ, ಕುಶಲ ಕೈಗಾರಿಕೆಗಳನ್ನು ಮಣ್ಣುಗೂಡಿಸಿ, ವೈದ್ಯಕೀಯ, ತಾಂತ್ರಿಕ ಶಿಕ್ಷಣವನ್ನು ಶ್ರೀಮಂತರಿಗೆ ಒಪ್ಪಿಸಿ, ಬುದ್ಧಿವಂತ ಎಳೆಯರನ್ನು ಹೊರನಾಡುಗಳಿಗೆ ಕಳಿಸುವ ದೇಶಗಳಲ್ಲಿ ಪ್ರಥಮ ಶ್ರೇಣಿಯಲ್ಲಿ ನಿಂತಿದ್ದೇವೆ. ರಾಜಕೀಯವಾಗಿ ಸ್ವತಂತ್ರರಾದರೂ ಶಿಕ್ಷಣಕ್ಷೇತ್ರದಲ್ಲಿ ದಾಸ್ಯತ್ವ ಮುಂದುವರಿದದ್ದ ಶೋಚನೀಯ.

# ಅನುಬಂಧಗಳು

## ೧

## ಬೆಳವಡಿ ಮಲ್ಲಮ್ಮನ ಶಿಕ್ಷಣ

ಇತ್ತೀಚೆಗೆ ಬೆಳಕಿಗೆ ಬಂದು, ಮುಂಬೈ ವಿಶ್ವವಿದ್ಯಾಲಯದ ಕನ್ನಡ ವಿಭಾಗದಿಂದ ಪ್ರಕಟಿತವಾದ 'ಶಿವಾಜಿ-ಮಲ್ಲಮ್ಮಾಜಿ ಸಮರೋತ್ಸವ' ಎಂಬ ಚರಿತ್ರೆಯ ಕೃತಿ ಕ್ರಿ.ಶ. ಸುಮಾರು ೧೭೦೪-೫ರಲ್ಲಿ ಶೇಷೋ ಶ್ರೀನಿವಾಸ(ಮುತಾಲಿಕ)ನಿಂದ ಮರಾಠಿಯಲ್ಲಿ ರಚಿತವಾಗಿದೆ. ಶಿವಾಜಿಯೊಡನೆ ಹೋರಾಡಿ ಆತನ ಗೌರವ-ವಿಶ್ವಾಸಗಳನ್ನು ಗಳಿಸಿದ ಬೆಳವಡಿ ಮಲ್ಲಮ್ಮನ ಅಪೂರ್ವ ಜೀವನ ಮತ್ತು ಸಾಧನೆಗಳ ವಿವರಗಳನ್ನು ಅದು ಒಳಗೊಂಡಿದೆ. ಸ್ವಾದಿ ಅಥವಾ ಸೋದೆ ಸಂಸ್ಥಾನದ ಅರಸು ಮಧುಲಿಂಗನಾಯಕನು ತನ್ನ ಮಕ್ಕಳಾದ ಸದಾಶಿವನಾಯಕ ಮತ್ತು ಮಲ್ಲಮ್ಮನಿಗೆ ಏರ್ಪಡಿಸಿದ ವಿದ್ಯಾಭ್ಯಾಸದ ಕುರಿತಾದ ಕುತೂಹಲಕಾರಿ ವಿವರಗಳನ್ನು ಅದು ಒದಗಿಸುತ್ತದೆ. ಸಂಬಂಧಿತ ಮರಾಠಿ ಭಾಷೆಯ ಅವತರಣಿಕೆಗಳ ಕನ್ನಡ ಅನುವಾದ ಕೆಳಗಿನಂತಿದೆ:

"ಐದು ವರ್ಷ ತುಂಬಿದಾಗ, ಮಲ್ಲಮ್ಮನಿಗೆ ಅಣ್ಣ ಸದಾಶಿವ ನಾಯಕನೊಂದಿಗೆ ವಿದ್ಯಾಭ್ಯಾಸ ಪ್ರಾರಂಭವಾಯಿತು. ಇಬ್ಬರೂ ಕನ್ನಡ, ಮರಾಠಿ, ಉರ್ದು, ಸಂಸ್ಕೃತ ಲಿಪಿಗಳನ್ನು ಕಲಿತು ಆಯಾ ಭಾಷೆಗಳಲ್ಲಿ ಓದು-ಬರೆಹಗಳನ್ನು ರೂಢಿಸಿಕೊಂಡರು. ಹತ್ತು ವರ್ಷಗಳಲ್ಲಿ ಎಲ್ಲ ಭಾಷೆಗಳಲ್ಲಿ ನಿಷ್ಣಾತರಾದರು. ಅಣ್ಣ-ತಂಗಿಯರಿಬ್ಬರೂ ಅನ್ಯೋನ್ಯವಾಗಿದ್ದರು. ಇವರೊಂದಿಗೆ ವಿದ್ಯಾಭ್ಯಾಸ ಮಾಡಲು ೨೦೦ ಗಂಡು ಹುಡುಗರು ಮತ್ತು ೨೦೦ ಹೆಣ್ಣುಮಕ್ಕಳ ದೊಡ್ಡ ಪಾಠಶಾಲೆಯನ್ನು ನಿರ್ಮಿಸಲಾಗಿತ್ತು. ೧೦ ಜನ ಹಿರಿಯ ಶಾಸ್ತ್ರಿಗಳು ಮತ್ತು ಪಂತೋಜಿ[1]ಯವರನ್ನು ನೇಮಿಸಲಾಗಿತ್ತು. ಇವರಲ್ಲಿ ಶಂಕರಭಟ್ಟರು ದೊಡ್ಡ ವಿದ್ವಾಂಸರಾಗಿದ್ದರು. ಇವರು ಸಂಸ್ಕೃತದಲ್ಲಿ ನಿಷ್ಣಾತರಾಗಿರುವದರ ಜೊತೆಗೆ ಸಾಹಿತ್ಯ, ವ್ಯಾಕರಣ, ನ್ಯಾಯಶಾಸ್ತ್ರಗಳಲ್ಲಿ ಅದ್ವಿತೀಯ ಪಂಡಿತರಾಗಿದ್ದರು. ಪಾಠಶಾಲೆಯ ವಿದ್ಯಾರ್ಥಿಗಳಲ್ಲಿ ನೂರು ಜನ ಹವೀಕರು, ನೂರು ಜನ ಗೌಡ ಸಾರಸ್ವತರು, ನೂರು ಜನ ನಾಡವರು, ನೂರು ಜನ ಒಕ್ಕಲಿಗರು, ಐವತ್ತು ಜನ ಲಿಂಗಾಯತರು, ಇಪ್ಪತ್ತು ಜನ ದೇಶಸ್ಥರು ಮತ್ತು ಇಪ್ಪತ್ತು ಜನ ಮಾಧ್ವರು ಇದ್ದರು[2] ಮಲ್ಲಮ್ಮಾಜಿ ಎಲ್ಲ ವಿದ್ಯಾರ್ಥಿಗಳಲ್ಲಿ ಅದ್ವಿತೀಯ ಮೇಧಾವಿಯಾಗಿದ್ದಳು.

---

೧. ಪಂತ=ಪಂತೋಜಿ=ಪಂಡಿತ

೨. ಇಲ್ಲಿ ಒಟ್ಟು ಸಂಖ್ಯೆ ತಪ್ಪಿದೆ. ಪಾಠಶಾಲೆಯಲ್ಲಿ ಒಟ್ಟಿಗೆ ಸಮೂದಿಸಿದ ೪೦೦ ವಿದ್ಯಾರ್ಥಿಗಳ ಸಂಖ್ಯೆ ಜಾತಿಯ ಪ್ರಕಾರ ವಿಭಜಿಸಿದಾಗ ೪೯೦ ಆಗುತ್ತದೆ!

ಅವಳ ಬುದ್ಧಿಮತ್ತೆಯನ್ನು ಎಲ್ಲರೂ ಗುಣಗಾನ ಮಾಡುವವರೇ ಆಗಿದ್ದರು. ಹನ್ನೆರಡನೆಯ ವಯಸ್ಸಿಗೆ ಮಲ್ಲಮ್ಮಾಜಿಗೆ ಕನ್ನಡ ಮತ್ತು ಸಂಸ್ಕೃತದಲ್ಲಿ ಕವಿತಾಶಕ್ತಿ ಕಾಣಿಸಿಕೊಂಡಿತು. ಎಲ್ಲರಿಗೂ ಇದರಿಂದ ಸೋಜಿಗವುಂಟಾಯಿತು. ಸದಾಶಿವನಾಯಕನೂ ಕನ್ನಡದಲ್ಲಿ ಪ್ರಾವೀಣ್ಯವನ್ನು ಪಡೆದಿದ್ದ. ಆತನ ಕವಿತೆ, ಮಧುರ ಶೈಲಿಯನ್ನು ಹೊಂದಿದ್ದು ರಂಜಕವಾಗಿರುತ್ತಿತ್ತು. ಮಧುಲಿಂಗನಾಯಕನು ಎಲ್ಲ ಹುಡುಗರಿಗೂ ಯುದ್ಧ ವಿದ್ಯೆಗೆ ಏರ್ಪಾಡು ಮಾಡಿ, ರಣವೀರಸಿಂಗ್ ಎಂಬ ಪ್ರಸಿದ್ಧ ವೀರ ಸೈನಿಕನನ್ನು ಈ ಕೆಲಸಕ್ಕೆ ನೇಮಿಸಿದ. ಮೊದಲಿಗೆ ಸದಾಶಿವನಾಯಕನು ಖಡ್ಗದ ಪ್ರಯೋಗ ಕಲಿಯಲಾರಂಭಿಸಿದಾಗ ಮಲ್ಲಾಂಬೆಯೂ(ಮಲ್ಲಮ್ಮನೂ) ಅದರಲ್ಲಿ ಕೈಚಳಕ ತೋರಿದಳು. ಧನುರ್ವಿದ್ಯೆಯಲ್ಲಿಯೂ ಮಿಗಿಲೆನಿಸಿಕೊಂಡಳು. ಕುದುರೆ ಸವಾರಿ ಮತ್ತು ಬಾಣಪ್ರಯೋಗದಲ್ಲಿ ಪುರುಷರಂತಿದ್ದಳು. ತೀಕ್ಷ್ಣ ಗುರಿಯಿಂದ ಭಲ್ಲೆಯನ್ನು ಎಸೆಯಬಲ್ಲವಳಾಗಿದ್ದಳು. ಈಶ್ವರೇಚ್ಛೆಯಿಂದ ಅವಳಲ್ಲಿ ಶೌರ್ಯ ಹುಟ್ಟಾ ಕಾಣಿಸಿಕೊಂಡಿತ್ತಲ್ಲದೇ ಚಿಕ್ಕಂದಿನಿಂದ ಯುದ್ಧವಿದ್ಯೆಯಲ್ಲಿ ಹೆಚ್ಚಿನ ಪರಾಕ್ರಮ ತೋರಿಸುತ್ತಿದ್ದಳು. ಹೆದರಿಕೆಯೆಂಬುದನ್ನೇ ಅರಿಯಳು. ಹೀಗಾಗಿ ಗಂಡು-ಹೆಣ್ಣುಮಕ್ಕಳ ನಡುವೆ ಪರಾಕ್ರಮಶಾಲಿಯಾಗಿ, ಶೂರಳಾಗಿ ಬೆಳೆದಳು. ಗುರು, ದೇವತೆ, ತಂದೆ-ತಾಯಿಗಳ ವಿಷಯದಲ್ಲಿ ಅವಳಿಗೆ ಅನನ್ಯ ಭಕ್ತಿಯಿತ್ತು. ದಿನಾಲು ಬೆಳಿಗ್ಗೆ ಎದ್ದು ಪ್ರಾತರ್ವಿಧಿ ಮುಗಿಸಿ, ಸ್ನಾನಮಾಡಿ, ಅಣ್ಣನೊಡನೆ ಶಿವಪೂಜೆ ಮಾಡುವಳು ನಂತರ ಪಾಠಶಾಲೆಗೆ ಹೋಗುವಳು."೧

ಆಳರಸರ ವರ್ಗದಲ್ಲಿ ಮಹಿಳೆಯರಿಗೂ ಗಂಡಸರಂತೆಯೇ ವಿದ್ಯೆ ಲಭಿಸುತ್ತಿತ್ತು ಎಂಬುದು ಮೇಲಿನ ಚರಿತ್ರೆಯಿಂದ ಸ್ಪಷ್ಟವಾಗುತ್ತದೆ. ೧೭ನೇ ಶತಕದಲ್ಲಿ ಗಂಡು-ಹೆಣ್ಣುಮಕ್ಕಳಿಗೆ ಕೂಡಿಯೇ ಪಾಠಶಾಲೆ ನಡೆಸಿದ್ದು ಸ್ವಾದಿ ಅರಸರ ವಿದ್ಯಾಪ್ರೇಮ ಮತ್ತು ವಿಶಾಲ ಮನೋಭಾವವನ್ನು ಎತ್ತಿ ತೋರಿಸುತ್ತದೆ.

ಈಗ ಈ ಕಿರುಹೊತ್ತಗೆ ಡಾ। ಚಿದಾನಂದ ಮೂರ್ತಿಗಳ ಕನ್ನಡ ಶಕ್ತಿ ಕೇಂದ್ರದಿಂದ ಪ್ರಕಟವಾಗಿದೆ.

## ೨
## ಹಿರೇಮಣಿ ಪದ್ಧತಿ

ಇಟಲಿಯ ಪ್ರವಾಸಿ ಪೀಟ್ರೊಡೆಲ್ಲಾವಾಲ್ಲೆಯು ಕ್ರಿ.ಶ. ೧೬೨೩ರಲ್ಲಿ ಇಕ್ಕೇರಿಯನ್ನು ಸಂದರ್ಶಿಸಿದ್ದ. ದೇವಾಲಯದ ಆವರಣದಲ್ಲಿ ತಾನು ನೋಡಿದ ಹಳ್ಳಿಯ ಶಾಲೆಯ ಗಣಿತ ಪಾಠದ ಉಜಳಣಿಯ ಕ್ರಮವನ್ನು ಕಂಡು, ಮೆಚ್ಚಿಕೊಂಡು, ವಿವರಗಳನ್ನು ಬರೆದಿಟ್ಟಿದ್ದಾನೆ. "ದೇವಸ್ಥಾನದ ಮುಖಮಂಟಪದಲ್ಲಿ ನಾಲ್ಕು ಹುಡುಗರಿದ್ದರು. ಗುರುವಿನ ಬಳಿ ಈ ಮೊದಲು ಕಲಿತ ಪಾಠವನ್ನು ಮರೆಯದಂತೆ ಕಂಠಪಾಠ ಮಾಡಿಡಲು ರಾಗವಾಗಿ ಹೇಳುತ್ತಿದ್ದರು.

೧. 'ಶಿವಾಜಿ-ಮಲ್ಲಮ್ಮಾ ಸಮರೋತ್ಸವ' ಮರಾಠಿ ಹಸ್ತಪ್ರತಿ; ಫುಟ ೬-೯
ಈ ಹಸ್ತಪ್ರತಿಯ ಪ್ರತಿಯನ್ನು ಒದಗಿಸಿದ್ದಕ್ಕಾಗಿ ಡಾ। ಶ್ರೀನಿವಾಸ ಹಾವನೂರರಿಗೆ ಋಣಿಯಾಗಿದ್ದೇನೆ.

'ಒಂದೊಂದ್ಲೆ ಒಂದು' ಈ ರೀತಿ. ಒಬ್ಬ ಹುಡುಗ, ರಾಗವಾಗಿ ಹೇಳುತ್ತ, ಹೇಳಿದ್ದನ್ನು ಪೆನ್ ಮತ್ತು ಕಾಗದವನ್ನು ಬಳಸದೇ ಎದುರಿಗೆ ಒಟ್ಟಿದ ಮಳಲರಾಶಿಯ ಮೇಲೆ ಬೆರಳಿನಿಂದ ಬರೆಯುತ್ತಿದ್ದ. ಈತ ಉಚ್ಚರಿಸಿ ಬರೆದ ಮೇಲೆ ಇತರರೂ ಅದನ್ನೇ ಉಚ್ಚರಿಸಿ ಬರೆಯುತ್ತಿದ್ದರು. ನಂತರ ಮೊದಲ ಬಾಲಕ ಮತ್ತೆ ಹಾಡಿ ಬರೆದ. ಇತರ ಹುಡುಗರು ಅನುಕರಿಸಿದರು. ಸ್ಥಳವೆಲ್ಲ ಅಂಕಿಗಳಿಂದ ತುಂಬಿದಾಗ, ಕೈಯಿಂದ ಬರೆದದ್ದನ್ನು ಅಳಿಸಿ, ಬೇಕಾದಾಗ ಇನ್ನಷ್ಟು ಮಳಲು ಹಾಕಿ ಪಾಠವನ್ನು ಮುಂದುವರಿಸಿದರು. ಇದೇ ರೀತಿ ಇತರ ವಿಷಯಗಳ ಓದು-ಬರೆಹಗಳನ್ನು ಲೇಖನಿ ಮತ್ತು ಕಾಗದ ಬಳಸದೇ ಕಲಿಯುತ್ತಿರುವದಾಗಿ ಹೇಳಿದರು. ಗುರುವು ಇಲ್ಲದಾಗ, ಕೆಲ ಅಂಶ ಮರೆತರೆ ಅಥವಾ ತಪ್ಪಿದರೆ ಏನು ಮಾಡುತ್ತೀರಾ? ಎಂದು ಕೇಳಿದಾಗ, ನಾಲ್ವರಿಗೂ ಒಂದೇ ಭಾಗ, ಒಂದೇ ಬಾರಿಗೆ ಮರೆಯುವ ಇಲ್ಲವೇ ತಪ್ಪಿಹೋಗುವ ಸಾಧ್ಯತೆ ಇಲ್ಲವೆಂದು ಸರಿಯಾಗಿಯೇ ಹೇಳಿದರು. ಒಬ್ಬನು ತಪ್ಪಿದರೆ, ಇತರರು ತಿದ್ದಲಿಕ್ಕೆ ಅವಕಾಶವಿದ್ದು, ಎಲ್ಲರೂ ಜೊತೆಗೂಡಿ ಅಭ್ಯಸಿಸುತ್ತೇವೆಂದರು. ಇದೊಂದು ತುಂಬ ಚೆನ್ನಾದ, ಸರಳ, ಸುಭದ್ರ ಮತ್ತು ಅಗ್ಗದ ಅಭ್ಯಾಸಕ್ರಮವೆನಿಸಿತು." (ಪೀಟ್ರೊಡೆಲ್ಲಾ ವಾಲ್ಲೆಯ ಪ್ರವಾಸಗಳು. ಸಂ.: ಎಡ್ವರ್ಡ್ ಗ್ರೇ, ಸಂಪುಟ ೨, ಪು.೨೭೧)

ಈ ಹಿರೇಮಣಿ ಅಥವಾ ಹಿರೇಮಾಣಿಯ ಪದ್ಧತಿ, ಭಾರತದಲ್ಲಿ ತುಂಬ ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿತ್ತು. ನಾಲಂದ ವಿಶ್ವವಿದ್ಯಾಲಯದಲ್ಲಿ ಹಿರಿಯ ವಿದ್ಯಾರ್ಥಿಗಳು (ಭಿಕ್ಕುಗಳು) ಕಿರಿಯರನ್ನು ತರಬೇತುಗೊಳಿಸುವದನ್ನು ಇತ್ಸಿಂಗ್ ಗಮನಿಸಿದ್ದ. ಗುರುವಿನ ಮನೆಯಲ್ಲಿದ್ದು ಕಲಿಯುವವರಿಗೆ, ಈ ಪದ್ಧತಿ ತುಂಬ ನೆರವು ನೀಡುವದರ ಜೊತೆಗೆ ಗುರುವಿಗೆ, ಕಲಿಯುವಿಕೆಯ ವಿವಿಧ ಹಂತಗಳಲ್ಲಿದ್ದ ವಿದ್ಯಾರ್ಥಿಗಳಿಗೆ ಕಲಿಸಿ ಉಜಳಣಿ ಮಾಡಿಸಲು ನುರಿತ ವಿದ್ಯಾರ್ಥಿಗಳ ಸಹಾಯ ಲಭಿಸುತ್ತಿತ್ತು. ಭಾರತದ ಎಲ್ಲ ಪ್ರದೇಶಗಳಲ್ಲಿ, ಮುಸ್ಲಿಂ ಸಂಸ್ಥೆಗಳಲ್ಲಿ ಸಹ-ಈ ಪದ್ಧತಿ ಪ್ರಚಲಿತವಿತ್ತು. ಮುಂದೆ ಡಾ। ಎಂಡ್ರ್ಯುಬೆಲ್ ಎಂಬ ಮಿಶನರಿಯು ೧೮ನೇ ಶತಕದ ಕೊನೆಯಲ್ಲಿ ಈ ದೇಶೀ ವಿದ್ಯಾಕ್ರಮದಿಂದ ಆಕರ್ಷಿತನಾಗಿ, ಶಿಕ್ಷಕರ ತೀವ್ರ ಕೊರತೆಯಿಂದ ಬಳಲುತ್ತಿದ್ದ ಇಂಗ್ಲೆಂಡಿನ ಶಾಲೆಗಳಲ್ಲಿ ಬಳಕೆಗೆ ತಂದನು. ಅವನ ಪುಸ್ತಕ, "ಯಾವುದೊಂದು ಶಾಲೆ, ಇಲ್ಲವೇ ಕುಟುಂಬವು ತನ್ನ ಶಿಕ್ಷಕ ಅಥವಾ ಪಾಲಕನಿಂದ ಸ್ವಯಂ ಶಿಕ್ಷಣ ಪಡೆಯಲು ಸಾಧ್ಯ"ವೆಂದು ಸೂಚಿಸುವ ಮದ್ರಾಸಿನ ಅನಾಥಾಲಯ(Asylum)ದಲ್ಲಿ ಕೈಕೊಂಡ 'ಶೈಕ್ಷಣಿಕ ಪ್ರಯೋಗ' ಎಂಬ ದೀರ್ಘ ಶೀರ್ಷಿಕೆಯನ್ನು ಹೊಂದಿತ್ತು. "ಮದ್ರಾಸ್ ಸಿಸ್ಟಮ್" ಎಂದು ಈ ಹಿರೇಮಾಣಿ ಪದ್ಧತಿಯು ಹೊಸ ಅಭಿದಾನ ಪಡೆದು ಇಂಗ್ಲಂಡಿನಲ್ಲಿ ಬಹಳಷ್ಟು ಪ್ರಚಾರ ಗಿಟ್ಟಿಸಿತು. ಸುಮಾರು ೫೦ ವರ್ಷಗಳ ಕಾಲ, ಶಿಕ್ಷಕರ ಕೊರೆಯನ್ನು ಎದುರಿಸಲು ಈ ಪದ್ಧತಿ ಸಾಕಷ್ಟು ಸಹಾಯಕವೂ ಆಯಿತು. ಬೆಲ್ ಮತ್ತು ಲ್ಯಾಂಕ್ಯಾಸ್ಟರ್ ಎಂಬ ಅವನ ಸಹೋದ್ಯೋಗಿ, ಈ ಪದ್ಧತಿಯನ್ನು ಹುಡುಕಿದ್ದು ತಾವೇ ಎಂದು ಪೈಪೋಟಿ ನಡೆಸಿದ್ದನ್ನು ಗಮನಿಸಿದ ಜಾನ್ ಬೋಲಂಡ್ ಎಂಬಾತನು, ಕ್ರಿ.ಶ. ೧೮೦೦ರಲ್ಲಿ ಈ ರೀತಿ ಉಲ್ಲೇಖಿಸಿದ್ದಾನೆ.

"ಭಾರತೀಯರು ಯಾವಾಗಲೂ ತಿಳಿವಿನ ಹೊಸ ಆಯಾಮಗಳನ್ನು ಉಪೇಕ್ಷಿಸುವವರು, ಮಂದಗತಿಯಲ್ಲಿ ಸಾಗುವವರು ಎಂದು ನಾವು ದೂಷಿಸುತ್ತಲೇ ಇರುತ್ತೇವೆ. ಆದರೆ ಯುರೋಪಿನ ಜನ, ಈ ಹೊಸ ಶೈಕ್ಷಣಿಕ ಶೋಧವನ್ನು ಪರಿಚಯಿಸಿದ ಎರಡು ಶತಕಗಳವರೆಗೂ ಬಳಸಿಕೊಳ್ಳಲಿಲ್ಲ. ಅಲ್ಲದೇ ಈ ಪದ್ಧತಿಯ ಮೂಲಸ್ಥಾನವನ್ನು ಬಹಿರಂಗ ಪಡಿಸದೇ ಇಬ್ಬರು ಮಹನೀಯರು, ಸಂಶೋಧನೆಯ ಪ್ರಥಮ ಗೌರವಕ್ಕೆ ತಾವು ಭಾಜನರು ಎಂದು ಸಹ ವಾದಿಸಿದ್ದಾರೆ. ಇತ್ತೀಚೆಗೆ ಮಾತ್ರ ಈ ಪ್ರಾಚೀನ ಪದ್ಧತಿ, ಭಾರತದಿಂದ ಎರವಲು ಪಡೆದದ್ದು ಎಂದು ಪ್ರಮಾಣಿತವಾಗಿದೆ. ಎಲ್ಲ ಶೋಧಗಳಂತೆ ಆಚರಣೆಯಲ್ಲಿ ಬಂದಾಗ ಮೂಲರೂಪ ತೀವ್ರವಾಗಿ ಮಾರ್ಪಡುವಂತೆ ಇದೂ ಮಾರ್ಪಟ್ಟಿದೆ.

"ಶಿಕ್ಷಣಕ್ಕೆ ಹಿಂದುಗಳು ಕೊಟ್ಟಷ್ಟು ಗೌರವವನ್ನು ಇನ್ನಾವ ಜನಾಂಗವೂ ಕೊಟ್ಟಿರಲಿಕ್ಕಿಲ್ಲ. ವಿದ್ಯಾಲಯಗಳ ಸ್ಥಾಪನೆಗೆ ಅವರು ಅಡ್ಡಿಯನ್ನು ಮಾಡುವದಿಲ್ಲ. ಅಜ್ಞಾನ-ನೋವುಗಳ ಹಲವಿಧ ನಿವಾರಣೆಗೆ ತಮ್ಮವೇ ಕೆಲ ಸಂಸ್ಥೆಗಳನ್ನು ಕಟ್ಟಿಕೊಂಡಿದ್ದಾರೆ. ಸಂಶೋಧನಾತ್ಮಕ ವಿಚಾರ ವಿನಿಮಯಗಳ ಮನೋಭಾವವನ್ನು ಎಂದೂ ತಿರಸ್ಕರಿಸಿಲ್ಲ. ಆದರೆ ಈ ಮನೋಭಾವವನ್ನು ಉಪೇಕ್ಷಿಸದ, ವಿರೋಧಿಸದ ಸರಕಾರದ ಅವಶ್ಯಕತೆ ಇದೆ ಎಂದು ಹೇಳುವರು" (ವಾಕರ್ ಮತ್ತು ಬೋಲಂಡ್‌ರ ಕಾಗದ ಪತ್ರಗಳು. 'ದಿ ಬ್ಯೂಟಿಫುಲ್ ಟ್ರೀ' (ಸುಂದರ ವೃಕ್ಷ) ಧರ್ಮಪಾಲ್, ಪುಟ ೨೬೦-೨೬೧)

## ೩

ಎ.ಡಿ.ಕ್ಯಾಂಪಬೆಲ್, ಕಲೆಕ್ಟರ್ ಬಳ್ಳಾರಿ ಇವನ ವರದಿ (೧೮೨೨)

## ಕೆಲವು ಅವತರಣಿಕೆಗಳು

೪) ಬಳ್ಳಾರಿ ಜಿಲ್ಲೆಯಲ್ಲಿ-ಇಂಗ್ಲಿಷ್ ಭಾಷೆಯನ್ನು ಒಂದೇ ಶಾಲೆಯಲ್ಲಿ ಕಲಿಸಲಾಗುತ್ತದೆ; ತಮಿಳನ್ನು ನಾಲ್ಕು ಶಾಲೆಗಳಲ್ಲಿ, ಫಾರ್ಸಿ ಭಾಷೆಯನ್ನು ಇಪ್ಪತ್ತೊಂದರಲ್ಲಿ, ಮರಾಠಿ(Mahratta) ಯನ್ನು ಇಪ್ಪತ್ಮೂರರಲ್ಲಿ ಮತ್ತು ಕನ್ನಡವನ್ನು ಇನ್ನೂರ ಮೂವತ್ತೈದು ಶಾಲೆಗಳಲ್ಲಿ ಕಲಿಸಲಾಗುತ್ತಿದೆ. ಇವನ್ನು ಬಿಟ್ಟರೆ, ಕೇವಲ ಬ್ರಾಹ್ಮಣರಿಗೆ ಮೀಸಲಾದ ಇಪ್ಪತ್ಮೂರು ಅಧ್ಯಾಪನ ಕೇಂದ್ರಗಳಿವೆ; ಅವುಗಳಲ್ಲಿ, ಸಂಸ್ಕೃತ ಭಾಷೆಯಲ್ಲಿ, ದೇವ-ಧರ್ಮಗಳಿಗೆ ಸಂಬಂಧಿಸಿದ ವಿದ್ಯೆ (theology), ಖಗೋಳಶಾಸ್ತ್ರ, ತರ್ಕ ಮತ್ತು ಕಾಯಿದೆ (law)ಗಳೆಂಬ ಹಿಂದೂ ವಿಜ್ಞಾನವನ್ನು ಅಪೂರ್ಣವಾಗಿ ಇನ್ನೂ ಕಲಿಸುತ್ತಿದ್ದಾರೆ.

೫) ಹಿಂದೂ ವಿಜ್ಞಾನ ಕಲಿಸುವ ಈ ಸಂಸ್ಕೃತ ಸಂಸ್ಥೆಗಳಲ್ಲಿ ಬಹುಶಃ ವಯಸ್ಕಾದವರನ್ನು ಒಳಗೊಂಡು ಯುವಕರಿಗೆ ಕಲಿಸುವ ಪದ್ಧತಿಯು, ದೇಶಿ ಭಾಷೆಗಳಲ್ಲಿ ಓದು-ಬರಹ-ಗಣಿತಗಳನ್ನು ಬಾಲಕರಿಗೆ ಕಲಿಸುವ ಯೋಜನೆಗಿಂತ ತೀರ ಭಿನ್ನವಾಗಿದೆ. ದೇಶದ ಸಾಮಾನ್ಯ ಜನತೆಯು ಹೆಚ್ಚಾಗಿ ಹಿಂದುಗಳಿಗೇ ಸೀಮಿತವಾಗಿದ್ದರಿಂದ, ಫಾರ್ಸೀ

ಭಾಷೆ ಕಲಿಸುವ ಮುಸಲ್ಮಾನರ ಶಾಲೆಗಳನ್ನು ಬೇರ್ಪಡಿಸಿ, ಹಿಂದಿನ ವಾಕ್ಯದಲ್ಲಿ ನಮೂದಿಸಿದ ಎರಡನೆಯ ಶಿಕ್ಷಣ ಪದ್ಧತಿಯ ರೂಪರೇಷೆಯನ್ನು ಕೊಡಲು ಯತ್ನಿಸುವೆ.

೬) ಸಾಮಾನ್ಯವಾಗಿ, ಐದು ವರ್ಷ ದಾಟಿದ ಮೇಲೆ, ಹಿಂದೂ ಬಾಲಕರ ಶಿಕ್ಷಣ ಪ್ರಾರಂಭವಾಗುತ್ತದೆ. ಹುಡುಗನನ್ನು ಕಳಿಸುವ ಶಾಲೆಯ ಶಿಕ್ಷಕನಿಗೆ ಮತ್ತು ಅವನ ವಿದ್ಯಾರ್ಥಿಗಳಿಗೆ, ಆ ಹುಡುಗನ ಕುಟುಂಬದವರ ಮನೆಯಲ್ಲಿ ಔತಣ ನೀಡಲಾಗುತ್ತದೆ. ಎಲ್ಲರೂ ಗಣೇಶನ ವಿಗ್ರಹದ ಸುತ್ತಲೂ ಕೂತಿರುತ್ತಾರೆ. ಕಲಿಯಲು ಉಪಕ್ರಮಿಸುವ ಹುಡುಗನನ್ನು ಮೂರ್ತಿಯ ಮುಂದೆ ಮೋರೆ ಮಾಡಿ ಕೂಡ್ರಿಸುತ್ತಾರೆ. ಅವನ ಸಮೀಪ ಕುಳಿತು ಶಾಲಾಶಿಕ್ಷಕನು ಧೂಪ ಸುಟ್ಟು, ನೈವೇದ್ಯ ಅರ್ಪಿಸಿ, ಶ್ರೀ ಗಣೇಶನು ಜ್ಞಾನವನ್ನು ದಯಪಾಲಿಸುವ ಒಂದು ಪ್ರಾರ್ಥನೆಯನ್ನು ಬಾಲಕನಿಂದ ಹೇಳಿಸುತ್ತಾನೆ. ಆಮೇಲೆ, ಅವನು ಬಾಲಕನಿಂದ ಆ ದೇವತೆಯ ಸಂಕೇತನಾಮವನ್ನು ಅಕ್ಕಿಯಲ್ಲಿ ಬೆರಳಿನಿಂದ ಬರೆಯಿಸುತ್ತಾನೆ. ಬಾಲಕನ ಪಾಲಕರು ತಮ್ಮ ಶಕ್ತ್ಯಾನುಸಾರ ಶಿಕ್ಷಕನಿಗೆ ಕಾಣಿಕೆ ಸಲ್ಲಿಸಿ ಕಳಿಸುತ್ತಾರೆ. ಮರುದಿನ ಮುಂಜಾನೆ ಬಾಲಕನು ತನ್ನ ವಿದ್ಯಾಭ್ಯಾಸದ ಮಹತ್ಕಾರ್ಯವನ್ನು ಆರಂಭಿಸುತ್ತಾನೆ.

೭) ಕೆಲವು ಬಾಲಕರು ಶಾಲೆಯಲ್ಲಿ ಕೇವಲ ಐದು ವರ್ಷ ಕಲಿಯುತ್ತಾರೆ; ಬಡತನ ಇಲ್ಲವೆ ಬೇರೆ ಕಾರಣಗಳಿಂದ ಪಾಲಕರು ತಮ್ಮ ಹುಡುಗರ ಶಿಕ್ಷಣ ನಿಲ್ಲಸಬೇಕಾಗುತ್ತದೆ. ಇಂಥ ಪ್ರಸಂಗಗಳಲ್ಲಿ ಮಕ್ಕಳಿಗೆ ಬರೇ ಕಲಿಕೆಯ ಸೋಂಕು ಮಾತ್ರ ತಟ್ಟುತ್ತದೆ. ಕೆಲವರು ತಮ್ಮ ಮಕ್ಕಳ ಮನಸ್ಸನ್ನು ಸಂಸ್ಕರಣಗೊಳಿಸುವದರಲ್ಲಿ ತುಂಬ ಆಸ್ಥೆ ವಹಿಸುವದರಿಂದ, ಸಂಬಂಧಪಟ್ಟ ವಿದ್ಯಾರ್ಥಿಗಳು ಹದಿನಾಲ್ಕು-ಹದಿನೈದು ವರ್ಷಗಳವರೆಗೂ ಶಾಲೆಗಳಲ್ಲಿ ತಮ್ಮ ಶಿಕ್ಷಣ ಮುನ್ನಡೆಸಿದ ಉದಾಹರಣೆಗಳು ಅಪರೂಪವಾಗಿಲ್ಲ.

೮) ಇಂಥ ವಿದ್ಯಾಲಯಗಳ ಪ್ರತಿದಿನದ ಆಂತರಿಕ ವ್ಯವಹಾರ ಕ್ರಮದಲ್ಲಿ, ಕೆಲವೇ ಅಪವಾದಗಳನ್ನು ಬಿಟ್ಟರೆ, ಯಾವ ವ್ಯತ್ಯಾಸವೂ ಕಂಡುಬರಲಿಕ್ಕಿಲ್ಲ. ಸಾಧಾರಣವಾಗಿ, ಶಾಲೆಗಳು ತೆರೆಯುವ ವೇಳೆ ಮುಂಜಾನೆ ಆರು ಗಂಟೆಗೆ. ಶಾಲೆಯಲ್ಲಿ ಕಾಲಿಡುವ ಪ್ರಥಮ ಬಾಲಕನನ್ನು ಗೌರವಿಸಲು, ಗುರುಗಳು ಅವನ ಅಂಗೈ ಮೇಲೆ “ಸರಸ್ವತಿ” (ಅಂದರೆ ವಿದ್ಯಾದೇವತೆ)ಯ ಹೆಸರನ್ನು ಬರೆದು, ದ್ವಿತೀಯ ಪ್ರವೇಶಕನಿಗೆ, ಸೊನ್ನೆಯ ಸಂಜ್ಞೆಯನ್ನು ಮೂಡಿಸಿ, ಅವನು ಹೊಗಳಿಕೆ-ತೆಗಳಿಕೆಗಳೆರಡಕ್ಕೂ ಬಾಧ್ಯಸ್ಥನಲ್ಲವೆಂಬಂತೆ ಸೂಚಿಸಿ, ಮೂರನೆಯವನಿಗೆ ಸೌಮ್ಯ ಪೆಟ್ಟು ಕೊಟ್ಟು, ನಾಲ್ಕನೆಯವನಿಗೆ ಎರಡು ಪೆಟ್ಟು, ತರುವಾಯ ಬಂದವರಿಗೆಲ್ಲ ಒಂದೊಂದರಂತೆ ಅಧಿಕ ಪೆಟ್ಟುಗಳನ್ನು ಸಲ್ಲಿಸುವರು. ದೇಶಿ ಶಾಲೆಗಳಲ್ಲಿ ಈ ಬಡಿತಗಳ ಬಳಕೆ ಬಲು ಬಿರುಸು. ಸೋಮಾರಿ ವಿದ್ಯಾರ್ಥಿಯನ್ನು ಥಳಿಸಿ, ಕೆಲವೊಮ್ಮೆ ಎರಡೂ ಕೈಗಳಿಂದ ಸೂರಿಗೆ ಕೂಡಿಸಿದ ಚಕ್ರ ರಾಟಿಗೆ ನೇತಾಡಿಸಿ, ಇಲ್ಲವೆ ಮಂಡಿ ಊರಿ, ಎದ್ದೇಳುವ (ಉಟಾಬಸ್) ಶಾಸನ ವಿಧಿಸುವರು. ಇದು ನೋಯಿಸಿ ದಣಿಸುವದಾದರೂ ಬಹುಶಃ ಆರೋಗ್ಯಕರ ದಂಡನೆಯ ವಿಧಿಯಿರಬಹುದು.

೯) ಎಲ್ಲರೂ ಕಲೆತ ನಂತರ, ವಿದ್ಯಾರ್ಥಿಗಳ ಸಂಖ್ಯೆ ಮತ್ತು ಸಾಧನೆಯ ಮಟ್ಟಗಳನ್ನು ಅನುಲಕ್ಷಿಸಿ, ಬೇರೆ ಬೇರೆ ವರ್ಗಗಳಲ್ಲಿ ಅವರನ್ನು ವಿಂಗಡಿಸುವರು. ಕೆಳಗಿನ ತರಗತಿಗಳನ್ನು ಹಿರೇಮಣೆಯ ಹತೋಟಿಯಲ್ಲಿಟ್ಟು, ಮೇಲಿನವುಗಳನ್ನು ಶಿಕ್ಷಕರೇ ತಮ್ಮಲ್ಲಿ ಇಟ್ಟುಕೊಳ್ಳುವರು, ಆದರೂ, ಅದೇ ಕಾಲಕ್ಕೆ, ಇಡೀ ಶಾಲೆಯ ಮೇಲೆ ಅವರ ಕಣ್ಣು ಹರಿದಾಡುತ್ತಿರುವದು. ಸಾಧಾರಣವಾಗಿ, ಶಾಲೆಗಳಲ್ಲಿ ನಾಲ್ಕು ವರ್ಗಗಳಿರುತ್ತವೆ. ವಿದ್ಯಾರ್ಥಿಯು ತನ್ನ ಯೋಗ್ಯತೆ- ಪ್ರಗತಿಗಳಿಗೆ ಅನುಗುಣವಾಗಿ ಒಂದು ವರ್ಗದಿಂದ ಮತ್ತೊಂದಕ್ಕೆ ಏರುವನು. ಶಾಲೆಯನ್ನು ಪ್ರವೇಶಿಸಿದ ಕೂಡಲೆ, ಬಾಲಕನ ಆದ್ಯ ಕರ್ತವ್ಯವಾವದೆಂದರೆ, ಅಕ್ಷರ ಜ್ಞಾನ ಪಡೆಯುವದು. ಇದನ್ನು ಅವನು ಉಸುಕಿನಲ್ಲಿ ಬೆರಳಿನಿಂದ ಬರೆದು ಕಲಿಯುತ್ತಾನೆ; ಯುರೋಪದ ರಾಷ್ಟ್ರಗಳಲ್ಲಿ, ವರ್ಣಮಾಲೆಯನ್ನು ಉಚ್ಚರಿಸಿ ಕಲಿಯುವ ತೆರದಲ್ಲಿ ಅಲ್ಲ. ಉಸುಕಿನಲ್ಲಿ ಬರೆಯುವದನ್ನು ಅವನು ಹಸ್ತಗತ ಮಾಡಿಕೊಂಡ ನಂತರ, ತಾಳೆ ಎಲೆಗಳ ಮೇಲೆ ಕಬ್ಬಿಣದ ಕಡ್ಡಿಯಿಂದ, ಇಲ್ಲವೆ ಕಾಗದದ ಮೇಲೆ ಗಲಗಿನಿಂದ ಬರೆಯುವ ವಿಶೇಷ ವಿನಾಯತಿ ಪಡೆಯುತ್ತಾನೆ. ಕೆಲವೊಮ್ಮೆ, ಎಲೆಗಳ ಮೇಲೆ ಮತ್ತು ಪಾಟಿಕಲ್ಲಿನಂತೆ ಉಪಯೋಗಿಸುವ ಹುಲ್ಲಿನ ಬಟ್ಟೆ ಅಥವಾ ಕಡತಗಳ ಮೇಲೆ, ಪೆನ್ಸಿಲುಗಳಂತೆ ಇರುವ ಬಳಪದಿಂದ ಸಹ ಬರೆಯಬಹುದು. ಈ ಜಿಲ್ಲೆಯಲ್ಲಿ ಕೊನೆಯೆರಡು ಪದ್ಧತಿಗಳು ವಿಶೇಷ ಬಳಕೆಯಲ್ಲಿವೆ. ಇವುಗಳಲ್ಲೊಂದು ದೀರ್ಘಾಕಾರದ ಚತುರಸ್ರ ಹಲಿಗೆಯು, ಸುಮಾರು ಒಂದಡಿ ಅಗಲವಾಗಿ, ಮೂರು ಅಡಿ ಉದ್ದವಿರುತ್ತದೆ. ಇದನ್ನು ಉಜ್ಜುಗೊರಡಿನಿಂದ ಉಜ್ಜಿ, ನಯಗೊಳಿಸಿ ಮೇಲೆ ಸ್ವಲ್ಪ ಅಕ್ಕಿಯನ್ನೂ ಇದ್ದಲಿಪುಡಿಯನ್ನೂ ಹರಡಿದ ನಂತರ ಅದು ಬಳಕೆಗೆ ಅಣಿಯಾಗುತ್ತದೆ. ಮತ್ತೊಂದು ಸಲಕರಣೆಯನ್ನು ಅರಿವೆಯಿಂದ ತಯಾರಿಸುತ್ತಾರೆ; ಮೊದಲು ಅದನ್ನು ಗಂಜಿನೀರಿನಲ್ಲಿ ಇಳಿಸಿ, ಮರಗಟ್ಟಿಸಿ, ಇಮ್ಮಡಿಯಾಗಿ ಮಡಚಿ, ಹೊತ್ತಿಗೆಯ ರೂಪಕೊಟ್ಟು, ಅಂಟಿನಿಂದ ಇದ್ದಲಿಪುಡಿಯನ್ನು ಮೇಲಿಂದ ಮೇಲೆ ಲೇಪಿಸುವರು. ಒಣಗಿದ ನಂತರ, ಅದರ ಮೇಲೆ ಬರೆದಿದ್ದನ್ನು ತೊಯ್ದ ಬಟ್ಟೆಯಿಂದ ಅಳಿಸಬಹುದು. ಬರೆಯುವ ಪೆನ್ಸಿಲಿಗೆ "ಬುಟ್ಟಪ" (ಬಳಪ) ಅನ್ನುವರು. ಅದೊಂದು ಬಿಳೀ ಜೇಡಿಮಣ್ಣಿನ ತರದ್ದಾಗಿದ್ದು, ಕ್ರೇಯನ್(ಬಣ್ಣ ಹಾಕಿದ ಸೀಮೇ ಸುಣ್ಣದ ಕಡ್ಡಿ ಅಥವಾ ಬಳಪ)ವನ್ನು ಹೋಲುತ್ತದೆ. ಆದರೆ ಅದಕ್ಕಿಂತ ಬಿರುಸು.

೧೦) ಅಕ್ಷರಗಳನ್ನು ಪೂರ್ತಿಯಾಗಿ ಅರಿತುಕೊಂಡು, ವಿದ್ಯಾರ್ಥಿಯು ಕ್ರಮೇಣ ಸ್ವರಾಂತ ವ್ಯಂಜನ(ಕಾಗುಣಿತ)ಗಳನ್ನು, ಶಬ್ದಗಳನ್ನು, ಜಂಟಿ ಶಬ್ದಗಳನ್ನು, ನಂತರ ಜನ-ಹಳ್ಳಿ-ಪಶು ಇತ್ಯಾದಿಗಳ ಹೆಸರುಗಳನ್ನು, ಕೊನೆಯಲ್ಲಿ ಗಣಿತ ಸಂಖ್ಯೆ-ಸಂಜ್ಞೆಗಳನ್ನು ರೂಢಿಸಿಕೊಳ್ಳುವನು. ಆ ಮೇಲೆ, ಮಗ್ಗಿಗಳ ಕೋಷ್ಟಕವನ್ನು ಬಾಯಿಪಾಠಮಾಡಿ, ಒಂದರಿಂದ ನೂರರತನಕ ಎಣಿಸಲು ಕಲಿತು, ಹಣದ ಸುಲಭ ಸಂಕಲನ-ವ್ಯವಕಲನಗಳನ್ನೂ ಗುಣಾಕಾರ-ಭಾಗಾಕಾರ ಗಳನ್ನೂ ಅಭ್ಯಾಸ ಮಾಡಿಕೊಂಡು, ಚಿಕ್ಕಪುಟ್ಟ ಲೆಕ್ಕ ಮಾಡಲು

ಕಲಿತುಕೊಳ್ಳುವನು. ಈಗ ವಿದ್ಯಾರ್ಥಿಗಳಿಗೆ ಪೂರ್ಣಾಂಕಗಳ ಭಿನ್ನ ಭಾಗಗಳನ್ನು ತಿಳಿಸಿ ಹೇಳುವದಕ್ಕೆ ಬಹಳ ಶ್ರಮ ವಹಿಸುತ್ತಾರೆ; ನಮ್ಮಲ್ಲಿಯಂತೆ, ದಶಮಾಂಶ ಪದ್ಧತಿಗಿಂತ ಬೇರೆಯಾದ ಪೂರ್ಣ ಸಂಖ್ಯೆಗಳನ್ನು ಚತುರ್ಥಾಂಶಗಳಿಂದ ಶಕ್ಯವಿದ್ದಷ್ಟು ಇಳಿಸಲು ಕಲಿಸುವರು; ಆ ಅಪೂರ್ಣಾಂಕ, ಅಂಕಕೋಷ್ಟಕ, ಅಂಕಸಂಕಲನ ಮತ್ತು ಮೂರು ಪಟ್ಟಿನ ಪ್ರಸ್ಥ ಪ್ರಮಾಣ, ಭಾರ ಪ್ರಮಾಣ ಮತ್ತು ಮಾನ ಪ್ರಮಾಣಗಳನ್ನು ವಿದ್ಯಾರ್ಥಿಗಳ ಮನಸ್ಸಿನಲ್ಲಿ ಚೆನ್ನಾಗಿ ಬಿಂಬಿಸುವಂತೆ, ದಿನಾಲು ಎರಡು ಬಾರಿ ಅವರನ್ನು ಸಾಲಾಗಿ ನಿಲ್ಲಿಸಿ, ಶಿಕ್ಷಕರು, ಹಿರೇಮಣಿಯು ಹೇಳಿದ್ದನ್ನು ಉಚ್ಚಸ್ವರದಲ್ಲಿ ಪುನಃ ಒಪ್ಪಿಸಿಕೊಳ್ಳುತ್ತಾರೆ.

೧೧) ಭಾರತೀಯ ಶಿಕ್ಷಣದ ಬೇರೆ ಪ್ರಭೇದಗಳು ಇಂತಿವೆ; ಶಿಕ್ಷಕನು ಸಾರ್ವಜನಿಕ ಮೂಲಗಳಿಂದ ಕೈಬರಹದ ಪತ್ರಗಳನ್ನು ಒಟ್ಟುಗೂಡಿಸಿ, ವಿವಿಧ ತರದ ಹಸ್ತಲಿಪಿಗಳನ್ನು ಗುರುತಿಸಿ ಓದಲು ಹಚ್ಚುವನು; ಸಾಮಾನ್ಯ ಪತ್ರವ್ಯವಹಾರ ಮಾಡಲಿಕ್ಕೆ, ಒಪ್ಪಂದ-ಕರಾರುಗಳ ಪತ್ರ ಬರೆಯಲಿಕ್ಕೆ, ಅಂಥವುಗಳನ್ನು ಓದಲಿಕ್ಕೆ, ಸಾಂಪ್ರದಾಯಿಕ ಕಥೆಗಳನ್ನು ಮತ್ತು ನೀತಿಯ ಆಖ್ಯಾಯಿಕೆಗಳನ್ನು ಕೇಳಿ-ಹೇಳಲಿಕ್ಕೆ, ನಾನಾ ವಿಧದ ಕವಿತೆ-ಕಾವ್ಯಗಳನ್ನು ಕಂಠಪಾಠಮಾಡಿ, ಸ್ಪಷ್ಟ ಉಚ್ಚಾರಸಹಿತ ಹಾಡಲಿಕ್ಕೆ ಮತ್ತು ಯಾರ ರಚನೆಯನ್ನಾದರೂ ತಪ್ಪದೇ ಅಡೆತಡೆಗಳಿಲ್ಲದೆ ಓದಲಿಕ್ಕೆ ಕಲಿಸುವನು.

೧೨) ಎಲ್ಲ ಶಾಲೆಗಳಲ್ಲಿ, ಅನೇಕ ಜಾತಿಗಳಲ್ಲಿ, ತಾರತಮ್ಯವಿಲ್ಲದೆ ಉಪಯೋಗಿಸುವ, ಸಾಮಾನ್ಯವೆನಿಸಿದ ರಾಮಾಯಣ, ಮಹಾಭಾರತ ಮತ್ತು ಭಾಗವತವೆಂಬ ಮೂರು ಪುಸ್ತಕಗಳಿವೆ. ಆದರೆ ಕೈಗಾರಿಕೆಗಳಲ್ಲಿ ತೊಡಗಿದವರ ಮಕ್ಕಳ ಸಲುವಾಗಿ, ಅವರವರ ಧಾರ್ಮಿಕ ಮತಗಳಿಗೆ ಅನುಗುಣವಾದ ಪುಸ್ತಕಗಳಿವೆ; ಇಂಥವು, ನಾಗಲಿಂಗಯ್ಯನ ಕೂಟ, ವಿಶ್ವಕರ್ಮ ಪುರಾಣ ಮತ್ತು ಕಮಲೇಶ್ವರ ಕಾಳಿಕಾ ಮಹಾತ್ಮ್ಯ ಎಂಬಿವೆ; ಲಿಂಗಧಾರಿಗಳು ಬಸವಪುರಾಣ, ರಾಘವಾಂಕನ ಕಾವ್ಯ, ಗಿರಿಜಾ ಕಲ್ಯಾಣ, ಅನುಭಾವಮೃತ, ಚನ್ನಬಸವ ಪುರಾಣ, ಗುರುಲಘು(?) ಇತ್ಯಾದಿಗಳನ್ನು ಪವಿತ್ರವೆಂದೆಣಿಸಿ ತಮ್ಮ ಅನೇಕ ಮತತತ್ವಗಳಿಗೆ ಉಪಯುಕ್ತವೆಂದು ಅಧ್ಯಯನ ಮಾಡುತ್ತಾರೆ.

೧೩) ಮನೋರಂಜನೆಗೆ ಸಾಧಾರಣವಾಗಿ ಓದುವ ಲಘುತರ ಕಥೆಗಳು, ಪಂಚತಂತ್ರ, ವೇತಾಳ ಪಂಚವಿಂಶತಿ, ಸುಪೂಕ್ತಹಲ್ಲರ(?) ಮೋಹನತರಂಗಿಣಿ ಇತ್ಯಾದಿಗಳು. ದೇಶಿ ಭಾಷೆಗಳ ನಿಯಮಗಳನ್ನು ಪ್ರತಿಪಾದಿಸುವ ಅನೇಕ ಶಬ್ದಕೋಶಗಳೂ ವ್ಯಾಕರಣಗಳೂ ಇವೆ. ಅವುಗಳ ಹೆಸರುಗಳು, ನಿಘಂಟು, ಅಮರ, ಶಬ್ದಾಂಬರ, ಶಬ್ದಮಣಿದರ್ಪಣ, ವ್ಯಾಕರಣ ಅಂತರ್ದೀಪ, ಆಂಧ್ರನಾಮ ಸಂಗ್ರಹ ಎಂಬವು. ಕೊನೆಯಲ್ಲಿ ನಮೂದಿಸಿದ ಮತ್ತು ಅವನ್ನು ಹೋಲುವ ಗ್ರಂಥಗಳಿಲ್ಲದಿದ್ದರೆ, ಭಾಷೆಯ ಸರಿಯಾದ ಇಲ್ಲವೆ ವ್ಯಾಪಕವಾದ ತಿಳುವಳಿಕೆ ಪಡೆಯಲಾಗುವುದಿಲ್ಲ; ಆದರೆ, ಈ ಪುಸ್ತಕಗಳ ಹಸ್ತಪ್ರತಿಗಳ ಬೆಲೆ ಅತಿಯಾಗಿರುವದರಿಂದಲೂ ಸಾಧಾರಣವಾಗಿ, ಶಿಕ್ಷಕರಲ್ಲಿರುವ ಬಡತನದಿಂದಲೂ

ಇಂಥ ಹೊತ್ತಿಗೆಗಳು ದೇಶಿ ಶಾಲೆಗಳಲ್ಲಿ ಕಾಣಲು ದುರ್ಲಭವಾಗಿವೆ; ಮತ್ತು ಸಿಗಬಹುದಾದವುಗಳಲ್ಲಿ ಲಿಪಿಕಾರರ ಅಜ್ಞಾನದಿಂದ, ಆಲಸ್ಯದಿಂದ, ಅಸಡ್ಡೆಯಿಂದ ತಪ್ಪುಗಳು ತುಂಬಿ ಹೋಗಿವೆ; ಎಲ್ಲಾ ವಿಧಗಳಿಂದ ಅವು ಅಶುದ್ಧ ಮತ್ತು ಅಪೂರ್ಣವಾಗಿವೆ.

೧೪) ಈ ಜಿಲ್ಲೆಯಲ್ಲಿ ಬಹುಸಂಖ್ಯೆಯಲ್ಲಿರುವ ಕನ್ನಡ ಮತ್ತು ತೆಲುಗು ಶಾಲೆಗಳಲ್ಲಿದ್ದ ಪುಸ್ತಕಗಳು ಧಾರ್ಮಿಕವಾಗಿರಲಿ, ಹಾಸ್ಯ ಪ್ರಧಾನವಾಗಿರಲಿ, ಇಲ್ಲವೆ ಭಾಷಾ ವಿಜ್ಞಾನದವು ಆಗಿರಲಿ, ಎಲ್ಲವೂ ಪದ್ಯಗಳಲ್ಲಿ ರಚಿತವಾಗಿವೆ; ಸಂಭಾಷಣೆ-ವ್ಯವಹಾರಗಳಲ್ಲಿ ಉಪಯೋಗಿಸುವ ನುಡಿಗಿಂತ ಅವುಗಳಲ್ಲಿದ್ದ ಭಾಷೆ ಭಿನ್ನವಾಗಿದೆ. ಎರಡೂ(ಗ್ರಾಂಥಿಕ ಮತ್ತು ವ್ಯಾವಹಾರಿಕ) ಭಾಷೆಗಳ ವರ್ಣಮಾಲೆ ಒಂದೇ; ಯಾವನೊಬ್ಬ ಎರಡನ್ನೂ ಓದಬಹುದು; ಆದರೆ, ಒಂದನ್ನು ಅರಿತವನು ಮತ್ತೊಂದನ್ನು ಅರಿಯಲಾರ. ಆದ್ದರಿಂದ ಇಲ್ಲಿಯ ಜನರು ತಮಗೆ ತಿಳಿಯದಿದ್ದ ಭಾಷೆಯಲ್ಲಿ ಬರೆದ ಪುಸ್ತಕಗಳನ್ನು ಕಲಿಯಬೇಕಾಗುತ್ತದೆ. ಆದರೂ, ಸಾಮಾನ್ಯ ಲಿಪಿ ಇದ್ದದ್ದರಿಂದ, ಪತ್ರಗಳನ್ನು ಓದಲು ಮತ್ತು ವ್ಯವಹಾರದಲ್ಲಿ ಉಪಯೋಗಿಸಲು ಶಕ್ಯವಾಗುತ್ತದೆ. ಪುಸ್ತಕಗಳಲ್ಲಿದ್ದ ಗದ್ಯ-ಪದ್ಯಗಳ ಭಾಷೆ, ಮಾತಾಡುವ ಭಾಷೆಗಿಂತ ಭಿನ್ನವಾದರೂ ಅದನ್ನು ಓದಲು ಕಲಿಯುತ್ತಾರೆ; ಓದಿದರೂ ಅದನ್ನು ತಿಳಿದುಕೊಳ್ಳುವದಕ್ಕಿಂತ ಸ್ವರೋಚ್ಚಾರದ ಸಲುವಾಗಿ ಶ್ರಮಿಸುತ್ತಾರೆ. ವಾಸ್ತವಿಕವಾಗಿ, ಕೆಲವೇ ಶಿಕ್ಷಕರು ಗ್ರಂಥಗಳ ಅರ್ಥ ಹೇಳಬಲ್ಲರು; ಅವರಿಗಿಂತ ಕಡಿಮೆ ಸಂಖ್ಯೆಯಲ್ಲಿದ್ದ ವಿದ್ಯಾರ್ಥಿಗಳು ತಿಳಕೊಳ್ಳಬಲ್ಲರು; ಆದರೆ, ಎಲ್ಲರೂ ನೆನಪಿನಿಂದ ಬಾಯಿಪಾಠ ಒಪ್ಪಿಸಬಲ್ಲರು. ಪ್ರತಿ ಒಬ್ಬ ವಿದ್ಯಾರ್ಥಿಗೆ ಬಹಳಷ್ಟು ಕವಿತೆಗಳನ್ನು ಪದಾನುಪದವಾಗಿ ಬಾಯಿಪಾಠ ಹೇಳಲು ಬರುತ್ತದೆ; ಆದರೆ, ಕೆಲವೇ ಶಬ್ದಗಳನ್ನು ಉಚ್ಚರಿಸಲು ಕಲಿಸಿದ ಗಿಳಿಗಿಂತ ಹೆಚ್ಚಾಗಿ ಇವರಿಗೆ ಅವುಗಳ ಅರ್ಥ ಅರಿವಾಗುವದಿಲ್ಲ! ಹೀಗಾಗಿ, ಬಹಳ ಕಾಲ ಕಷ್ಟಪಟ್ಟು, ಅಭ್ಯಾಸದಲ್ಲಿ ನಿರತರಾಗಿ ಕಲಿತದ್ದು ನಿರರ್ಥಕವಾಗುತ್ತದೆ. ಕೇವಲ ಸ್ಮರಣಶಕ್ತಿ ಬೆಳೆಸಿ, ಅವರು ನಿತ್ಯೋಪಯೋಗಿ ವ್ಯವಹಾರಕ್ಕೆ ಬೇಕಾಗುವ ಓದುಬರಹ ಮಾಡಬಲ್ಲರು; ತಮ್ಮ ಜ್ಞಾನಸಂಚಯಕ್ಕೆ ಎಳ್ಳಷ್ಟೂ ಕೂಡಿಸಿಕೊಳ್ಳಲಾರರು; ಅವರ ಮನಸ್ಸಿನ ಮೇಲೆ ಶಿಕ್ಷಣದ ನೈತಿಕ ಪ್ರಭಾವ ಅಚ್ಚೊತ್ತುವದಿಲ್ಲ. ತಮ್ಮ ತಾರುಣ್ಯವನ್ನು ಅವರು ಕಾಗುಣಿತಗಳನ್ನು ಉಚ್ಚರಿಸುವದರಲ್ಲಿ ಹಾಳುಗೆಡವಿದ್ದಾರೆ; ಶಬ್ದಾರ್ಥ ಕಲಿತಿಲ್ಲ. ಜೀವನಯಾತ್ರೆ ಪ್ರಾರಂಭಿಸಿದಾಗ ನೂರಾರು ಪುಸ್ತಕಗಳನ್ನು ಕಾಣುತ್ತಾರೆ; ಆದರೆ, ಅವುಗಳ ಬಗ್ಗೆ ಕಿಂಚಿತ್ತಾದರೂ ಊಹಾಪೋಹ ಮಾಡಲಾರರು; ಒಂದು ನಾಮಪದದ ವಿಭಕ್ತಿರೂಪವನ್ನೂ ಕ್ರಿಯಾಪದ ಧಾತುರೂಪವನ್ನೂ ನಡೆಸಲು ಶಕ್ತರಲ್ಲ; ಕ್ಲಿಷ್ಟ ಜಾಮಿತಿ ಸೂತ್ರ ಸಿದ್ಧಾಂತಕ್ಕೆ ಅವರ ಧೀಶಕ್ತಿ ತಲುಪಿಲ್ಲ. ಆದ್ದರಿಂದ ಇಲ್ಲಿಯ ವಿದ್ಯಾರ್ಥಿಗಳಿಗೆ ಇಂಥ ಅಪೂರ್ಣ ಶಿಕ್ಷಣದಿಂದ ತಮ್ಮ ಗೆಳೆಯರಿಗೆ ಒಂದು ಸಾಧಾರಣ ಪತ್ರ ಬರೆಯುವಾಗ, ಅಕ್ಷರ ಸಂಯೋಜನೆಯಲ್ಲಿ ತಪ್ಪುಗಳು, ವ್ಯಾಕರಣ ನಿಯಮಗಳಲ್ಲಿ ಪ್ರಮಾದಗಳು ಪ್ರತಿಯೊಂದು ಸಾಲಿನಲ್ಲಿ ಕಂಡುಬರುವವು.

೧೫) ತಿಳಿಯದೆ ಉರುಹಾಕಿದ ಪದ್ಯಗಳ ಬದಲು, ಜನರಾಡುವ ಮಾತಿನಲ್ಲಿ ರಚಿಸಿದ ಸಾಧಾರಣ ಗದ್ಯಪದ್ಯಗಳಲ್ಲಿರುವ ನೀತಿ ಪಾಠಗಳನ್ನು ಮತ್ತು ಸುಲಭ ರಚನೆಗಳನ್ನು ಪೋಷಿಸಿ, ಈ ಜಿಲ್ಲೆಗಳ ಪ್ರಜೆಗಳ ಸುಧಾರಿಸಿದ ಶಿಕ್ಷಣಕ್ಕೆ ಸರಕಾರ ಪ್ರೋತ್ಸಾಹ ನೀಡಬೇಕು. ಆಗ ಓದು ಬಲ್ಲವ, ಓದಿದ್ದರ ಅರ್ಥ ತಿಳಿಯಬಲ್ಲ. ಆದರೆ, ಈಗ ಅಂಥ ಪ್ರಸಂಗ ಕಾಣಸಿಗುವದಿಲ್ಲ. ಶಿಕ್ಷಣದ ತಿದ್ದಿದ ಪದ್ಧತಿಯನ್ನು ಕಾರ್ಯರೂಪಕ್ಕೆ ಇಳಿಸಲು ಸಮರ್ಥರಾದ ಬಹಳಷ್ಟು ಜನರ ಪರಿಚಯ ನನಗಿದೆ; ಮುಖ್ಯ ಪಟ್ಟಣವಿದ್ದ ಪ್ರಾಂತಕ್ಕಿಂತ ದೂರವಿದ್ದ ನಾನು, ತೆಲುಗು ಭಾಷೆಯಲ್ಲಿ ಶಕ್ಯಾನುಸಾರ ಆನಂದದಿಂದ ಇಂಥ ಕೆಲಸದ ಮೇಲ್ವಿಚಾರಣೆ ನಡಿಸಬಲ್ಲೆ.

೧೬) ದೇಶಿ ಶಾಲೆಗಳಲ್ಲಿ ಬರೆಯಲಿಕ್ಕೆ ಕಲಿಸುವ ಪದ್ಧತಿ ಮತ್ತು ಮುಂದರಿದ ವಿದ್ಯಾರ್ಥಿಗಳು ಹಿಂದುಳಿದವರಿಗೆ ಕಲಿಸುವ ಬಗೆ ಮತ್ತು ಅದೇ ಹೊತ್ತಿಗೆ ತಾವೂ ಆ ವಿಷಯದಲ್ಲಿ ನೈಪುಣ್ಯ ಗಳಿಸುವಿಕೆ, ಇವೆಲ್ಲ ಖಂಡಿತವಾಗಿ ಮಿತವ್ಯಯ ಸಾಧಿಸುತ್ತವೆ. ಈ ಪದ್ಧತಿ ಮೆಚ್ಚತಕ್ಕದ್ದಾದ್ದರಿಂದ ಇಂಗ್ಲೆಂಡಿನಲ್ಲಿ ಅನುಕರಿಸಲು ಅರ್ಹತೆ ಪಡೆಯಿತು. ದೇಶಿ ಶಿಕ್ಷಣದಲ್ಲಿರುವ ಮುಖ್ಯ ದೋಷಗಳೆಂದರೆ ಒಳ್ಳೇ ಪುಸ್ತಕಗಳ ಅಭಾವ, ಕಲಿಯುವಿಕೆಯ ಕೆಳಮಟ್ಟ ಮತ್ತು ಸಮರ್ಥ ಶಿಕ್ಷಕರ ಕೊರತೆ.

೧೭) ವರ್ತಮಾನ ಶಿಕ್ಷಣ ಅಪೂರ್ಣವಿದ್ದರೂ ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸುವಷ್ಟು ದ್ರವ್ಯಾನುಕೂಲ ಇದ್ದವರು ವಿರಳ; ತಕ್ಕುದಾದ ಪಠ್ಯ-ಪುಸ್ತಕಗಳು ಯಥೇಷ್ಟ ಸಿಗುತ್ತಿರಲಿ; ಯೋಗ್ಯ ಶಿಕ್ಷಕರು ಲಭ್ಯವಿರಲಿ; ಅವುಗಳ ಲಾಭ ಪಡೆಯುವವರು ಕಡಿಮೆ. ಅದರಂತೆ, ತಮ್ಮ ವಿದ್ಯಾರ್ಥಿಗಳಿಗೆ ಕಲಿಸಿ, ಕೆಳಗಿನ ವರ್ಗದಿಂದ ಮೇಲಿನದಕ್ಕೆ ಸಾಗಿಸುವ ದುಡಿಮೆಗೆ ಯೋಗ್ಯವಾದ ಪ್ರತಿಫಲ ಪಡೆಯುವ ಶಿಕ್ಷಕರೂ ಅಪರೂಪ. ಶಿಕ್ಷಣದ ಮೂಲ ಪಾಠಗಳನ್ನು ಕಲಿಯುವ ವಿದ್ಯಾರ್ಥಿ ತನ್ನ ಶಿಕ್ಷಕನಿಗೆ ತಿಂಗಳಿಗೆ ರೂಪಾಯಿಯ ಕಾಲುಭಾಗ ಸಲ್ಲಿಸುವದು ವಾಡಿಕೆ; ಮತ್ತು ಕಾಗದದ ಮೇಲೆ ಬರೆಯುವಷ್ಟು ಸಾಮರ್ಥ್ಯ ಸಂಪಾದಿಸಿ ನಂತರ ಅಥವಾ ಮೇಲ್ತರಗತಿಯ ಗಣಿತ ಕಲಿಯುವಾಗ, ಅವನು ಪ್ರತಿ ತಿಂಗಳಿಗೆ ಅರ್ಧ ರೂಪಾಯಿ ಕೊಡುವನು. ಆದರೆ, ಮುನ್ನಡೆದು ಪದ್ಯಗಳಲ್ಲೇ ರಚಿತವಾದ ಪುಸ್ತಕಗಳಲ್ಲಿದ್ದದ್ದನ್ನು ವಿವರಿಸಲಿಕ್ಕೆ, ಸಂಸ್ಕೃತ ಶಬ್ದಗಳ ಅರ್ಥ ಹೇಳಲಿಕ್ಕೆ, ದೇಶಿ ಭಾಷೆಗಳ ಸಾಮಾನ್ಯ ನಿಯಮಗಳನ್ನೂ ದೃಷ್ಟಾಂತಗಳನ್ನೂ ತಿಳಿಸಲಿಕ್ಕೆ ಸಲ್ಲಿಸಬೇಕಾಗುವ ಶುಲ್ಕದ ಪ್ರಮಾಣ ಬಹಳಷ್ಟು ಪಾಲಕರ ಅರ್ಥ ಸಾಮರ್ಥ್ಯವನ್ನು ಮೀರುತ್ತದೆ. ಆದ್ದರಿಂದ, ಅರ್ಧಮರ್ಧ ಕಲಿತ ಹುಡುಗರನ್ನು ಮಧ್ಯದಲ್ಲೇ ಬಿಡಿಸದೆ ಗತ್ಯಂತರವಿಲ್ಲ. ಪರಿಣಾಮವಾಗಿ, ಪ್ರಗತಿಪರ ಶಿಕ್ಷಣದಿಂದ ಈ ಬಾಲಕರು ವಂಚಿತರಾಗುತ್ತಾರೆ; ಮತ್ತು ಈಗ ದೊರೆಯುವ ದೋಷಯುಕ್ತ ಶಿಕ್ಷಣ ಪಡೆಯಲಿಕ್ಕೆ ಸಹ ಬಹಳ ಬಾಲಕರಿಗೆ ಶಕ್ಯವಿಲ್ಲದಾಗಿದೆ.

೧೮) ಇಷ್ಟೆಲ್ಲ ಅನರ್ಥಕ್ಕೆ ಕಾರಣವೆಂದರೆ, ದೇಶವು ಕ್ರಮೇಣ ದಾರಿದ್ರ್ಯದತ್ತ ಸಾಗಿದೆಯೆಂದು ಹೇಳಲು ವ್ಯಸವಾಗುತ್ತದೆ. ಇತ್ತಿತ್ತಲಾಗಿ, ಭಾರತೀಯ ಬಟ್ಟೆಗಳ ಬದಲು, ಯುರೋಪದ ಕಾರ್ಖಾನೆಗಳಲ್ಲಿ ತಯಾರಾದ ಅರಿವೆಗಳಿಂದ ಇಲ್ಲಿಯ ಕೈಗಾರಿಕೆಯ (ನೇಕಾರರ) ಸಂಪಾದನೆ ಕ್ಷೀಣಿಸುತ್ತ ನಡೆದಿದೆ. ನಮ್ಮ ಆಡಳಿತಕ್ಕೆ ಒಳಪಟ್ಟ ಪ್ರದೇಶಗಳಿಂದ, ದೂರದಲ್ಲಿದ್ದ ಸಹಾಯಧನ ಪಡೆಯುವ ಮಿತ್ರ ಸಂಸ್ಥಾನಗಳಿಗೆ ತಮ್ಮ ದಂಡುಗಳನ್ನು ಕಳಿಸುವದರಿಂದ, ಅವರಿಗೆ ಪೂರೈಸುತ್ತಿದ್ದ ಕಾಳುಕಡಿಗಳ ಬೇಡಿಕೆ ಇಲ್ಲಿ ಇಲ್ಲದಾಯಿತು; ದೇಶಿ ಸಂಸ್ಥಾನಗಳು ತಮ್ಮ ನೌಕರರ ಮೇಲೆ ಉದಾರ ಹಸ್ತದಿಂದ ವ್ಯಯಿಸುತ್ತಿದ್ದ ಹಣವೆಲ್ಲ ಈಗ ಯುರೋಪಿಯನ್ನರ ಕೈಯಲ್ಲಿ ಬಂದಿದೆ. ಅವರು ಈ ಹಣವನ್ನು ಬಂಡವಳಿನ ರೂಪದಲ್ಲಿ ಭಾರತದಲ್ಲಿ ತೊಡಗಿಸಬಾರದೆಂಬ ನಿರ್ಬಂಧವಿದೆ. ಪರಿಣಾಮವಾಗಿ, ಇಲ್ಲಿಂದ ಹರಿದು ಹೋಗುತ್ತಿರುವ ಹಣದ ಹೊಳೆಯಿಂದ ಆದ ನಷ್ಟವನ್ನು ತುಂಬಿಕೊಡುವ ಬದಲು, ಸರಕಾರವು ಕಡ್ಡಾಯವಾಗಿ ತೆರಿಗೆಯನ್ನು ವಸೂಲಿ ಮಾಡುತ್ತಿದೆ; ರಿಯಾಯತಿ ತೋರಿಸುವದಿಲ್ಲ. ಇಲ್ಲಿಯ ಸರಕಾರಕ್ಕೆ ಸಲ್ಲಬಹುದಾದ ಹಣ(ಯುರೋಪಕ್ಕೆ ಹೋಗುತ್ತಿರುವದರಿಂದ) ಶಿಕ್ಷಣದ ವೆಚ್ಚಕ್ಕೆ ಸಿಗುತ್ತಿಲ್ಲ; ಮೇಲಾಗಿ, ತಮ್ಮ ಅವಶ್ಯಕತೆಗಳನ್ನು ಪೂರೈಸಲು ಬೇಕಾಗುವ ಹಣದ ಕೊರತೆ ನೀಗಿಸಲಿಕ್ಕೆ ಚಿಕ್ಕಮಕ್ಕಳನ್ನು ಸಹ ಸಾಧ್ಯವಾದಷ್ಟು ದುಡಿಸುವ ಪ್ರಸಂಗ ಜನಸಾಮಾನ್ಯರಿಗೆ ಬಂದೊದಗಿದೆ.

೧೯) ಹಿಂದೆ ಅಜಮಾಸ ಹತ್ತು ಲಕ್ಷ ಜನ ಈ ಜಿಲ್ಲೆಯ ಶಾಲೆಗಳಲ್ಲಿ ಕಲಿಯುತ್ತಿದ್ದರೆಂದು ನಮ್ಮ ಸರಕಾರದ ಗಮನಕ್ಕೆ ಬಂದಿರಬೇಕು; ಈಗ ಆ ಸಂಖ್ಯೆ ೭,೦೦೦ಕ್ಕೆ ಇಳಿದಿದೆ; ಈ ಪ್ರಮಾಣ ನಾನು ಮೇಲೆ ತೋರಿಸಿದ ಪರಿಣಾಮಕ್ಕೆ ಪುಷ್ಟಿಕೊಡುತ್ತದೆ. ಈ ಮೊದಲು ಶಾಲೆಗಳಿದ್ದ ಬಹಳ ಹಳ್ಳಿಗಳಲ್ಲಿ ಸದ್ಯ ಶಾಲೆಗಳಿಲ್ಲ; ದೊಡ್ಡ ಶಾಲೆಗಳಿದ್ದಲ್ಲಿ, ಈಗ ಅತಿ ಶ್ರೀಮಂತರ ಕೆಲವೇ ಮಕ್ಕಳು ಮಾತ್ರ ಕಲಿಯುತ್ತಿದ್ದಾರೆ; ಉಳಿದ ಬಾಲಕರು, ಬಡತನದ ಕಾರಣದಿಂದ, ಕೊಡತಕ್ಕ ಶುಲ್ಕ ಕೊಡಲಾರದೆ, ಶಾಲೆಗೆ ಹೋಗುವದಿಲ್ಲ.

೨೦) ಭಾರತದಲ್ಲಿ ರೂಢಿಗೊಂಡಂತೆ, ವಿದ್ಯಾರ್ಥಿಗಳಿಂದ ವೇತನ ಪಡೆಯುವ, ದೇಶಿ ಭಾಷೆಗಳಲ್ಲಿ ಓದು-ಬರಹ-ಗಣಿತ ಕಲಿಸುವ ಈ ಜಿಲ್ಲೆಯ ವಿವಿಧ ಶಾಲೆಗಳ ಶಿಕ್ಷಕರ ಪಾಡು ಈ ತೆರನಾಗಿದೆ. ಈ ದೇಶದಲ್ಲಿ ಉಚ್ಚಸ್ತರದ ಶಿಕ್ಷಣವನ್ನು ಸಂಸ್ಕೃತದಲ್ಲಿಯೇ ಕಲಿಸುತ್ತಿದ್ದರು. ವಿಜ್ಞಾನ ಕಲಿಸುವ ಪ್ರಾಧ್ಯಾಪಕರು ತಮ್ಮ ಜ್ಞಾನವಿತರಣೆಯನ್ನು ಹಣದ ಸಲುವಾಗಿ ವಿನಿಮಯ ಮಾಡಿಕೊಳ್ಳುವದು ವಿಜ್ಞಾನಕ್ಕೆ ಅಗೌರವ ಸಲ್ಲಿಸಿದಂತಾಗುತ್ತದೆ ಎಂದು ನಂಬಿದ್ದರು. ಹಿಂದಿನಂತೆ ಈಗಲೂ ದೇವಧರ್ಮಗಳ ವಿದ್ಯೆ, ಖಗೋಳಶಾಸ್ತ್ರ, ತರ್ಕ, ಕಾಯಿದೆ(ಸ್ಮೃತಿ)ಗಳನ್ನು ಕೆಲವೇ ಬ್ರಾಹ್ಮಣ ಪಂಡಿತರು ಪುಕ್ಕಟೆಯಾಗಿ ತಮ್ಮ ಶಿಷ್ಯರಿಗೆ ಕಲಿಸುವ ಪರಿಪಾಠ ಮುಂದರಿಸಿಕೊಂಡಿದ್ದಾರೆ. ಆದರೆ, ವಿದ್ಯೆ ತನ್ನ ಭಂಡಾರವನ್ನು ಮಾರಲು ಅಭಿಮಾನದಿಂದ ನಿರಾಕರಿಸಿದರೂ ಕೂಡ, ಆಡಳಿತ ವರ್ಗದ ಉತ್ತೇಜನ-ಒತ್ತಾಸೆಗಳಿಲ್ಲದೆ, ಯಾವ ದೇಶದಲ್ಲಿಯಾದರೂ ಎಂದೂ ಊರ್ಜಿತಗೊಂಡಿಲ್ಲ.

ಮೇಲಾಗಿ, ಹಿಂದೆ ವಿಜ್ಞಾನಕ್ಕೆ ಸಲ್ಲುತ್ತಿದ್ದ ನೈತಿಕ-ಆರ್ಥಿಕ ಬೆಂಬಲ, ಭಾರತದ ಈ ಭಾಗದಲ್ಲಿ ಬಹಳ ಕಾಲದಿಂದ ನಿಂತುಬಿಟ್ಟಿದೆ.

೨೧) ಈ ಜಿಲ್ಲೆಯಲ್ಲಿ ಸದ್ಯಕ್ಕಿರುವ ೫೩೩ ವಿದ್ಯಾಸಂಸ್ಥೆಗಳಲ್ಲಿ ಒಂದೇ ಒಂದು ಸಂಸ್ಥೆ ಸಹ ಸರಕಾರದ ಸಹಾಯಧನ ಪಡೆಯುತ್ತಿಲ್ಲವೆಂದು ಹೇಳಲು ನನಗೆ ನಾಚಿಕೆ ಅನಿಸುತ್ತಿದೆ. ಆದ್ದರಿಂದ, ಗವರ್ನರ್ ಜನರಲ್-ಇನ್-ಕೌನ್ಸಿಲ್ಲದ ಕಡೆಯಿಂದ ಈ ಸ್ವಾರಸ್ಯವುಳ್ಳ ವಿಷಯದ ಬಗ್ಗೆ ಹೊರಡಿಸಿದ ಪ್ರಶ್ನಾವಳಿ ನನಗೆ ವಿಶಿಷ್ಟ ಸಮಾಧಾನ ನೀಡಿದೆ; ಮತ್ತು ಯಥೋಚಿತವಿದ್ದಲ್ಲಿ ಧನಸಹಾಯ ದಯಪಾಲಿಸುವ ಅವರ ಉದಾರ ಆಶ್ವಾಸನೆಯಿಂದ, ಭಾರತದ ಈ ಭಾಗಕ್ಕೆ ಹಿತವಾಗುವದೆಂದೂ ಹೊಸದಾಗಿ ಬರುವ ನಿಧಿಯು ಮೂಲಗುರಿಗೆ (ಶಿಕ್ಷಣಕ್ಕೆ) ಮೀಸಲಾಗುವದೆಂದೂ ನಾನು ನಂಬುತ್ತೇನೆ.

೨೨) ಹಿಂದಿನ ಕಾಲದಲ್ಲಿ, ವಿಶೇಷವಾಗಿ ಹಿಂದೂ ಜನರ ಸರಕಾರಗಳು ವಿದ್ವತ್ತಿಗೆ ಒತ್ತಾಸೆ-ಉತ್ತೇಜನ ಕೊಡುವ ಸಲುವಾಗಿ ಧನ-ಭೂಮಿಗಳನ್ನು ದತ್ತಿ ರೂಪವಾಗಿ ಅನುಗ್ರಹಿಸುತ್ತಿದ್ದವು. ಸದ್ಯಕ್ಕೆ, ನನ್ನ ತಿಜೋರಿಯಿಂದ ಬ್ರಾಹ್ಮಣರಿಗೆ ಸಲ್ಲುವ ಗಣನೀಯ ಧನಸಹಾಯ (ಯುಯೋಮಿಯಾಃ ತಸ್ತೀಕು ?) ಮತ್ತು ಬ್ರಾಹ್ಮಣರು ಅನುಭೋಗಿಸುವ ಬೆಲೆಯುಳ್ಳ ಅನೇಕ ಶ್ರೋತ್ರಿಯ ಹಳ್ಳಿಗಳ, ನಾಲ್ಕಾಂಶ, ಮೂರಾಂಶ, ಅರ್ಧಾಂಶ, ಎರಡು ಮೂರಾಂಶ ಮತ್ತು ಕೆಲವೆಡೆ ಸಂಪೂರ್ಣ ವಾರ್ಷಿಕ ತೀರ್ವೆಗಳನ್ನು ಮೂಲದ (ವಿದ್ಯಾದತ್ತಿಯ) ಜಾಡು ಹಿಡಿದು ಪರಿಶೀಲಿಸಿದರೆ ಗೊತ್ತಾಗಬಹುದು. ವಿದ್ಯಾದೇವಿಗೆ ತನ್ನ ಭಕ್ತರ ಕಡೆಯಿಂದ ಬಾಡಿಗೆ ವಸೂಲ ಮಾಡುವದು ಸರಿಹೋಗುತ್ತಿರಲಿಲ್ಲ; ಆದರೆ, ಯಾವಾಗಲೂ ಸರಕಾರವೇ ಅವಳಿಗೆ ಅತ್ಯುಚ್ಚ ಗೌರವ ಸಲ್ಲಿಸುವದು ತನ್ನ ಕರ್ತವ್ಯವೆಂದು ಭಾವಿಸಲಾಗಿತ್ತು; ಮತ್ತು ಅವಳ ಲಕ್ಷಣಗಳಿಗೆ ಅನುಗುಣವಾಗಿ, ಬೇರೆ ಮೂಲಗಳಿಂದ ದೊರಕಬಹುದಾದ ಸಂಭಾವನೆಯನ್ನು ಸರಕಾರವೇ ಅರ್ಪಿಸುತ್ತಿತ್ತು; ಆದ್ದರಿಂದ, ಹಿಂದಿನ ಸರಕಾರಗಳು ಕೊಟ್ಟ ದತ್ತಿಗಳಲ್ಲಿ ಅನುಚಿತ ಯಾವ ಕರಾರೂ ಇರುತ್ತಿದ್ದಿಲ್ಲ. ಅವು ಒಬ್ಬ ಪವಿತ್ರ ಪುರುಷನಿಗೆ ಇಲ್ಲವೆ ಉದ್ದಾಮ ಪಂಡಿತನಿಗೆ ತನ್ನ ಜೀವನ ಸಾಗಿಸಲಿಕ್ಕೆ ಬೇಕಾಗುವ ಸಹಾಯವೆಂದೂ ಅಥವಾ ಅವನು ಶುಭ ಕೋರುವ ಪ್ರಾರ್ಥನೆಗಳ ಬಗ್ಗೆ ದಕ್ಷಿಣೆ ಎಂದೂ ಬಗೆಯಲಾಗುತ್ತಿತ್ತು. ಯಾವನೊಬ್ಬ ಪಂಡಿತ ಇಲ್ಲವೆ ಧರ್ಮಿಷ್ಠನು ಒಂದು ಅಥವಾ ಅನೇಕ ವಿಜ್ಞಾನ ಸಂಸ್ಥೆಗಳನ್ನು ನಡೆಸಿ, ನಿಶ್ಶುಲ್ಕ ಕಲಿಸಿದರೆ, ಅನುದಾನಗಳಲ್ಲಿ ಸ್ಪಷ್ಟಪಡಿಸದಿದ್ದರೂ ಅವನ್ನು ನಡೆಸಲಿಕ್ಕೆ- ಮುಂದರಿಸಲಿಕ್ಕೆ ಧನಸಹಾಯ ಲಭ್ಯವಿದ್ದದ್ದರಿಂದ, ಅವುಗಳಲ್ಲಿ ಪುಕ್ಕಟೆ ಶಿಕ್ಷಣದ ಪ್ರದಾನವಿತ್ತೆಂದು ಧ್ವನಿತವಾಗುತ್ತದೆ.

೨೩) ಸದ್ಯ ಬಹಳಷ್ಟು ಪ್ರಸಂಗಗಳಲ್ಲಿ, ಇಂಥ ದತ್ತಿಗಳು ವೈಯಕ್ತಿಕವಾಗಿದ್ದರೂ ಬ್ರಿಟಿಷ್ ಸರಕಾರವು ಇವನ್ನು ಉದಾರ ಹಸ್ತದಿಂದ ಮುಂದರಿಸಿಕೊಂಡು ಹೋಗಿದೆ. ಆದರೆ, ಅದು ಈಗಲೂ, ಈ ದತ್ತಿಗಳಲ್ಲಿ ಗರ್ಭಿತವಾದ ಆದರೆ ಸೂಚ್ಯವಾದ (ನಿಶ್ಶುಲ್ಕ ವಿದ್ಯಾದಾನದ) ಕರಾರನ್ನು ಆಚರಣೆಯಲ್ಲಿ ತರಲು ಒತ್ತಾಯ ಪಡಿಸುವದಿಲ್ಲ. ಮೂಲ ದತ್ತಿ

ಪಡೆದವನಿಂದ, ಅವನ ವಂಶಜರಿಗೆ, (ವಿದ್ಯಾದಾನದ ಹೊಣೆ ತಪ್ಪಿಸಿಕೊಂಡರೂ) ದತ್ತಿಯ ತೀರ್ವೆ ಇಳಿದು ಬಂದು ಮುಟ್ಟಿದೆ. ಆದರೆ, ಅದೇ ಪ್ರಮಾಣದಲ್ಲಿ, ಮೂಲ ಪುರುಷನ ಸಾಧನೆ ಮತ್ತು ಪ್ರತಿಭೆಗಳನ್ನು ಅವನ ವಂಶಜರು ಪಡೆದಿಲ್ಲ. ಅವನ ವಿದ್ವತ್ತೆ ಮತ್ತು ಪ್ರಧ್ಯಾಪನ ಕೌಶಲ್ಯ ಈಗಿನ ಸಂತತಿಯಲ್ಲಿ ಕಾಣಸಿಗುವುದಿಲ್ಲ. ಆದ್ದರಿಂದ ದತ್ತಿ-ತೆರಿಗೆಯು ಹಿಂದೆ ರಾಜ್ಯಕ್ಕೆ ಗೌರವ ತಂದು, ವಿದ್ವತ್ತೆಗೆ ಪೋಷಣೆ ನೀಡಿದ್ದರೂ, ಸದ್ಯಕ್ಕೆ ನಮ್ಮ ಆಡಳಿತದಲ್ಲಿ, ಆ ಮಹಾನುಭಾವರ ವಂಶಜರ ಅಜ್ಞಾನವನ್ನು ಸಂರಕ್ಷಿಸುವದಕ್ಕೆ ಮಾತ್ರ ಸಹಾಯ ಮಾಡುತ್ತದೆ. ಅದೇ ಕಾಲಕ್ಕೆ, ವಿಜ್ಞಾನವು ಹಿಂದಿನ ಪ್ರಬಲ ಕೊಡುಗೈ ದೊರೆಗಳನ್ನು ಕಳೆದುಕೊಂಡು, ಸರಕಾರದ ಆಶ್ರಯವಿಲ್ಲದೆ, ಈಗ ದಾನಶೂರ ಪ್ರಭೃತಿಗಳನ್ನು ಯಾಚಿಸಿ, ತನ್ನ ಭಕ್ತರಿಗೆ ಅನಿಶ್ಚಿತ ಊಟ ದೊರಕಿಸುವ ಕಷ್ಟಕ್ಕೀಡಾಗಿದೆ. ಭಾರತದ ಇತಿಹಾಸದಲ್ಲಿ, ಹಿಂದೆಂದೂ ಅಗತ್ಯವಿರುವ ತೀವ್ರ ಸಹಾಯವನ್ನು ಈಗ ವಿಜ್ಞಾನಕ್ಕೆ ಸಲ್ಲಿಸಿದರೆ, ಅದನ್ನು ಅಧೋಗತಿಯಿಂದ ಮೇಲೆತ್ತಿ, ವ್ಯಾಪಕವಾಗಿದ್ದ ಅಜ್ಞಾನವನ್ನು ಕೆಲಮಟ್ಟಿಗೆ ಹೋಗಲಾಡಿಸಿದಂತೆ ಆಗುವದು.

೪

**ಮುಖ್ಯ ಕಲೆಕ್ಟರ ಕ್ಯಾನರಾ, ಹ್ಯಾರಿಸ್ ಇವನು ಬೋರ್ಡ್ ಆಫ್ ರೆವೆನ್ಯೂದವರಿಗೆ ತಾ। ೨೭-೮-೧೮೨೨ಕ್ಕೆ ಬರೆದ ಪ್ರತದೊಳಗಿನ ಅವತರಣಿಕೆಗಳು**

೧) ಕನ್ನಡ ಜಿಲ್ಲೆಯಲ್ಲಿ ಕ್ಲಿಷ್ಟವಾದ ವಿಜ್ಞಾನವನ್ನು ವರ್ಧಿಸುವ ಕಾಲೇಜುಗಳು ಇಲ್ಲ ಮತ್ತು ಸ್ಥಿರವಾದ ಶಾಲೆಗಳು ಇಲ್ಲ; ಅವುಗಳಲ್ಲಿ ಕಲಿಸುವ ಶಿಕ್ಷಕರು ಇಲ್ಲ. ಹಿಂದಿನ ಸರಕಾರಗಳು ಇಂಥ ವಿದ್ಯಾಸಂಸ್ಥೆಗಳಿಗೆ ಯಾವ ರೀತಿಯಲ್ಲೂ ಧನಸಹಾಯ ನೀಡಿದ ಉದಾಹರಣೆಗಳು ಇಲ್ಲ.

೨) ಉಚ್ಚವರ್ಗದ ಬ್ರಾಹ್ಮಣರ ಮಕ್ಕಳ ಶಿಕ್ಷಣವು ಪಟ್ಟಣಗಳಲ್ಲಿ ಮತ್ತು ಹಳ್ಳಿಗಳಲ್ಲಿ ಒಬ್ಬ ಮುಖ್ಯ ಮನುಷ್ಯನ ಮನೆಯಲ್ಲಿ ನಡೆಯುತ್ತಿವೆ. ಅವನು ಒಬ್ಬ ಶಿಕ್ಷಕನನ್ನು ಆರಿಸುತ್ತಾನೆ. ಪ್ರತಿ ಒಬ್ಬ ಬಾಲಕನಿಂದ ಆ ಶಿಕ್ಷಕನು ಸಣ್ಣ ರಕಮನ್ನೂ ವಿಶಿಷ್ಟ ಧಾರ್ಮಿಕ ಪ್ರಸಂಗಗಳಲ್ಲಿ ಬಟ್ಟೆಯನ್ನೂ ಕೊಡುಗೆಯ ರೂಪದಲ್ಲಿ ಪಡೆಯುತ್ತಾನೆ. ಮುಖ್ಯಸ್ಥನ ಗೆಳೆಯರ ಮತ್ತು ಬೇರೆ ಕೆಲವರ ಮಕ್ಕಳೂ ಇದೇ ರೀತಿಯಲ್ಲಿ, ಅದೇ ಮನೆಯಲ್ಲಿ ಕಲಿಯಲು ಬರುತ್ತವೆ. ಅದೇ ಪದ್ಧತಿಯನ್ನು ಅವಲಂಬಿಸಿ, ಮುಸ್ಲಿಂ ಮುಲ್ಲಾ ಹಲಕೆಲವು ಹುಡುಗರಿಗೆ ಕಲಿಸುತ್ತಾನೆ. ಸಂಪೂರ್ಣವಾಗಿ ಇಲ್ಲಿಯದು ಖಾಸಗಿ ಶಿಕ್ಷಣ; ವಿದ್ಯಾರ್ಥಿಗಳಂತೆ, ಶಿಕ್ಷಕನೂ ಕೂಡ, ಆಗಾಗ್ಗೆ ಬದಲಾವಣೆ ಹೊಂದುತ್ತಾನೆ. ಈ ವಿದ್ಯಾಪ್ರದಾನದಲ್ಲಿ, ಸಾರ್ವಜನಿಕ ಶಿಕ್ಷಣಕ್ಕೆ ಸರಿಹೋಗುವ ಇಲ್ಲವೆ ಕಲಿಯುವದರಲ್ಲಿ ಕ್ರಮಬದ್ಧತೆ ಇರುವ ಯಾವ ಚಿನ್ಹವೂ ಕಂಡುಬರುವದಿಲ್ಲ.

ಮಕ್ಕಳಿಗೆ ಓದುಬರಹ ಮತ್ತು ಲೆಕ್ಕ ಕಲಿಸುತ್ತಾರೆ. ಅತ್ಯುಚ್ಚ ವರ್ಗಗಳನ್ನು ಬಿಟ್ಟರೆ, ಪರ್ಶಿಯನ್,

ಹಿಂದವಿ(ಹಿಂದಿಯ ಹಳೇ ಹೆಸರು) ಮತ್ತು ಕನ್ನಡಗಳ ಅಭ್ಯಸನ ಎಂದೂ ಮುಂದರಿಸಲ್ಪಡುವುದಿಲ್ಲ. ವಾಸ್ತವಿಕವಾಗಿ, ಆ ವರ್ಗದವರಲ್ಲಿ, ಅದು ಸಂಪೂರ್ಣವಾಗಿ ಖಾಸಗಿ ಶಿಕ್ಷಣವಾಗಿದ್ದರಿಂದ, ಇಂಥ ಭಾಷೆಗಳನ್ನು ಕಲಿಯುವವರ ಸಂಖ್ಯೆಯನ್ನು ಒಟ್ಟುಗೂಡಿಸಿ ಹೇಳಿದರೆ, ತಪ್ಪುಗಳಾಗದೆ ಇರದು.

೩) ನಿಸ್ಸಂಶಯವಾಗಿ, ಶಿಕ್ಷಣವು ಕನ್ನಡ ಜಿಲ್ಲೆಯಲ್ಲಿ, ಅತಿ ಕೆಳಗಿನ ಮಟ್ಟಕ್ಕೆ ಇಳಿದಿದೆ. ಈ ಭಾಗದ ಬ್ರಾಹ್ಮಣರಲ್ಲಿ, ಕೊಂಕಣಿ ಮತ್ತು ಶೇಣ್ವಿಗಳಲ್ಲಿ ಮತ್ತು ಪೂರ್ವೋಕ್ತರ ಎರಡನೇ ದರ್ಜೆಯವರಲ್ಲಿ ಕೊಟ್ಟ ಅಲ್ಪ ಶಿಕ್ಷಣವು ಹದ್ದುಬಸ್ತಿಗೆ ಒಳಗಾಗಿದೆ. ಸಾಧಾರಣವಾಗಿ ಹೇಳಬೇಕಾದರೆ, ಅರ್ಧದಷ್ಟು ಬೇಸಾಯಗಾರರಲ್ಲಿ ರೂಢಿಯಲ್ಲಿದ್ದ ಶಿಕ್ಷಣದ ಪ್ರಕಾರಗಳು ನನಗೆ ಗೊತ್ತಿಲ್ಲ; ಅವು ಸದ್ಯ ಬಳಕೆಯಲ್ಲಿ ಇಲ್ಲ; ಅಥವಾ ಸರಿಯಾಗಿ ಹೇಳುವದಾದರೆ, ಎಂದೂ ಬಳಕೆಯಲ್ಲಿ ಇದ್ದಿಲ್ಲ!

೬) ನಾನು ಕ್ಯಾನರಾಕ್ಕೆ ಬಂದ ಮೇಲೆ, ಇಲ್ಲಿಯ ಮೂಲ ಬೇಸಾಯಗಾರರಾದ ಬಂಟರಿಗೆ ತಮ್ಮ ತಮ್ಮ ಸೋದರ ಅಳಿಯಂದಿರನ್ನು ಶಿಕ್ಷಣ ಪಡೆಯಲು ಮಂಗಳೂರಿಗೆ ಕಳಿಸಿರೆಂದು ಮನವೊಲಿಸಲು ಯತ್ನಿಸಿದ್ದೆ; (ಬಂಟರ ವಾರಸದಾರರು ಅವರ ಅಳಿಯಂದಿರು; ಪುತ್ರರಲ್ಲ); ಆದರೆ ಯಶ ಸಿಗಲಿಲ್ಲ. ಲ್ಯಾಟಿನ್ ಮತ್ತು ಪೋರ್ಚುಗೀಜ ಮಾತ್ರ ಕಲಿಸುವ ಒಂದು ಕ್ರೈಸ್ತರ ಶಾಲೆ ಅಲ್ಲಿ ಸ್ಥಾಪಿತವಾಗಿದೆ.

೭) ನಾನು ಇಷ್ಟು ವಿವರ ಕೊಟ್ಟರೂ ಸಹ, ಬೋರ್ಡು ತಮ್ಮ ಪತ್ರದ ಕೂಡ ಕಳಿಸಿದ ಫಾರ್ಮು ತುಂಬಿ ಕಳಿಸಬೇಕೆಂದು ಇಚ್ಛಿಸಿದರೆ, ನಾನು ಸರಕಾರದವರ ಇಚ್ಛೆಯಂತೆ, ವಿವರಗಳನ್ನು ಪಡೆಯಲು ಹವಣಿಸುವೆ. ಆದರೆ, ನಾನು ಕೊಡುವ ನಿವೇದನೆಯಲ್ಲಿ ತಪ್ಪುಗಳು ತುಂಬ ಇರಬಹುದು ಎಂದು ಅರಿಕೆ ಮಾಡಿಕೊಳ್ಳುತ್ತೇನೆ. ಇಲ್ಲಿಯ ಕಲೆಕ್ಟರರ ವಿಶಾಲವಾದ ಅಧೀನ ಜಿಲ್ಲೆಯಲ್ಲಿ ದುಡಿಯುವ ನೌಕರರಲ್ಲಿ, ಫಾರ್ಸಿ ಭಾಷೆ ಬಲ್ಲವನೊಬ್ಬನೇ ಇದ್ದಾನೆ. ಕಲಿತ ಉಳಿದವರಲ್ಲಿ ಕೇವಲ ಹಿಂದವಿ(ಹಿಂದಿಯ ಹಳೇ ಹೆಸರು) ಮತ್ತು ಕನ್ನಡ ಮಾತ್ರ ಕೆಲವರಿಗೆ ಬರುತ್ತದೆ. ಸಂಸ್ಕೃತ ಅಪೂರ್ಣವಾಗಿ ಬಲ್ಲವರೂ ಇದ್ದಾರೆ. ಬ್ರಾಹ್ಮಣರಲ್ಲಿ ಸುಶಿಕ್ಷಿತರು ಕಡಿಮೆ ಪ್ರಮಾಣದಲ್ಲಿದ್ದು ಶಾಸ್ತ್ರಗಳನ್ನು ಓದುತ್ತಾರೆ. ಅವರಲ್ಲಿ ಬಹಳಷ್ಟು ಜನರಿಗೆ ಪುರಾತನ ಶಿಲಾಲೇಖ ಓದಲು ಬರುವದಿಲ್ಲ. ಅವು ಹಳೇಗನ್ನಡಕ್ಕಿಂತ ಬೇರೊಂದು ಲಿಪಿಯಲ್ಲಿ ಇವೆಯೆಂದೂ ತಾವು ಕಲಿತದ್ದು ಮಾತ್ರ ಓದಬಲ್ಲೆವೆಂದೂ ಅವರು ಹೇಳುತ್ತಾರೆ.

ಟಿ.ಹ್ಯಾರಿಸ್, ಮುಖ್ಯ ಕಲೆಕ್ಟರ
ಮಂಗಳೂರು, ತಾ।೨೭ನೇ ಆಗಸ್ಟ, ೧೮೨೨.

೫

ಶ್ರೀ ಗಡಿಯಾರಂ ರಾಮಕೃಷ್ಣಶರ್ಮಾ, ವಯಸ್ಸು ೮೨ ಅಲಂಪೂರ, ಮಹಬೂಬನಗರ ಜಿಲ್ಲೆ, ಆಂಧ್ರ ಪ್ರದೇಶ.

ಇವರು ನನ್ನ ವಿನಂತಿ ಮೇರೆಗೆ ತಾವು ಕಲಿತ ಗುರುಕುಲ ಮಾದರಿಯ ಶಿಕ್ಷಣದ ಕುರಿತು ಕೆಲವು ಇಣುಕು ನೋಟಗಳನ್ನು ಪೂರೈಸಿದ್ದಾರೆ. ಈ ಬಗ್ಗೆ ನಾನು ಅವರಿಗೆ ಋಣಿ.

"ನಾನು ವಿದ್ಯಾಭ್ಯಾಸ ಮಾಡಿದ್ದು 'ಬಿರಿವಾಡ' ಅಗ್ರಹಾರದಲ್ಲಿದ್ದ ಬ್ರಹ್ಮಶ್ರೀ ವೇಲೂರಿ ಶಿವರಾಮಶಾಸ್ತ್ರಿ ಗುರುಚರಣ ಸನ್ನಿಧಿಯಲ್ಲಿ. ಅವರೇ ಅನ್ನ ವಸ್ತ್ರಗಳನ್ನಿತ್ತು ವಿದ್ಯೆಯನ್ನು ಹೇಳಿಕೊಡಲಾಗಿ ಕಲಿತೆನು. ಗುರುಕುಲ ಅಂದರೆ ಗುರುವಿನ ಮನೆ. ಗುರುಶಿಷ್ಯ ಸಮದಾಯ ಎಂಬ ಅರ್ಥವಿದೆ. ಹಾಗೆಯೇ 'ದೇವಕುಲಮು' ಅಂದರೆ ಕನ್ನಡದಲ್ಲಿ ದೇವಾಲಯ ಎಂದು ಆಗುತ್ತದೆ. ಅಲ್ಲಿ ನಾನು ಮೂರು ವರ್ಷಗಳ ಕಾಲ ಅಭ್ಯಾಸ ಮಾಡಿದೆ. ಅವರ ಬೋಧನಾಶಕ್ತಿ, ನನ್ನ ಗ್ರಹಣಶಕ್ತಿಯಿಂದಾಗಿ ಕಾವ್ಯ, ನಾಟಕಾಲಂಕಾರ, ವ್ಯಾಕರಣಗಳನ್ನು ಸುಲಭವಾಗಿ ಅಭ್ಯಸಿಸಿದೆ. ಇದಲ್ಲದೆ, ಸ್ವಯಂ ಹತ್ತು ವರ್ಷಗಳ ಕಾಲ ಗ್ರಂಥಗಳನ್ನು ಪಠಿಸಿದೆ. ನಾನು ಗುರುದಕ್ಷಿಣೆಯನ್ನೇನೂ ಕೊಡಲಿಲ್ಲ. ನನ್ನ ಗುರುಗಳು ಶ್ರೀಮಂತರು, ನಿರಪೇಕ್ಷಿಗಳು.

ವೇದಪಾಠಕ್ರಮವು ವಿದ್ಯಾರ್ಥಿಗಳ ಸ್ಮರಣಶಕ್ತಿಯನ್ನು ಬೆಳೆಸುವಂಥದ್ದು. ಗುರುವಾದವನು ವೇದವನ್ನಾಗಲಿ, ಶಾಸ್ತ್ರಗಳನ್ನಾಗಲಿ, ಒಂದು ವಾರ ಕಾಲ, ಪುಸ್ತಕವಿಲ್ಲದಂತೆ ಬಾಯಿಂದ ವಿದ್ಯಾರ್ಥಿಗಳಿಗೆ ಹೇಳಿಕೊಟ್ಟು ಹೇಳಿಸುತ್ತಿದ್ದನು. ಆದ್ದರಿಂದ ಹೇಳಿದಷ್ಟು ಬಾಯಿಗೆ ಬರುತ್ತಿತ್ತು. ಇದನ್ನೇ 'ಸಂತ' ಅನ್ನುತ್ತಾರೆ. ಒಂದು ವಾರಕಾಲ 'ಸಂತ'ವನ್ನು ಹೇಳಿದ ಮೇಲೆ ಪುಸ್ತಕವನ್ನು ನೋಡಿ 'ಅಂತವರಸೆ'ಯಲ್ಲಿ ಹೇಳಬೇಕು. ಕೆಲವು ಕಾಲದ ವೇಳೆಗೆ ಅದು ಕಂಠಸ್ಥವಾಗುವದು. ಈ ವಿಧದಲ್ಲಿ ವೇದಗಳು ಕಂಠಸ್ಥವಾಗುವವು ಅವುಗಳನ್ನು ನಿರಂತರ ಪುನರುಚ್ಚರಿಸುವದರಿಂದ ಮರೆಯದೆ ಹಾಗೇ ನಿಲ್ಲುವದು. ಬ್ರಹ್ಮಚರ್ಯ ವ್ರತಪಾಲನೆಯು ಸಹ ಧಾರಣಾ ಶಕ್ತಿಯನ್ನು ವೃದ್ಧಿಮಾಡುತ್ತದೆ. ಯೋಗಾಭ್ಯಾಸವು ವಿದ್ಯಾಭ್ಯಾಸದಲ್ಲಿಯ ಒಂದು ಭಾಗವಲ್ಲ; ಇರಬೇಕೆಂಬ ನಿರ್ಬಂಧವೇನೂ ಇಲ್ಲ. ಆದರೂ ಬ್ರಹ್ಮಚಾರಿಯು ಯೋಗಾಂಗಗಳಾದ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನಗಳನ್ನು ಅಭ್ಯಸಿಸಿ, ಅನುಷ್ಠಾನ ಮಾಡಬೇಕು. ಪ್ರಾಣಾಯಾಮವಿಲ್ಲದ ಸಂಧ್ಯಾವಂದನೆಯೇ ಇಲ್ಲ. ಕೆಲವರಿಗೆ, ಮಲ್ಲವಿದ್ಯೆ, ಸೂರ್ಯನಮಸ್ಕಾರ, ಅಶ್ವಕ್ರೀಡೆ, ಗಜಕ್ರೀಡೆ, ಆಯುಧಗಳ ಬಳಕೆ, ಅಂಗ ಮರ್ದನಾದಿಗಳನ್ನು ಅಭ್ಯಾಸ ಮಾಡಿಸಲಾಗುತ್ತಿತ್ತು.

ಬಾಲಕರಿಗೆ ಐದನೆಯ ವರ್ಷದಲ್ಲಿ ಒಂದು ಫಲಕದ ಮೇಲೆ ಅಕ್ಷರಾಭ್ಯಾಸವಿಧಿಯನ್ನು ನಡೆಯಿಸುತ್ತಿದ್ದರು. ವಿದ್ಯಾಶಾಲೆಯಲ್ಲಿ ಮೊದಲಿಗೆ ಮರಳಿನಲ್ಲಿ ಅಕ್ಷರಗಳನ್ನು ತಿದ್ದಿಸುತ್ತಿದ್ದರು. ಕೆಲವೊಮ್ಮೆ ಒಂದು ಮರದ ಹಲಗೆಯ ಮೇಲಾಗಲೀ, ಶಿಲೆಯ ಮೇಲಾಗಲೀ, ಅಕ್ಷರಗಳನ್ನು ಕೊರೆದು, ಆ ಕೊರಕಲಿನಲ್ಲಿ, ಬಾಲಕರು ಬೆರಳು ಹಾಕಿ, ತಿದ್ದುವ ಅಭ್ಯಾಸವೂ ಇತ್ತು. ಅವುಗಳನ್ನು 'ಗುಂಟ ಓ ನಾಮಲು' ಅಂದರೆ 'ಹಳ್ಳದ ಓ ನಾಮಗಳು' ಎಂದು ಕರೆಯುತ್ತಿದ್ದರು.

ಆ ಕಾಲದ ಬರಹದ ಸಾಮಗ್ರಿಗಳು ಹಲವಾರು. ತಾಳಪತ್ರ, ಭೂರ್ಜಪತ್ರ, ಬಟ್ಟೆಯಿಂದ ಮಾಡಿದ ಕಡಿತ, ಲೋಹಫಲಕ ಇವುಗಳೇ ಮೊದಲಾದವು. 'ವೀದಿಬಡಿ' ಅಂದರೆ ನಮ್ಮಲ್ಲಿಯ ಕೂಲಿಮಠ. ಶಾಲೆಯ ಉಪಾಧ್ಯಾಯನು ಮರಳಿನಲ್ಲಿ ಅಕ್ಷರಗಳನ್ನು ತಿದ್ದಿಸುತ್ತಿದ್ದನು. ಇದು ಎಳೆಯ ಹುಡುಗರಿಗೆ ಮಾತ್ರ. ಅಕ್ಷರಗಳು, ಕಾಗುಣಿತಗಳು ಬಂದನಂತರ, ಅವರಿಗೆ ಓಲೆಗರಿಯ ಮೇಲೆ ಬರೆದ ಬಾಲರಾಮಾಯಣ, ದೈವ ಸ್ತೋತ್ರಗಳು, ಲೆಕ್ಕಗಳಿಗೆ ಸಂಬಂಧಿಸಿದ ಸೂತ್ರಗಳು, ಮೊದಲಾದವುಗಳನ್ನೇ ಓದಿಸುತ್ತಿದ್ದರು. ಹಾಗೆಯೇ ಅವರಿಂದ ಬರೆಯಿಸುತ್ತಿದ್ದರು ಕೂಡ. ವಿದ್ಯಾರ್ಥಿಗಳು ಓದಿನೊಂದಿಗೆ ಬರಹವನ್ನು ಕಲಿಯುತ್ತಿದ್ದರು. ಮರಳಿನ ಮೇಲೆ ಬೆರಳಿನಿಂದ, ತಾಳಪತ್ರದ ಮೇಲೆ ಕಂಟ ಮತ್ತು ಕುಂಚಗಳಿಂದ ಬರೆಯುತ್ತಿದ್ದರು.

ಸಣ್ಣ ಹುಡುಗರಿಗೆ ದೊಡ್ಡ ಹುಡಗರು ಕಲಿಸುತ್ತಿದ್ದರು. ವಿದ್ಯಾರ್ಥಿಗಳು ಪ್ರಾರಂಭಕ್ಕೆ ಸೇರಿದ ಕಿರಿಯರಿಗೆ ಕಲಿಸುತ್ತಿದ್ದರು. ಒಂದು ಹಂತಕ್ಕೆ ಒಂದು ಕಾವ್ಯ, ಶಾಸ್ತ್ರ ಪಾಠಗಳನ್ನು ಓದುವವರಿಗೆ ಗುರುವಾದವನು ಹೇಳಿಕೊಡುತ್ತಿದ್ದನು.

ವಿದ್ಯಾರ್ಥಿಗಳು ಬೆಳಿಗ್ಗೆ ಬೋಧಿಸಿದ ವಿಷಯವನ್ನು ಸಾಯಂಕಾಲ ಗುರುವಿನ ಎದುರು ಕಂಠಪಾಠ ಒಪ್ಪಿಸಬೇಕಾಗಿತ್ತು.

ಆಗಿನ ಶಿಕ್ಷಣ ದಿನಚರ್ಯೆಯ ವಿಧಿಗಳನ್ನು ನಿರ್ಬಂಧವಾಗಿ ಆಚರಿಸಬೇಕಿತ್ತು. ಬ್ರಾಹ್ಮೀ ಮುಹೂರ್ತದಲ್ಲಿ ಎದ್ದು ಯೋಗಾಸನಗಳನ್ನು ಹಾಕುವದು, ಮುಖಪ್ರಕ್ಷಾಳನ, ಸ್ನಾನ ಮಾಡಿದ ನಂತರ ಜಪಾನುಷ್ಠಾನಾದಿಗಳು, ವಿದ್ಯಾಭ್ಯಾಸ, ಭೋಜನ, ಗುರು ಶುಶ್ರೂಷೆ, ಮನನ, ಸಾಯಂಸಂಧ್ಯಾದಿಗಳು, ಶ್ರವಣ, ರಾತ್ರಿ ಭೋಜನ, ನಿದ್ರೆ ಇವುಗಳನ್ನು ಕ್ರಮದಂತೆ, ತಪ್ಪದೇ ಪ್ರತಿ ವಿದ್ಯಾರ್ಥಿಯೂ ಆಚರಿಸಬೇಕು.

ಅನಧ್ಯಯನದ ದಿನಗಳು; ಪ್ರತಿಪತ್ (ಪಾಡ್ಯಮಿ), ಅಷ್ಟಮಿ, ಚತುರ್ದಶಿ, ಪೂರ್ಣಿಮೆ, ಅಮವಾಸ್ಯ. ಇವುಗಳಲ್ಲದೆ, ಯಾರಾದರೂ ಪೂಜ್ಯರು, ವಿದ್ಯಾಶೀಲ ಸಂಪನ್ನರಾದವರು ಬಂದು ಹೋದಾಗ ಅನಧ್ಯಯನದ ದಿನಗಳು. ಮೇಘಗಳಿಂದ ಆವೃತವಾಗಿ ಸೂರ್ಯನೇ ಕಾಣದಿರುವಂಥ ದುರ್ದಿನಗಳು ಮತ್ತೆ ಕೆಲವು ನೈಮಿತ್ತಕವಾಗಿದ್ದವು.

ಆಂಧ್ರಪ್ರದೇಶದಲ್ಲಿ ನನ್ನ ಬಾಲ್ಯದವರೆಗೂ 'ವಿಪ್ರವಿನೋದಿ'ಗಳು ಇರುತ್ತಿದ್ದರು. ಅವರು ಬ್ರಾಹ್ಮಣರಲ್ಲ; ವಿಪ್ರರಲ್ಲ. ಅಂತಹವರನ್ನು ನಾನು ನೋಡಿದ್ದೇನೆ. ಅವರ ವಿದ್ಯೆ, ಕೈಚಳಕ (ಮ್ಯಾಜಿಕ್) ಇದನ್ನು 'ಯಕ್ಷಿಣೀವಿದ್ಯೆ' ಅನ್ನುತ್ತಿದ್ದರು.

'ಕುಚಿಪುಡಿ' ಭಾಗವತರು ಅಚ್ಚ ವೆಲನಾಡಿನ ವೈದಿಕ ಬ್ರಾಹ್ಮಣರು. ವೇದಾಧ್ಯಯನ, ತಾಂತ್ರಿಕ ವಿದ್ಯೆಗಳನ್ನು ಅಭ್ಯಸಿಸಿ, ಯಕ್ಷಗಾನ ಪ್ರದರ್ಶನಗಳನ್ನು ನೀಡುತ್ತಿದ್ದರು. ಅವರು ಬಾಲ್ಯದಿಂದಲೇ ಸಂಗೀತ, ನಾಟ್ಯ, ವಾದ್ಯ ಮುಂತಾದ ವಿದ್ಯೆಗಳನ್ನೂ ಅಭಿನಯ-ವೇಷಧಾರಣೆಗಳನ್ನೂ ಕಲಿಯುತ್ತಾರೆ. ಹಿರಿಯರು ಕಿರಿಯರಿಗೆ ಶಿಕ್ಷಣ ನೀಡುತ್ತಾರೆ. ಈ ಭಾಗವತರು ಈಗ್ಲೂ ಇದ್ದಾರೆ.

ನಾನು ಗುರುಗೃಹದಲ್ಲಿದ್ದು ಓದಿಕೊಂಡಾಗ, ಬೆಳಿಗ್ಗೆ ಐದು ಗಂಟೆಗೇ ಎದ್ದು, ಸ್ನಾನ

ಸಂಧ್ಯಾನುಷ್ಠಾನಗಳನ್ನು ಮಾಡಿಕೊಂಡು, ಅಷ್ಟರ ಮುನ್ನ ಹೇಳಿಸಿಕೊಂಡ ಪಾಣಿನೀ ಸೂತ್ರಗಳನ್ನು 'ಆವರ್ತಿ'ಯಾಗಿ ಹೇಳಿಕೊಳ್ಳುತ್ತಿದ್ದೆ. ಆ ದಿನ ಗುರುಗಳು ಹೇಳಲಿರುವ ಪಾಠವನ್ನು ವ್ಯಾಖ್ಯಾನದ ನೆರವಿನಿಂದ ಮೊದಲೇ ಓದಿಕೊಳ್ಳುತ್ತಿದ್ದೆ. ಬೆಳಿಗ್ಗೆ ಒಂಬತ್ತು ಗಂಟೆಗೆ ಗುರುಗಳು ಆ ದಿನದ ಕಾವ್ಯ, ಅಲಂಕಾರ, ವ್ಯಾಕರಣ, ನಾಟಕಾದಿ ವಿಷಯಗಳ ಪಾಠವನ್ನೇ ಹೇಳುತ್ತಿದ್ದರು. ನಾವು ತೋಟದಲ್ಲಿ ಮರದ ಕೆಳಗೆ ಕುಳಿತುಕೊಂಡು, ಆ ಹೇಳಿದ ವಿಷಯಗಳನ್ನು ಚಿಂತನೆ ಮಾಡುತ್ತಿದ್ದೆವು. ಅಂದರೆ ಮೆಲುಕುಹಾಕುತ್ತಿದ್ದೆವು. ಊಟದ ನಂತರ, ಮತ್ತೆ ಅದೇ ಚಿಂತನೆ. ಸಾಯಂಕಾಲದ ವೇಳೆಯಲ್ಲಿ ನಮ್ಮ ಸಂದೇಹಗಳನ್ನು ನಮ್ಮ ಗುರುಗಳ ಬಳಿ ಹೇಳಿಸಿಕೊಂಡು ಅವುಗಳನ್ನು ಪರಿಹರಿಸಿಕೊಳ್ಳುತ್ತಿದ್ದೆವು. ಬೇರೆ ಊರಿನ ವಿದ್ಯಾರ್ಥಿಗಳು ಹೊರಗೆ ಹೋಗುತ್ತಿದ್ದರು. ರಾತ್ರಿ ಆಂಧ್ರ ಕಾವ್ಯಗಳ ಪಠಣ. ನಡೆದ ಪಾಠವನ್ನು ನೋಟ್ಸ್ ಮಾಡಿಕೊಳ್ಳುತ್ತಿದ್ದೆ. ಇದು ನನ್ನ ವಿದ್ಯಾಭ್ಯಾಸ ಪದ್ಧತಿಯಾಗಿತ್ತು.

ನನ್ನ ಚಿಕ್ಕಂದಿನಲ್ಲಿ ಕೂಲಿಮಠದಲ್ಲಿ ಮರಳಿನಲ್ಲಿ ಅಕ್ಷರಗಳನ್ನು ತಿದ್ದಿಕೊಳ್ಳುತ್ತಿದ್ದೆನು."

# ಬಳಸಿದ ಗ್ರಂಥಗಳ ಸಂಕ್ಷಿಪ್ತ ಹೆಸರು

| | | |
|---|---|---|
| ಎ.ಇ. | : | ಎಪಿಗ್ರಾಫಿಯ ಇಂಡಿಕ |
| ಎ.ಕ. | : | ಎಪಿಗ್ರಾಫಿಯ ಕರ್ನಾಟಿಕ |
| ಎಸ್.ಐ.ಐ. | : | ಸೌಥ್ ಇಂಡಿಯನ್ ಇನ್ಸ್‌ಕ್ರಿಪ್ಶನ್ಸ್ |
| ಇತ್ಸಿಂಗ್ | : | ಡಾ। ಜೆ. ತಕಾಕುಸು ಸಂಪಾದಿಸಿದ ಇತ್ಸಿಂಗನ ವೃತ್ತಾಂತ |
| ಎಚ್.ಎ.ಎಸ್. | : | ಹೈದರಾಬಾದ್ ಆರ್ಕಿಯಾಲಾಜಿಕಲ್ ಸಿರೀಸ್ |
| ಕೆ.ಐ. | : | ಕರ್ನಾಟಕ್ ಇನ್ಸ್‌ಕ್ರಿಪ್ಶನ್ಸ್ |
| ದತ್ | : | ಡಾ. ಸುಕುಮಾರ್ ದತ್ ಅವರ "ಬುದ್ಧಿಸ್ಟ್ ಮೊಂಕ್ಸ್ ಆ್ಯಂಡ್ ಮೊನ್ಯಾಸ್ಟರೀಸ್ ಆಫ್ ಇಂಡಿಯಾ" |
| ಪ್ರ.ಇ. | : | ಎಚ್.ಎಲ್. ನಾಗೇಗೌಡ ಅವರು ಅನುವಾದಿಸಿದ 'ಪ್ರವಾಸಿ ಕಂಡ ಇಂಡಿಯ'ದ ಸಂಪುಟಗಳು ೧-೭ |
| ಸಿವೆಲ್ | : | ರಾಬರ್ಟ್ ಸಿವೆಲ್ ಅವರ "ಎ ಫಾರ್‌ಗಾಟನ್ ಎಂಪಾಯರ್ ಆಫ್ ವಿಜಯನಗರ್" |
| ಜ್ಞಾ.ಚ. | : | ಪಾಯಣವರ್ಣಿ ವಿರಚಿತ ಜ್ಞಾನಚಂದ್ರ ಚರಿತ |

## Books Referred

1. Altekar, A.S. : Education in Ancient India 3rd Ed., Benares, 1948.
2. Das, Santosh Kumar : The Educational System of Ancient Hindus, Calcutta, 1933.
3. Das-Gupta, Devendra Chandra: Jain System of Education, Calcutta, 1942.
4. Dharmapal : The Beautiful Tree, Indian Education in the Eighteenth Century, Delhi, 1981.
5. Desai, P.B. : Jainism in South India and Some Jain Inscriptions, Solapur, 1958.
6. Dutt, Sukumar : Buddhist Monks and Monasteries of India (Their History and Their contribution to Indian Culture), London, 1962.
7. Fergusson, James : Architecture of Bijapoor, London, 1893.
8. Grey, Edward : Travels of Petro Della Valle, Vol.I & II, London, 1888.
9. Gurumurthy S. : Education in South India, (Ancient and Modern Periods), Madras, 1979.
10. Halappa, G.S. (Ed) : Studies in Education and Culture (Dr.D.C. Pavate Felicitation Volume), Dharwad, 1960.
11. Handiqui, K.K. : Yashastilaka and Indian Culture, Sholapur, 1949.
12. Husain, Mahadi (Ed) : The Rehla of Ibn Batuta, Vadodara, 1953.
13. Kamat, Jyotsna K. : Social Life in Medieval Karnataka, New Delhi, 1980.
14. Kamat, Suryanath U. : Karnataka State Gazeteer, Vol.I & II, Bangalore, 1983.
15. Karnataka through the Ages. Bangalore, 1968.

16. Keay, F.F. : A History of Education in India and Pakistan, 3rd ed., Oxford, 1959.

17. " : Ancient Indian Education. An Inquiry into the origin, Development and Ideals, Oxford, 1918.

18. Law Narendranath : Promotion of learning in India during Muhammedan Rule by Muhammedans, London, 1916.

19. Leela Shanta Kumari, S : The Agraharas in Karnataka, 400-1300, A. Madras, 1986.

20. Manmathanatha Dutt, S : Prose English Translation of Agnipuranam Vol.II, Varanasi, 1967.

21. Nilakanta Sastri, S : A History of South India, 3rd Ed., Oxford, 1966.

22. Nurulla, Syed & Naik J.P.: A Student's History of Education in India (1800-1984), Bombay, 1945.

23. Parulekar, K.V. : Literacy in India of Pre-British Days, Bombay, 1940.

24. Saletore, B.A. : Ancient Karnataka, History of Tuluva, Poona, 1936.

25. Sacho, Edward C. (Ed) : Alberuni's India, Vol.I & II, London, 1914.

26. Sewell, Robert A : A Forgotten Empire of Vijayanagar, 2nd Ed., New Delhi, 1974,

27. Sherwani, H.K. & Joshi, P M : History of Medieval Deccan, Vol.I & II, Hyderabad, 1974.

28. Shiveshwarkar Leela : The Pictures of the Chaurapaanchasikaa, New Delhi 1967.

29. Upadhya, A.N. : Pravachanasara of Kundakundacharya (Trans.), Bombay, 1945.

30. Yazdani, G : Bidar, Its History and Monuments. London, 1947.

31. " : The Early History of the Deccan, Parts I & II, London, 1960.

32. Zuhuruddin, Ahmed : Present Day Problems of Indian Education, Bombay, 1935.

## ಆಧಾರ ಗ್ರಂಥಗಳು

### ಶಾಸನ ಸಂಪುಟಗಳು

೧. ಆಂಧ್ರಪ್ರದೇಶ: ಗವರ್ನಮೆಂಟ್ ಆರ್ಕಿಯಾಲಾಜಿಕಲ್ ಸೀರೀಸ್.

೨. ಆನ್ಯುಅಲ್ ರಿಪೋರ್ಟ್ಸ್ ಆಫ್ ದಿ ಆರ್ಕಿಯಾಲಾಜಿಕಲ್ ಸರ್ವೇ ಆಫ್ ಇಂಡಿಯಾ, ೧೮೮೭ ರಿಂದ-

೩. ಆನ್ಯುಅಲ್ ರಿಪೋರ್ಟ್ ಆಫ್ ಇಂಡಿಯನ್ ಎಪಿಗ್ರಾಫಿ, ೧೯೪೬ರಿಂದ-

೪. ಆನ್ಯುಅಲ್ ರಿಪೋರ್ಟ್ ಆಫ್ ಸೌತ್ ಇಂಡಿಯನ್ ಎಪಿಗ್ರಾಫಿ, ೧೮೪೭ರಿಂದ ೧೯೪೫.

೫. ಎಪಿಗ್ರಾಫಿಯಾ ಕರ್ನಾಟಿಕಾ: ಸಂಪುಟ ೧-೧೬ ಬೆಂಗಳೂರು, ೧೮೯೮ರಿಂದ-

೬. ಎಪಿಗ್ರಾಫಿಯಾ ಇಂಡಿಕಾ, ೧೮೯೨ರಿಂದ-

೭. ಹೈದರಾಬಾದ ಆರ್ಕಿಯಾಲಾಜಿಕಲ್ ಸೀರೀಜ್: ಸಂಪುಟ VIII. ೧೯೧೬.

೮. ಕರ್ನಾಟಕ ಇನ್ಸ್ಕ್ರಿಪ್ಷನ್ಸ್
ಸಂಪುಟ I ರಿಂದ III ಸಂ.: ಆರ್.ಎಸ್. ಪಂಚಮುಖಿ
ಸಂಪುಟ IV ಸಂ.: ಎ.ಎಂ. ಅಣ್ಣಿಗೇರಿ
ಸಂಪುಟ V ಸಂ.: ಬಿ.ಆರ್. ಗೋಪಾಲ, ೧೯೪೧-೬೯.

೧೦. ಸೌತ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್ I ರಿಂದ XX, ಮದ್ರಾಸ, ೧೮೯೦ರಿಂದ-

೧೧. ಶಾಸನ ಸಾಹಿತ್ಯ ಸಂಚಯ: ಸಂಪಾದಕರು: ಅಣ್ಣಿಗೇರಿ ಎ.ಎಂ. ಮತ್ತು ಮೇವುಂಡಿ ಮಲ್ಲಾರಿ, ಧಾರವಾಡ, ೧೯೬೧.

# ಪ್ರಾಕೃತ ಮತ್ತು ಸಂಸ್ಕೃತ ಆಧಾರ ಗ್ರಂಥಗಳು


೧. ಉಪಾಧೆ, ಆ.ನೇ.(ಸಂ) : ಉದ್ಯೋತನ ಸೂರಿಕೃತ: ಕುವಲಯಮಾಲಾ: ಮುಂಬಯಿ, ೧೯೬೯.

೨. ಕಾಳೆ, ಎಂ.ಆರ್. : ದಂಡಿಯ ದಶಕುಮಾರ ಚರಿತ, ಮುಂಬಯಿ, ೧೯೨೬.

೩. ಘಾರಪುರೆ ಜೆ.ಆರ್.: ಸಂಪುಟ ೨೮, ಸ್ಮೃತಿಚಂದ್ರಿಕೆಯ ಅಹ್ನಿಕಾಖಂಡ: ಮುಂಬಯಿ, ೧೯೪೬.

೪. ಜಿನವಿಜಯ (ಸಂ.): ರಾಜಶೇಖರ ಸೂರಿಕೃತ ಪ್ರಬಂಧಕೋಶ, ಶಾಂತಿನಿಕೇತನ, ೧೯೩೫.

೫. ದಲಾಲ ಸಿ.ಡಿ. ಮತ್ತು ಆರ್.ಎ. ಶಾಸ್ತ್ರಿ (ಸಂ.): ರಾಜಶೇಖರನ ಕಾವ್ಯ ಮೀಮಾಂಸಾ, ಬಡೋದೆ, ೧೯೩೪.

೬. ನಾರಾಯಣಸ್ವಾಮಿ ಶಾಸ್ತ್ರಿ ಸು. ಮತ್ತು ರಾಮಶಾಸ್ತ್ರಿ ಆರ್.(ಸಂ.): ಕೆಳದಿ ಬಸವರಾಜ ವಿರಚಿತ ಶಿವತತ್ವರತ್ನಾಕರ. ಸಂಪುಟ I ಮತ್ತು II, ಮೈಸೂರು, ೧೯೬೫, ೧೯೬೯.

೭. ಶಾಸ್ತ್ರಿ, ಮಂಗಲದೇವ (ಸಂ.): ಬಿಲ್ಹಣನ ವಿಕ್ರಮಾಂಕದೇವಚರಿತ ಮಾಹಾಕಾವ್ಯ, ಬನಾರಸ, ೧೯೪೫.

೮. ಶಿವೇಶ್ವರ, ಲೀಲಾ(ಸಂ): ಚೌರಪಂಚಾಶಿಕಾ: ಬಿಲ್ಹಣ ಕೃತ. ನವದೆಹಲಿ, ೧೯೬೭.

೯. ಶ್ರೀಗೋಂದೇಕರ ಜಿ.ಕೆ.(ಸಂ.): ಸೋಮೇಶ್ವರನ ಮಾನಸೋಲ್ಲಾಸ (ಭಾಗ I- II-III) ಬಡೋದೆ, ೧೯೨೫, ೧೯೩೯, ೧೯೬೧.

# ಕನ್ನಡ ವಾಙ್ಮಯ ಸೂಚಿ


ಅಣ್ಣಿಗೇರಿ ಎ.ಎಂ. ಮತ್ತು ಮೇವುಂಡಿ ಮಲ್ಲಾರಿ: ಶಾಸನ ಸಾಹಿತ್ಯ ಸಂಚಯ: ಧಾರವಾಡ: ೧೯೬೧.

ಕಲಬುರ್ಗಿ, ಎಂ. ಎಂ.: ಕನ್ನಡ ಗ್ರಂಥ ಸಂಪಾದನಾ ಶಾಸ್ತ್ರ: ಧಾರವಾಡ, ೧೯೭೨.

ಕುಮಾರವ್ಯಾಸ: ಕರ್ಣಾಟ ಭಾರತ ಕಥಾಮಂಜರಿ: ಕ.ವಿ.ಸ. ಪ್ರಕಟಣೆ: ಬೆಂಗಳೂರು, ೧೯೮೫.

ಕರ್ನಾಟ ಭಾರತಿ: (ಡಾ। ಫ.ಗು. ಹಳಕಟ್ಟಿ, ಜನ್ಮಶತಮಾನೋತ್ಸವ ವಿಶೇಷಾಂಕ), ಕ.ವಿ. ಧಾರವಾಡ, ಆಗಷ್ಟ-ನವೆಂಬರ ೧೯೮೩.

ಕೃಷ್ಣಭಟ್ಟ, ಅಡ್ಯನಡ್ಕ: (ಸಂ.) "ಸುದರ್ಶನ": ಡಾ। ತೊನ್ಸೆ ಮಾಧವ ಅನಂತ ಪೈ ಅಭಿನಂದನ ಗ್ರಂಥ, ಮುಲ್ಕಿ, ೧೯೭೭.

ಕೃಷ್ಣರಾವ, ವ್ಹಿ.ಎಸ್. ಮತ್ತು ಚಂದ್ರ ಭಾಗಾದೇವಿ: ಆಧುನಿಕ ಭಾರತದಲ್ಲಿ ನೃತ್ಯಕಲೆ, ಮೈಸೂರು, ೧೯೫೬.

ಗೋವಿಂದ ವೈದ್ಯ: ಕಂಠೀರವ ನರಸರಾಜವಿಜಯಂ: ಸಂ. ಡಾ. ಆರ್. ರಾಮಶಾಸ್ತ್ರಿ, ಮೈಸೂರು, ೧೯೭೧.

ಚಾಮರಸ: ಪ್ರಭುಲಿಂಗಲೀಲೆ: ಕನ್ನಡ ಸಂಸ್ಕೃತಿ ನಿರ್ದೇಶನಾಲಯ: ಬೆಂಗಳೂರು, ೧೯೮೫.

ಚಿದಾನಂದಮೂರ್ತಿ, ಎಂ.: ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ, ಮೈಸೂರು, ೧೯೭೨ (ಎರಡನೇ ಆವೃತ್ತಿ).

ಜಾಗೀರದಾರ, ಸೀತಾರಾಮ: ಗ್ರಂಥ ಸಂಪಾದನಾಶಾಸ್ತ್ರ, ಕನ್ನಡ ಸಾಹಿತ್ಯ ಸಂಘ, ಸುರಪುರ, ೧೯೭೮.

ದೀಕ್ಷಿತ್, ಜಿ.ಎಸ್.: ಪ್ರಾಚೀನ ಕರ್ನಾಟಕದ ಶಿಕ್ಷಣಕ್ರಮ, ಧಾರವಾಡ, ೧೯೭೦.

ದೇವೀರಪ್ಪ, ಎಚ್.: ನಂಜುಂಡಕವಿಯ ರಾಮನಾಥ ಚರಿತ, ಭಾಗ ೨ ಮತ್ತು ೩, ಮೈಸೂರು, ೧೯೫೯.

ದೇವೀರಪ್ಪ, ಎಚ್. ಮತ್ತು ಬಸಪ್ಪ ಎಸ್.: (ಸಂ.), ಲಕ್ಕಣ್ಣ ದಂಡೇಶವಿರಚಿತ ಶಿವತತ್ವ ಚಿಂತಾಮಣಿ, ಮೈಸೂರು, ೧೯೬೦.

ಧರ್ಮಾಮೃತಂ, ಗದ್ಯಾನುವಾದ, ಕೆ. ವೆಂಕಟರಾಮಪ್ಪ, ಬೆಂಗಳೂರು, ೧೯೭೭.

ನರಸಿಂಹಾಚಾರ್, ಡಿ.ಎಲ್.: ಕನ್ನಡ ಗ್ರಂಥ ಸಂಪಾದನೆ, ಮೈಸೂರು, ೧೯೭೦.

ನಾಗರಾಜಯ್ಯ, ಹಂ.ಪ.: ತಿರುಮಲಾಚಾರ್ಯನ ಚಿಕ್ಕದೇವರಾಯ ವಂಶಾವಳಿ, ಬೆಂಗಳೂರು, ೧೯೭೭.

ನಾಗೇಗೌಡ, ಎಚ್.ಎಲ್.: ಪ್ರವಾಸಿ ಕಂಡ ಇಂಡಿಯ, ಸಂಪುಟಗಳು ೧ ರಿಂದ ೭, ಮೈಸೂರು, ೧೯೫೯ ರಿಂದ ೧೯೮೨.

ಪಂಪ: ಪಂಪಭಾರತ ಅಥವಾ ವಿಕ್ರಮಾರ್ಜುನವಿಜಯಂ, ಮೈಸೂರು, ೧೯೭೭.

ಪಂಪ: ಆದಿಪುರಾಣಂ, ಗದ್ಯಾನುವಾದ, ಕೆ.ಎಲ್. ನರಸಿಂಹಶಾಸ್ತ್ರಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೭..

ಪುರಾಣಿಕ, ಸಿದ್ದಯ್ಯ: ಮಣಿಹ: ಫ.ಗು. ಹಳಕಟ್ಟಿ ಸಂಸ್ಮರಣ ಸಂಪುಟ, ಬೆಂಗಳೂರು, ೧೯೮೨.

ವೀರಪ್ಪ, ಎನ್.ಎಸ್.: ಭಾರತೀಯ ಶಿಕ್ಷಣದ ಇತಿಹಾಸ, ಕ್ರಿ.ಪೂ.೮೦೦ ರಿಂದ ಕ್ರಿ.ಶ.೧೯೮೪, ಪ್ರಸಾರಾಂಗ, ಮೈಸೂರು, ೧೯೮೫.

ಶಂಕರನಾರಾಯಣರಾವ್, ಎಚ್.ಎಂ.: ಶ್ರೀ ಹರಿಹರ ದೇವಾಲಯ, ಮೈಸೂರು, ೧೯೮೫.

ಶರ್ಮಾ, ತಿ.ತಾ.: (ಸಂ.): ಚಾರಿತ್ರಿಕ ದಾಖಲೆಗಳು, ಬೆಂಗಳೂರು, ೧೯೭೧.

ಶಿವಕೋಟ್ಯಾಚಾರ್ಯ: ವಡ್ಡಾರಾಧನೆ, ಸಂ.:ಡಿ.ಎಲ್. ನರಸಿಂಹಾಚಾರ್, ಮೈಸೂರು, ೧೯೭೦.

ಶೆಟ್ಟಿ, ರಘುಚಂದ್ರ ಟಿ.: (ಸಂ.): ಮಹಾಕವಿ ಪಾಯಣವರ್ಣಿರಚಿತ ಜ್ಞಾನಚಂದ್ರ ಚರಿತೆ, ಜಯಮುದ್ರಣ ಪ್ರಕಟನ, ಮೂಡಬಿದ್ರಿ.

ಶ್ರೀಕಂಠಶಾಸ್ತ್ರಿ, ಎಸ್.: ಭಾರತೀಯ ಸಂಸ್ಕೃತಿ, ಮೈಸೂರು, ೧೯೫೬.

ಸಣ್ಣಯ್ಯ, ಬಿ.ಎಸ್.: ಹರಿಹರ ಕವಿಯ ಗಿರಿಜಾಕಲ್ಯಾಣ ಮಹಾಪ್ರಬಂಧಂ ಗದ್ಯಾನುವಾದ, ಬೆಂಗಳೂರು, ೧೯೭೬.

ಸೋಮೇಶ್ವರಶತಕ, ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೫.

ಹಳಕಟ್ಟಿ, ಫ.ಗು.: ಶಿವಶರಣರ ಚರಿತ್ರೆಗಳು, ಭಾಗಗಳು ೧, ೨ ಮತ್ತು ೩, ಬಿಜಾಪುರ, ೧೯೫೧.

ಹಿರೇಮಠ, ಆರ್.ಸಿ.: ಧಾರವಾಡ, (ಸಂ.): ಕನಕದಾಸರ ಮೋಹನ ತರಂಗಿಣಿ, ಕ.ವಿ.ವಿ. ಧಾರವಾಡ, ೧೯೭೩.

ಹಿರೇಮಠ, ಆರ್.ಸಿ.: (ಸಂ.), ಪದ್ಮಣಾಂಕನ ಪದ್ಮರಾಜ ಪುರಾಣ, ಧಾರವಾಡ, ೧೯೭೧.

ಹಿರೇಮಠ, ಆರ್.ಸಿ.: (ಸಂ.), ಭೀಮಕವಿಯ ಬಸವಪುರಾಣ, ಧಾರವಾಡ, ೧೯೭೧.

ಹಿರೇಮಠ, ಆರ್.ಸಿ. ಮತ್ತು ಸುಂಕಾಪುರ ಎಂ.ಎಸ್.: (ಸಂ.): ರಾಘವಾಂಕನ ಸೋಮನಾಥ ಚಾರಿತ್ರ-ಧಾರವಾಡ, ೧೯೬೭.

# ಅಕಾರಾದಿ

ಕನ್ನಡ ನಾಡಿನ ಶಿಕ್ಷಣ ಪದ್ಧತಿ ನಡೆದು ಬಂದ ದಾರಿ ಅತ್ಯಂತ ವಿಸ್ಮಯಕಾರಿ. ಅದರ ಹೆಜ್ಜೆಗಳನ್ನು ಕ್ರಿಸ್ತಶಕಪೂರ್ವ ಮೂರನೆಯ ಶತಮಾನದಿಂದಲೇ ಗುರುತಿಸಬಹುದಾಗಿದೆ. ಮೊದಲು ಮೌಖಿಕವಾಗಿಯೇ ಮುಂದುವರಿದ ಶಿಕ್ಷಣ, ಭಾಷೆ, ಅಕ್ಷರಗಳ ಉದಯ ಮತ್ತು ಬೆಳವಣಿಗೆಯೊಂದಿಗೆ ಲಿಖಿತ ರೂಪವನ್ನು ತಾಳಿತು. ಮಳಲು, ತಾಳೆಗರಿ, ಕಡತಗಳನ್ನು ಶಿಕ್ಷಣಕ್ಕಾಗಿ ಅಳವಡಿಸಿಕೊಂಡದ್ದರಿಂದ ಅದರ ಪ್ರಸಾರ, ವ್ಯಾಪ್ತಿಗಳು ಸಾಧ್ಯವಾದವು. ಕೇವಲ ಅಕ್ಷರಾಭ್ಯಾಸವನ್ನೇ ಶಿಕ್ಷಣವೆಂದು ಹಿಂದಿನವರು ಪರಿಗಣಿಸಿರಲಿಲ್ಲ. ವ್ಯಕ್ತಿಯ ಹೊಣೆಗಾರಿಕೆಗಳು ವಿದ್ಯಾಮಾಪನದ ಪ್ರಕಾರಗಳಾಗಿದ್ದವು. ಅಂತೆಯೇ ಗುರುಹಿರಿಯರ ಮೂಲಕ ಸಂಘ-ಸಂಸ್ಥೆಗಳು, ಮಠ-ದೇವಾಲಯಗಳು ಅಂಥ ಗಟ್ಟಿಯಾದ ವಿದ್ಯಾದಾನದ ಏರ್ಪಾಡು ಮಾಡಿಕೊಂಡವು. ವಚನಕಾರರು, ಹರಿದಾಸರು, ಕೀರ್ತನಕಾರರು, ಪೌರಾಣಿಕರು ಕೂಡ ಒಳ್ಳೆಯ ಶಿಕ್ಷಕರೆನಿಸಿಕೊಂಡರು...

ಆದರೆ ದುರ್ದೈವದಿಂದ ಬ್ರಿಟಿಷ್ ಆಡಳಿತಗಾರರಿಗೆ ದೇಶಿ ಶಿಕ್ಷಣ ಪದ್ಧತಿಯ ಆಳದ ಅರಿವು ಆಗಲೇ ಇಲ್ಲ. ಅಂತೆಯೇ ಕಟ್ಟಡ, ಪರಿಕರಗಳು, ಸಿಬ್ಬಂದಿ ಮುಂತಾದವುಗಳಿಂದ 'ಸುಸಜ್ಜಿತ'ವಾದ ತಮ್ಮ ಪದ್ಧತಿಯ ಶಿಕ್ಷಣವನ್ನು ಭಾರತೀಯರಿಗೆ ಕೊಡಲು ನಿರ್ಧರಿಸಿದರು.

ಲಾರ್ಡ್ ವಿಲಿಯಂ ಬೆಂಟಿಂಕ್‌ನು ಭಾರತದ ಗವರ್ನರ್ ಜನರಲ್‌ನಾಗಿ ಕ್ರಿ.ಶ.1828ರಲ್ಲಿ ಅಧಿಕಾರ ವಹಿಸಿಕೊಂಡಾಗ ಭಾರತೀಯರಿಗೆ ಪಾಶ್ಚಾತ್ಯ ಶಿಕ್ಷಣ ವ್ಯವಸ್ಥೆಯ ನಾಂದಿಯಾಯಿತು.





ಡಾ. ಜ್ಯೋತ್ಸ್ನಾ ಕಾಮತರ ಈ ಕೃತಿ ಕರ್ನಾಟಕ ಶಿಕ್ಷಣ ಪರಂಪರೆಗೆ ಸಂಬಂಧಿಸಿದ ಏಕೈಕ ಗ್ರಂಥ; ಬ್ರಿಟಿಷರ ಕಾಲದಲ್ಲಿ ರೂಪುಗೊಂಡ ಪಾಶ್ಚಾತ್ಯ ಶಿಕ್ಷಣ ವ್ಯವಸ್ಥೆಗೂ ಮುನ್ನ ನಮ್ಮಲ್ಲಿ ಎಂಥ ಶಿಕ್ಷಣ ಪರಂಪರೆಯಿತ್ತು ಎಂಬುದನ್ನು ಹಲವು ಆಕರಗಳ ಮೂಲಕ ಕೂಲಂಕಷವಾಗಿ ವಿಶ್ಲೇಷಿಸುವ ಅನನ್ಯ ಪ್ರಯತ್ನ. ಹಾಗಾಗಿ ಶಿಕ್ಷಣ ರಂಗದಲ್ಲಿ ಆಸಕ್ತಿಯುಳ್ಳ ವಿದ್ವಾಂಸರಿಗೂ ಶಿಕ್ಷಕರಿಗೂ ಸಾಮಾನ್ಯ ಓದುಗರಿಗೂ ತೀರ ಉಪಯುಕ್ತವಾಗಬಲ್ಲ ಅಪರೂಪದ ಗ್ರಂಥ ಇದು.



ವಿನ್ಯಾಸ: ಅಜಯ

ಶಿಕ್ಷಣ / Education



ISBN 93-83052-60-0

ಬೆಲೆ : ₹ 140




ವಸಂತ ಪ್ರಕಾಶನ
ನಂ. 360, 10ನೇ 'ಬಿ'ಮುಖ್ಯ ರಸ್ತೆ, 3ನೇ ಬ್ಲಾಕ್
ಜಯನಗರ, ಬೆಂಗಳೂರು - 560 011
ದೂರವಾಣಿ: **22443996**
email: info@vasanthaprakashana.com
website : www.vasanthaprakashana.com